# ಕಸ್ತೂರಿ



ಅಕ್ಟೋಬರ್ 1991 ರೂ. 3.00

## ಗುಬ್ಬಿ ವೀರಣ್ಣನವರ ಕಲೆಯ ಕಾಯಕ

## ವೇಗದ ಬದುಕಿನ ಸಂಗಾತಿ




ಸಂಪುಟ: 36 ಸಂಚಿಕೆ: 2 ಅಕ್ಟೋಬರ್ 1991

ವ್ಯವಸ್ಥಾಪಕ ಸಂಪಾದಕ: ಕೆ.ಶಾಮರಾವ್
ಸಂಪಾದಕ: ಆರ್.ಎ.ಉಪಾಧ್ಯ
ನಿರ್ವಹಣೆ: ರವಿ ಬೆಳಗೆರೆ

# ಈ ಸಂಚಿಕೆಯಲ್ಲಿ



ಕಸ್ತೂರಿ ಕಾರ್ಯಾಲಯ ಕೊಪ್ಪೀಕರ ರಸ್ತೆ ಹುಬ್ಬಳ್ಳಿ - 580 020




ಸೆಪ್ಟೆಂಬರ್ ಸಂಚಿಕೆ 'ಸಹಚಿಂತನ' ವಿಭಾಗದಲ್ಲಿ 'ದಿ ಓಲ್ಡ್ ಮ್ಯಾನ್ ಅಂಡ್ ದಿ ಸೀ' ಪುಸ್ತಕದ ಅನುವಾದವನ್ನು 'ಅ.ನ.ಕೃ.' ಅವರು 'ಸೋತು ಗೆದ್ದವನು' ಎಂಬ ಹೆಸರಿನಲ್ಲಿ ಮಾಡಿದ್ದಾರೆಂದು ಎಂ.ಆರ್. ರಾಮಸ್ವಾಮಿ ಬರೆದಿದ್ದಾರೆ. ವಾಸ್ತವವಾಗಿ ಈ ಕೃತಿಯನ್ನು ಅನುವಾದಿಸಿದವರು 'ಪಂಕಜಾ' ಅವರು. ಇದನ್ನು ಬೆಂಗಳೂರಿನ 'ಸ್ಟ್ಯಾಂಡರ್ಡ್ ಬುಕ್ ಡಿಪೊ'ದವರು 1957ರಲ್ಲಿ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿಸಿದ್ದಾರೆ. ಇಂದಿಗೂ ನನ್ನ ಬಳಿ ಇರುವ ಈ ಪುಸ್ತಕದ ಬೆಲೆ ಕೇವಲ ಒಂದು ರೂಪಾಯಿ.

ಕಾರ್ಗಲ್ ಕಾಲೋನಿ ಶ್ರೀಮತಿ ಅನಿತಾ

○

''ಕಳವಳ ಹುಟ್ಟಿಸುವ ಬೆಳ್ಳಿ ಕೂದಲು'' (ಅಗಸ್ಟ 1991) ಓದಿ ಕೂದಲು ಬೆಳ್ಳಗಾಗಲು 'ಮೆಲನಿನ್' ಕಾರಣವೆಂಬ ವಿಷಯ ತಿಳಿಯಿತು. ಆದರೆ ಚರ್ಮದ ಬಣ್ಣಕ್ಕೆ ಮೆಲನಿನ್ ದ್ರವವೇ ಕಾರಣವೆಂದು ವಿಜ್ಞಾನ ಹೇಳುತ್ತದೆ. ಅದರಂತೆ ಕೂದಲು ಬೆಳ್ಳಗಾದಾಗ ಚರ್ಮವೂ ಬೆಳ್ಳಗಾಗಬೇಕಲ್ಲ? ಚರ್ಮ ಬಿಳುಪಾಗಲು ಅಥವಾ ತೊನ್ನುರೋಗ ಬರಲು ಮೆಲನಿನ್ ದ್ರವವೇ ಕಾರಣವಿರಬಹುದೇ?

ಶಿವಣಗಿ ಶ. ಚ. ನಂದಿ

**ಲೇಖಕರ ಸ್ಪಷ್ಟೀಕರಣ**

ಮೆಲನೋಸೈಟ್ಸ್‌ಗಳು ಚರ್ಮ ಹಾಗೂ ಕೂದಲಿನ ಬಣ್ಣವನ್ನು ನಿಯಂತ್ರಿಸುವುದು ಒಂದು ಕ್ರಿಯೆ. ಆದರೆ ಕೂದಲಿನ ಕೋಶದಲ್ಲಿರುವ ಮೆಲನೋಸೈಟ್ಸ್‌ಗಳು ಹಾಗೂ ಚರ್ಮದ ಬುಡದಲ್ಲಿರುವ ಮೆಲನೋಸೈಟ್ಸ್‌ಗಳು ತಮ್ಮ ತಮ್ಮ ಕ್ರಿಯೆಯನ್ನು ಸ್ವತಂತ್ರವಾಗಿ ನಿರ್ವಹಿಸುತ್ತವೆ. ಇವೆರಡಕ್ಕೂ ಸಂಬಂಧವಿಲ್ಲ. ಅಲ್ಲದೆ ವಯಸ್ಸಾದಂತೆ ಬಿಳಿಗೂದಲು ಕಾಣುವುದು ದೇಹದ ಒಂದು ಭೌತಿಕ ಕ್ರಿಯೆ. ಆದರೆ ಚರ್ಮ ಬಿಳಿಯಾಗುವುದು ಭೌತಿಕ ಕ್ರಿಯೆಯಲ್ಲವೆಂದು ವೈಜ್ಞಾನಿಕ ಆಧಾರಗಳು ಬಿಂಬಿಸುತ್ತವೆ. ಚರ್ಮ ಬಿಳಿಯಾಗಲು ಅಥವಾ ತೊನ್ನುರೋಗ ಬರಲು ಮೆಲಿನೋಸೈಟ್ಸ್‌ಗಳ ಸಂಖ್ಯೆ ಹಾಗೂ ಕ್ರಿಯೆ ಮುಖ್ಯ. ತೊನ್ನು ಬರುವುದು ಅಸ್ವಾಭಾವಿಕವಾಗಿರುವುದರಿಂದ ಇದನ್ನು ಬಿಳಿಗೂದಲಿನ ಜೊತೆ ಸಮೀಕರಿಸುವುದು ಸರಿಯಲ್ಲ.

ಹುಬ್ಬಳ್ಳಿ ಡಾ. ಎಚ್. ಹನುಮಂತಪ್ಪ

○

ರವಿ ಬೆಳಗೆರೆಯವರ 'ದೊರೆಯ ಅವಸಾನದ ಸಂಪೂರ್ಣ ವೃತ್ತಾಂತ' (ಸೆ. 1991) ಲೇಖನ ರಾಜೀವ ಗಾಂಧಿಯವರ ಹತ್ಯೆಯ ಹಿನ್ನೆಲೆಯಲ್ಲಿ ಭಾರತ ಹಾಗೂ ಶ್ರೀಲಂಕಾ ರಾಜಕೀಯ ವಿದ್ಯಮಾನಗಳ ಸಾಕಷ್ಟು ಅಜ್ಞಾತ ಮಾಹಿತಿ ಒದಗಿಸಿತು.

L.T.T..E. ರಾಜೀವರ ಹತ್ಯೆಗೈದು ಸಾಧಿಸಿದ್ದಾದರೂ ಏನು? ರಾಜೀವ್ ಅವರು ತನಗೆ ಸಹಾಯ ಹಸ್ತ ನೀಡಿ ಶ್ರೀಲಂಕಾ ಸರಕಾರದ ವಿರುದ್ಧ ಹೋರಾಡಬೇಕೆಂದು L.T.T..E. ಬಯಸಿತ್ತು. ಅದು ಹೇಗೆ ಸಾಧ್ಯ? ಶ್ರೀಲಂಕಾದ ಆಂತರಿಕ ಸಮಸ್ಯೆಯಲ್ಲಿ ಹಸ್ತಕ್ಷೇಪ ಮಾಡಲು ಭಾರತಕ್ಕೆ ಎಳ್ಳಷ್ಟೂ ಹಕ್ಕಿಲ್ಲ. ರಾಜೀವರ Indo-SriLankan Peace Accord ಸಮರ್ಥನೀಯವಾಗಿತ್ತು.

ಲೇಖನದಲ್ಲಿ ನೀಚರು, ದುಷ್ಟರು ಮತ್ತು ರಾಷ್ಟ್ರದ್ರೋಹಿಗಳಾದ L.T.T.E. ಉಗ್ರಗಾಮಿಗಳನ್ನು ಶಿಸ್ತಿನ ಸಿಪಾಯಿಗಳು, ಪ್ರಬಲರು, ಜಾಣರು ಎಂದು ಉಲ್ಲೇಖಿಸಿರುವುದು ನಿಜಕ್ಕೂ ದುರದೃಷ್ಟಕರ. ಇಂಥವರು ಹೊಗಳಿಕೆಗೆ ಅರ್ಹರಲ್ಲ. ಯಾವುದೇ ಸದುದ್ದೇಶದ ಹೋರಾಟಕ್ಕೆ ಲೋಕ ಮೆಚ್ಚುವಂತಹ ಮಾರ್ಗವಿರಬೇಕು. ಇವರನ್ನು ಹೀಗೆಯೇ ಬಿಟ್ಟರೆ ದುಷ್ಕೃತ್ಯಗಳು ಎಲ್ಲೆಮೀರಿ ಭಾರತದ ಶಾಂತಿಗೇ ಭಂಗ ತಂದಾರು.

ನೆರೆಮನೆಗೆ ಬಿದ್ದ ಬೆಂಕಿ ನಮ್ಮ ಮನೆಗೂ ಹಬ್ಬೀತು. ಭಾರತ ಸರ್ಕಾರ ತಕ್ಷಣ ಎಚ್ಚೆತ್ತು ಸೂಕ್ತ ಕ್ರಮ ಕೈಗೊಳ್ಳಲಿ.

**ಬೆಂಗಳೂರು** **ಜಿ. ವಿ. ಪ್ರಭು**

'ದೊರೆಯ ಅವಸಾನ.....'ದ 99ನೇ ಪುಟದಲ್ಲಿ ರಾಜೀವರ ಜನ್ಮದಿನ 1944, ಅಗಸ್ಟ್ 30ರಂದು ಎಂದೂ 102ನೇ ಪುಟದಲ್ಲಿ 1944, ಅಗಸ್ಟ್ 20ರಂದು ಎಂದೂ ಉಲ್ಲೇಖಿಸಲಾಗಿದೆ. ಯಾವುದು ಸರಿ?

**ಮುಂಡಗೋಡ** **ಅರುಣ ಜಿ. ಮಾತಿಬೇಟ**

(1944, ಅಗಸ್ಟ್ 20 ಸರಿ. ಮುದ್ರಣ ದೋಷಕ್ಕೆ ಕ್ಷಮಿಸಿ. - ಸಂ.)

○

ಹಾಲ್ಮುತ್ತೂರು ಶ್ರೀಪತಿರಾವ್ ಅವರ 'ವೈಜ್ಞಾನಿಕ ಪರಿಭಾಷೆಯಲ್ಲಿ ದೇವರು ಇದ್ದಾನೆಯೇ?' (ಸೆ. 1991) ಲೇಖನ ಸೊಗಸಾದ ಸಾರ ಸಂಗ್ರಹ. ಇಷ್ಟೆಲ್ಲ ಹೇಳಿಯೂ ಏನೂ ಹೇಳದಂತಿರುವುದು ಲೇಖನದ ವೈಫಲ್ಯವೇ? ಅಷ್ಟೊಂದು ಪರಾಮರ್ಶನ ಗ್ರಂಥಗಳಿಂದ ಆಯ್ದುಕೊಂಡು ಚೊಕ್ಕವಾಗಿ ಶೇಖರಿಸಿದ್ದರೂ ಲೇಖಕರು ಹಲವಾರು ಮುಖ್ಯ ವಿಷಯಗಳತ್ತ ಗಮನ ಹರಿಸಿಲ್ಲ. ಅವುಗಳಲ್ಲಿ ಮುಖ್ಯವಾದದ್ದು ಜರ್ಮನ್ ಲೇಖಕ ಎರಿಕ್ ವಾನ್ ಡಾನಿಕನ್ (Eric Von Daniken) ಬರೆದ Chariots of the Gods ಈ ಗ್ರಂಥವನ್ನು ('ದೇವರ ರಥಗಳು') ಉಡುಪಿ ಅನಂತೇಶರಾವ್ ಅವರು ಕನ್ನಡಕ್ಕೆ ಅನುವಾದಿಸಿ 'ತುಷಾರ'ದಲ್ಲಿ (1981) ಪ್ರಕಟಿಸಿದ್ದರು.

ಎರಿಕ್ ವಾನ್ ಡಾನಿಕನ್ ವಿಶ್ವದಾದ್ಯಂತ ಸಂಚರಿಸಿ ಪುರಾತತ್ವ ಪುರಾವೆ, ಛಾಯಾಚಿತ್ರ ಸಂಗ್ರಹಿಸಿ, ಅವುಗಳನ್ನು ಕೂಲಂಕಶವಾಗಿ ಅಧ್ಯಯನ ಮಾಡಿ ದೇವರ ಬಗ್ಗೆ ತಮ್ಮ ಹೊಸ ಅನುಮಾನ ಅಥವಾ ಆವಿಷ್ಕಾರವನ್ನು ವೈಜ್ಞಾನಿಕ ಜಗತ್ತಿನ ಮುಂದೆ ಇಟ್ಟಿದ್ದಾರೆ. 'ದೇವರು ಗಗನಯಾನಿಯೇ?' ಎಂಬ ಪ್ರಶ್ನೆಯೊಂದಿಗೆ ಪ್ರಾರಂಭವಾಗುವ ಗ್ರಂಥ ಪ್ರತಿ ಅಧ್ಯಾಯದಲ್ಲಿಯೂ ದೇವರ ಇರುವಿಕೆಯನ್ನು ವೈಜ್ಞಾನಿಕವಾಗಿ ನಿರೂಪಿಸುತ್ತಾ ಅಲ್ಲಲ್ಲೇ ಪರಾಮರ್ಶಿಸುತ್ತಾ ಹೋಗುವಾಗ ಜಗತ್ತಿನ ಎಲ್ಲಾ ಪುರಾಣಗಳ ಸಂಕ್ಷಿಪ್ತ ಅವಲೋಕನವೂ ನಡೆದಿದೆ. ಬೈಬಲ್, ರಾಮಾಯಣ ಮುಂತಾದ ಮಹಾ ಕಾವ್ಯಗಳ ದೃಷ್ಟಾಂತಗಳು ಎಷ್ಟು ಪ್ರಸ್ತುತ ಮತ್ತು ವೈಜ್ಞಾನಿಕವಾಗಿ ನಿಜವಾದವು ಎಂಬುದನ್ನು ಡಾನಿಕನ್ ನಿರೂಪಿಸುತ್ತ ದೇವರುಗಳು ಅಂತರಿಕ್ಷಯಾನಿಗಳು ಎಂಬ ಹೊಸ ಸಿದ್ಧಾಂತವನ್ನು ವೈಜ್ಞಾನಿಕವಾಗಿಯೇ ಮಂಡಿಸಿದ್ದಾರೆ.

ದೇವರ ಸಾಕ್ಷಾತ್ಕಾರಕ್ಕಾಗಿ ಬಹುಶಃ ನಾವೂ ಪುರಾತನರ ಹಾಗೆ ತಪಸ್ಸು ಆಚರಿಸಬೇಕೇನೋ?

**ಚಿತ್ರದುರ್ಗ** **ಬಿದ್ರೆ ಎಸ್. ಮಂಜುನಾಥ**

### ಲೇಖಕರಿಗೆ ಸೂಚನೆ

*ಫುಲ್‌ಸ್ಕೇಪ್ ಹಾಳೆಯ ಒಂದೇ ಮಗ್ಗುಲಿಗೆ ಸ್ಫುಟವಾಗಿ ಬರೆದ ಲೇಖನದೊಂದಿಗೆ ಲೇಖಕರ ಹೆಸರು, ವಿಳಾಸ ಇರುವುದು ಅಗತ್ಯ. ಅನುವಾದ, ರೂಪಾಂತರ, ಸಾಧಾರ ಲೇಖನಗಳಾದರೆ ಮೂಲ ಲೇಖಕ, ಪ್ರಕಾಶಕರ ಹೆಸರು, ವಿಳಾಸ ಮತ್ತು ಅನುಮತಿ ಪತ್ರವನ್ನೂ ಒಳಗೊಂಡಿರಬೇಕು.*

*ಅಸ್ವೀಕೃತ ಲೇಖನದೊಂದಿಗೆ ಅಂಚೆ ಲಕೋಟೆ ಇದ್ದರೆ ಮಾತ್ರ ಹಿಂದಿರುಗಿಸಲಾಗುವುದು. ಸ್ವೀಕೃತಿ ಬಗ್ಗೆ ಒಂದು ತಿಂಗಳಲ್ಲಿ ತಿಳಿಸಿ ಯಥಾವಕಾಶ ಪ್ರಕಟಿಸಲಾಗುತ್ತದೆ. ಪ್ರಕಟಿತ ಬರಹಗಳಿಗೆ ಸೂಕ್ತ ಸಂಭಾವನೆಯುಂಟು.*

*ಕವನ, ಕಿರುಬರಹ, ಸ್ಥಿರಶೀರ್ಷಿಕೆಯ ಲೇಖನಗಳನ್ನು ಹಿಂದಿರುಗಿಸಲು ಸಾಧ್ಯವಿಲ್ಲ. 'ಸಹಚಿಂತನ'ಕ್ಕೆ ಬರೆದ ಪತ್ರಗಳು ಚಿಂತನಾರ್ಹ ಅಂಶವನ್ನೊಳಗೊಂಡಿರುವುದು ಅವಶ್ಯಕ.*

●

### ಚಂದಾದಾರರಿಗೆ ಸೂಚನೆ

*'ಕಸ್ತೂರಿ' ಪ್ರತಿ ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ಐದನೇ ದಿನಾಂಕದೊಳಗೆ ತಲುಪದಿದ್ದರೆ ಚಂದಾದಾರರು ತಮ್ಮ ಅಂಚೆ ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ಸಂಖ್ಯೆ ನಮೂದಿಸಿರಬೇಕು.*

●

### ಚಂದಾ ದರಗಳು

| | | |
|---|---|---|
| *ಬಿಡಿ ಸಂಚಿಕೆ* | ..... | *ರೂ.3-00* |
| *ಒಂದು ವರ್ಷಕ್ಕೆ* | *ಅಂಚೆ ಸೇರಿ* | *ರೂ.34-00* |
| *ಎರಡು ವರ್ಷಕ್ಕೆ* | *ಅಂಚೆ ಸೇರಿ* | *ರೂ.65-00* |
| *ಮೂರು ವರ್ಷಕ್ಕೆ* | *ಅಂಚೆ ಸೇರಿ* | *ರೂ.100-00* |

● ಚಂದ್ರಕಾಂತ ವಡ್ಡು



# ಕಾರು: ವೇಗದ ಬದುಕಿನ ಸಂಗಾತಿ

ಒಂದು ಕಾಲವಿತ್ತು.

ಆಗ ಕುದುರೆ ಎಂದರೆ ಮಾನವನ ಮೂರ ನೆಯ ಕಾಲು. ತನ್ನ ಮೇಲೆ ಇಟ್ಟ ಭರವಸೆಯನ್ನು ಹುಸಿಯಾಗಿಸದಿರಲು ಕುದುರೆ ಓಡಿಯೇ ಓಡಿತು. ಬೆನ್ನ ಮೇಲೆ ಭಾರ ಹೊತ್ತುಕೊಂಡಿತು, ಎದೆಗೆ ತಗುಲಿಸಿದ ರಥವನ್ನು ಎಳೆಯಿತು, ಚಾಟಿಯ ಆದೇಶಗಳನ್ನೆಲ್ಲ ಪಾಲಿಸಿತು, ಕಡಿವಾಣದ ತಾಳಕ್ಕೆ ಅನುಗುಣವಾಗಿ ತಲೆಯಲ್ಲಾಡಿಸಿತು. ಮನುಷ್ಯನ ನಡಿಗೆಯ ಬದುಕಿಗೆ ಓಟದ ಪಾಠಕಲಿಸಿತು.

ಆದರೆ ಅದಕ್ಕೊಂದು ಮಿತಿ ಇತ್ತು. ಆ ಮಿತಿಯ ಪರಿಧಿಯಲ್ಲೇ ವಿಹರಿಸುವಷ್ಟು 'ಅಲ್ಪ ತೃಪ್ತ'ನಾಗಿರಲಿಲ್ಲ ಮಾನವ; ಅಶ್ವದ ಹಂಗಿನರ ಮನೆಯ ಹೊರಗೆ ಕಾಲಿಟ್ಟು ಯಂತ್ರದ ಮೊರೆ ಹೋದ. ಅಶ್ವ ಮರುಮಾತಾಡಲಿಲ್ಲ. ಶತಮಾನಗಳ ಕಾಲದ ತನ್ನ ಸೇವೆಯನ್ನು ಕಡೆಗಣಿಸಿದ ಮಾನವನೆಡೆ ಒಂದೇ ಒಂದು ತಿರಸ್ಕಾರದ ನೋಟವನ್ನೂ ಬೀರಲಿಲ್ಲ. ಹಬೆಯುಗುಳುತ್ತ ಹತ್ತಿರ ಬಂದ ವಾಹನಕ್ಕೆ ಹಾದಿ ಬಿಟ್ಟು ಬದಿಗೆ ಸರಿಯಿತು ಕುದುರೆ. ಕಡಿವಾಣ ಹಿಡಿದ ಅವೇ ಕೈಗಳಿಂದ ಸ್ಟಿಯರಿಂಗ್ ತಿರುವುತ್ತ ಕುದುರೆಯನ್ನು ಹಿಂದೆ ಬಿಟ್ಟು ಸಾಗಿದ ಚಾಲಕ ಕೈ ಬೀಸಿದ. ಸ್ಥಿತಪ್ರಜ್ಞೆ ಕಳೆದುಕೊಳ್ಳದ ಕುದುರೆ ಮಾತಿಲ್ಲದ ಯಾತನೆಯಲ್ಲಿ ಮುದುಡಿ ಕುಳಿತಿತು.

ಕುದುರೆಯ ಸ್ಥಾನಮಾನಕ್ಕೆ ಮುಳುವಾದ ಶೋಧನೆ ಬೆಳಕು ಕಂಡಿದ್ದು ಹದಿನೇಳನೇ ಶತಕದ ಉತ್ತರಾರ್ಧದಲ್ಲಿ. ಹಬೆಯ ಶಕ್ತಿಯನ್ನು ಬಳಸಿ ಕುದುರೆಯನ್ನು ಮೂಲೆಗುಂಪಾಗಿಸುವ ಸಂಚು ರೂಪುಗೊಂಡದ್ದೇ ಆಗ. ಸಂಶೋಧಕರಿಗೆ ಈ ಬಡಪಾಯಿ ಕುದುರ ಅದೇನು ಸವಾಲು ಎಸೆ

ದಿತ್ತೋ ಪಾಪ! ಅಶ್ವಚಾಲಿತ ವಾಹನಗಳಿಗೆ ಬದಲಿ ವ್ಯವಸ್ಥೆ ರೂಪಿಸುವ ಪಣತೊಟ್ಟ ವಿಜ್ಞಾನಿಗಳು ತಮ್ಮ ಛಲ ಸಾಧಿಸಿಯೇಬಿಟ್ಟರು.

1769-70ರ ಸಮಯ. ಫ್ರಾನ್ಸಿನ ಮಿಲಿಟರಿ ಇಂಜಿನಿಯರ್ ನಿಕೊಲಸ್ ಜೊಸೆಫ್ ಕಗ್ನಾಟ್ ಮೊದಲ ಸ್ವಯಂಚಾಲಿತ ರಸ್ತೆ ವಾಹನವನ್ನು ತಯಾರಿಸಿದ. ಉಗಿ ಶಕ್ತಿಯಿಂದ ಚಾಲನೆ ಪಡೆದ ಮೂರು ಗಾಲಿಯ ಈ ಯಂತ್ರವೇ ಕಾರಿನ ತಲಕಾವೇರಿ. 1801-3ರಲ್ಲಿ ಇಂಗ್ಲೆಂಡಿನ ರಿಚರ್ಡ್ ಟ್ರೆವಿತಿಕ್ ಎಂಬುವವ ನಾಲ್ಕು ಚಕ್ರದ ಉಗಿಶಕ್ತಿ ಚಾಲಿತ ಕಾರನ್ನು ಪ್ರದರ್ಶಿಸಿದನಾದರೂ ಆರ್ಥಿಕ ಮುಗ್ಗಟ್ಟು ಆತನ ಕಾರ್ಯ ಮುಂದುವರಿಯಗೊಡಲಿಲ್ಲ. ಯಂತ್ರ ಒದಗಿಸುವ ಸವಲತ್ತಿನ ರುಚಿ ಕಂಡಿದ್ದ ಮಾನವ ಸಂಶೋಧನೆಯಲ್ಲಿ ತಲ್ಲೀನನಾದ. ಹತ್ತು ಹಲವು ಪ್ರಯೋಗಗಳು ನಿರಾಶೆಯ ಪರದೆಯನ್ನು ಹರಿದು ಯಶಸ್ಸಿನ ಲೋಕ ತೆರೆಯಹತ್ತಿದವು. ಕಾರು ಹರಿಯುವ ಹಾದಿಯಯೇನೋ ಕಾಣಿಸಿಕೊಂಡಿತ್ತು. ಆದರೆ ಪ್ರಗತಿಯ ರಸ್ತೆಯುದ್ದಕ್ಕೂ ಸಮಸ್ಯೆಯ ಕಂದಕಗಳು. ಅದಾಗಲೇ ಹಳಿಗಳ ಮೇಲೆ ಯಾತ್ರೆ ಆರಂಭಿಸಿದ್ದ ಉಗಿಬಂಡಿ ತನ್ನೊಂದಿಗೆ ರಸ್ತೆವಾಹನದ ಸ್ಪರ್ಧೆಯನ್ನು ಸಹಿಸಲಿಲ್ಲ. ಅಡ್ಡಗಾಲು ಹಾಕಲು ಶತಪ್ರಯತ್ನ ಮಾಡಿತು. ಆದರೆ ಕೊನೆಗೂ ಕಾರಿನ ಜಿದ್ದೇ ಗೆದ್ದಿತು.

ಹಾದಿ ಸಿಕ್ಕಿತೆಂದು ತನ್ನ ಪಾಡಿಗೆ ತಾನು ಚಲಿಸುವ ವಿವೇಕವನ್ನೂ ತೋರಲಿಲ್ಲ ಕಾರು. ಕಿರುಗುಟ್ಟುವ ಸಪ್ಪಳದೊಂದಿಗೆ ದಾರಿಹೋಕರಿಗೆ ಕಿರಿಕಿರಿ ಉಂಟು ಮಾಡಿತು. ಗಾಳಿ ತುಂಬ ಹೊಗೆ ಉಸುರಿ ತನ್ನ ಅಸಭ್ಯ ವರ್ತನೆಯನ್ನು ಸಾಬೀತು ಪಡಿಸಿತು. ರಸ್ತೆಯಲ್ಲಿಯ ಕುದುರೆಗಳಂತೂ ಕಾರಿನ ಶಬ್ದಕ್ಕೆ ಥರಗುಟ್ಟಿದವು. ಕಾರುಗಳ ಆಟಾಟೋಪವನ್ನು ನಿಯಂತ್ರಿಸದಿದ್ದರೆ ನೆಮ್ಮದಿಗೆ ಉಳಿಗಾಲವಿಲ್ಲವೆಂದು ಭಾವಿಸಿದ ಇಂಗ್ಲೆಂಡಿನ ಸರಕಾರ 1865ರಲ್ಲಿ ಕೆಂಪು ನಿಶಾನೆಯ ಕಾನೂನನ್ನು (Red Flag Law) ಜಾರಿಗೊಳಿಸಿತು. ಈ ಕಾನೂನಿನ ಪ್ರಕಾರ ಯಾವ ಉಗಿ ಕಾರೂ ನಗರದಲ್ಲಿ ಗಂಟೆಗೆ ಎರಡು ಮೈಲಿಗಿಂತ (ಹೊರವಲಯದಲ್ಲಿ ಗಂಟೆಗೆ ನಾಲ್ಕು ಮೈಲಿಗಿಂತ) ವೇಗವಾಗಿ ಚಲಿಸುವಂತಿರಲಿಲ್ಲ. ಅಷ್ಟೇ ಅಲ್ಲ, ಕಾರಿನ ಆಗಮನವನ್ನು ಸಾರಲು ಕೆಂಪು ನಿಶಾನೆಯನ್ನು ಹಿಡಿದ ವ್ಯಕ್ತಿಯೊಬ್ಬ ವಾಹನದ ಮುಂದೆ ನಡೆಯಬೇಕಿತ್ತು!

ಹದಿನೆಂಟನೇ ಶತಕದ ಅಂತ್ಯದಲ್ಲಿ ಅಮೆರಿಕೆ

### ಭಾರತದಲ್ಲಿ ಕಾರು ಉತ್ಪಾದನೆ

| ಕಂಪನಿ | ವಾರ್ಷಿಕ ಉತ್ಪಾದನೆ |
|---|---|
| *1. ಮಾರುತಿ ಉದ್ಯೋಗ ನಿಯಮಿತ* | *100,000* |
| *2. ಹಿಂದುಸ್ತಾನ್ ಮೋಟಾರ್ಸ್* | *30,000* |
| *3. ಪ್ರೀಮಿಯರ್ ಆಟೋಮೊಬೈಲ್ಸ್* | *28,600* |
| *4. ಸಿಪಾನಿ ಆಟೋಮೊಬೈಲ್ಸ್* | *3,000* |
| *5. ಸ್ಟ್ಯಾಂಡರ್ಡ್ ಮೋಟಾರ್ಸ್* | *2,640* |

(1986ರ ಅಂಕಿಅಂಶಗಳು)



## ಮಿನಿಯೇಚರ್ ಕಲೆಯಲ್ಲಿ ಕಾರು

*ಕೆ.ಎಸ್. ರಮಣ್ ಎಂಬ ಬೆಂಗಳೂರಿನ ವೈಮಾನಿಕ ಇಂಜಿನಿಯರ್ ಒಬ್ಬರು ಹಳೆಯ ಕಾರುಗಳ ಮಿನಿಯೇಚರ್ ಮಾದರಿ ತಯಾರಿಸುವುದರಲ್ಲಿ ಸಿದ್ಧಹಸ್ತರು. ಅವರ ಡ್ರಾಯಿಂಗ್ ರೂಮಿನ ತುಂಬ ಪ್ರಸಿದ್ಧ ಕಾರುಗಳ ಪುಟಾಣಿ ಮಾದರಿಗಳ ಸಂತೆಯೇ ನೆರೆದಿರುತ್ತದೆ. ಪೂರ್ಣ ಪ್ರಮಾಣದ ಮೂಲ ಕಾರುಗಳು ಹೊಂದಿದ ಎಲ್ಲ 500ಕ್ಕೂ ಮೀರಿದ ಭಾಗಗಳನ್ನು ಕೈಯಿಂದಲೇ ಪ್ರಮಾಣಬದ್ಧವಾಗಿ ತಯಾರಿಸಿ ಜೋಡಿಸುವುದು ರಮಣ್ ಅವರ ಕುಶಲ ಶೈಲಿ.*

*ನಿತ್ಯ ಎರಡು ಗಂಟೆಗಳನ್ನು ಮಿನಿಯೇಚರ್ ಹವ್ಯಾಸಕ್ಕಾಗಿ ವ್ಯಯಿಸುವ ಈ ಇಂಜಿನಿಯರರ ಸೂಕ್ಷ್ಮ ದೃಷ್ಟಿಯನ್ನು ವಂಚಿಸಿ ಕಾರಿನ ಯಾವ ಚಿಕ್ಕ ಅಂಗವೂ ಉಳಿಯುವುದಿಲ್ಲ. ಮೂಲ ಕಾರುಗಳ ಅಪ್ಪಟ ಪ್ರತಿಕೃತಿ ನಿರ್ಮಿಸುವ ಇವರು ವಿಂಟೇಜ್ ಕಾರುಗಳ ಯಥಾವತ್ ಪುನರ್‌ಸೃಷ್ಟಿಗೈವ ಭಾರತದ ಏಕೈಕ ಮಾಡೆಲರ್ ಆಗಿದ್ದಾರೆ.*

*ರೋಲ್ಸ್‌ರಾಯ್ಸ್ ಕಂಪನಿಯವರು 1907 ರಲ್ಲಿ ತಯಾರಿಸಿದ 'ಸಿಲ್ವರ್‌ಗೋಸ್ಟ್' ರಜತವರ್ಣದ ಏಕೈಕ ಕಾರು. ರಮಣ್ ತಯಾರಿಸಿದ ಈ ಕಾರಿನ ಮಿನಿಯೇಚರ್ ಎಷ್ಟೊಂದು ಆಕರ್ಷಕವಾಗಿತ್ತೆಂದರೆ ರೋಲ್ಸ್‌ರಾಯ್ಸ್ ಕಾರು ತಯಾರಕರೂ ಮೆಚ್ಚುಗೆಯಿಂದ ತಲೆದೂಗಿದರು.*

ಉಗಿಕಾರುಗಳ ತಯಾರಿಕೆಗೆ ಹೆಚ್ಚು ಒಲವು ತೋರಿದಂತೆ ಹಲವಾರು ಕಂಪನಿಗಳು ಉಗಮವಾದವು. ಉಗಿಕಾರುಗಳಲ್ಲಿ ಅನಾನುಕೂಲಗಳಿಗೇನೂ ಕೊರತೆಯಿರಲಿಲ್ಲ. ಬೆಂಕಿ ಹೊತ್ತಿಸಿ ಉಗಿಪಾತ್ರೆಯನ್ನು ಕಾಯಿಸಲು ಸಾಕಷ್ಟು ವೇಳೆ ವ್ಯಯವಾಗುತ್ತಿತ್ತು. ಉಗಿಯಂತ್ರ ಪ್ರಾಯೋಗಿಕ ಅನುಕೂಲಕ್ಕಾಗಿ ಅತಿ ಸಣ್ಣದಿರಬೇಕಿತ್ತು. ಆದರೆ ಯಂತ್ರದ ತಯಾರಿಕೆ ಹಾಗೂ ದೇಖರೇಖಿ ತುಂಬಾ ಖರ್ಚನ್ನು ಬೇಡುತ್ತಿತ್ತು. ಇಷ್ಟೆಲ್ಲ ರಗಳೆಯನ್ನು ಕಟ್ಟಿಕೊಂಡು ಏಗುವ ವ್ಯವಧಾನ ಜನರಿಗಿರಲಿಲ್ಲ. ಕೊನೆಗೂ ಉಗಿಕಾರು ಬಂದಷ್ಟೇ ವೇಗವಾಗಿ ಮಾಯವಾಯ್ತು.

ಕುದುರೆಯನ್ನು ಹಿಂದೆಹಾಕಿ ಬಂದ ಗರ್ವದಲ್ಲಿ ಬೀಗುತ್ತಿದ್ದ ಉಗಿ ಕಾರಿನ ಹಮ್ಮು ಮುರಿದದ್ದು ವಿದ್ಯುತ್ ಕಾರು.

1891ರಲ್ಲಿ ವಿಲಿಯಂ ಮಾರಿಸನ್ ಎಂಬಾತ ಪ್ರಥಮ ವಿದ್ಯುತ್ ಕಾರನ್ನು ನಿರ್ಮಿಸಿದ. ಆರು ಪ್ರಯಾಣಿಕರನ್ನುಹೊತ್ತು ಚಲಿಸಬಲ್ಲ ಈ ಕಾರಿನ ಸೀಟಿನಡಿಯಲ್ಲಿ ಬ್ಯಾಟರಿಗಳನ್ನು ಹುದುಗಿಸಿಡಲಾಗಿತ್ತು. ವಿದ್ಯುತ್‌ಕಾರುಗಳು ತಮ್ಮ ಮೃದುವರ್ತನೆ ಮತ್ತು ಧೂಮರಹಿತ ಸರಳಚಾಲನೆಯಿಂದಾಗಿ ಸಹಜವಾಗಿಯೇ ಜನಪ್ರಿಯವಾದವು. ವಿದ್ಯುತ್ ಬ್ಯಾಟರಿಗಳು ಆಗು ಮಾಡಿದ ಸಾಮರ್ಥ್ಯದ ಬುಡದಲ್ಲಿಯೇ ಬಲಹೀನತೆಯ ಕುರುಹುಗಳೂ ಕಾಣಿಸಿಕೊಂಡವು. ಕಾರಿನ ವೇಗ ಮತ್ತು ದೂರ ಪೂರ್ಣವಾಗಿ ಬ್ಯಾಟರಿಯ ಶಕ್ತಿಯನ್ನೇ ಅವಲಂಬಿಸಿದ್ದರಿಂದ ಈ ಕಾರುಗಳೂ ಮಿತಿಯ ಅಂಕುಶದಿಂದ ಪಾರಾಗಲಿಲ್ಲ. ಕೆಲವು ಕಾರುಗಳು ಗಂಟೆಗೆ 20 ಮೈಲು ವೇಗದಲ್ಲಿ ಓಡಬಲ್ಲವಾಗಿದ್ದರೂ ಪ್ರತಿ 50 ಮೈಲಿಗೊಮ್ಮೆ ಬ್ಯಾಟರಿಯನ್ನು ಚಾರ್ಜ್ ಮಾಡುವ ಅಗತ್ಯವಿತ್ತು. ಸಂಶೋಧಕರು ಅನಿವಾರ್ಯವಾಗಿ ವಿದ್ಯುತ್ ಕಾರಿನ ಮೇಲಿನ ಭರವಸೆ ತ್ಯಜಿಸಿದರು. ವಿದ್ಯುತ್ ಕಾರು ನೇಪಥ್ಯ ಸೇರಿದಕೂಡಲೆ ರಂಗಕ್ಕೆ ಧುಮುಕಿದ್ದು ಈಗಲೂ ಚಾಲ್ತಿಯಲ್ಲಿರುವ ಗ್ಯಾಸೋಲಿನ್ ಕಾರು.

ಅಂತರ್ದಹನ ಇಂಜಿನ್ನಿನ ಅಭಿವೃದ್ಧಿಯೊಂದಿಗೇ ಕಾರು ತಯಾರಿಕೆಯ ಹೊಸ ಯುಗವೊಂದು ಚಿಗಿಯತೊಡಗಿತೆನ್ನಬಹುದು. ವ್ಯಾವಹಾರಿಕವಾಗಿ ಯಶಸ್ಸು ಕಂಡ ಪ್ರಥಮ ಅಂತರ್ದಹನ ಇಂಜಿನ್ನಿನ ಹಕ್ಕನ್ನು (ಪೇಟೆಂಟ್) ಫ್ರಾನ್ಸಿನಲ್ಲಿ ವಾಸಿಸುತ್ತಿದ್ದ ಬೆಲ್ಜಿಯಂ ಸಂಜಾತ ಜೀನ್ ಜೋಸೆಫ್ ಲೀನರ್ ಎಂಬ ತಂತ್ರಜ್ಞ 1860ರಲ್ಲಿ ಪಡೆದ. ಜರ್ಮನ್ನಿನ ಇಂಜಿನಿಯರ್‌ಗಳಾದ ಗಾಟಲಿಬ್ ಡೈಮ್ಲರ್ ಮತ್ತು ಕಾರ್ಲ್‌ಬೆಂಜ್ ಅವರು

1885ರಲ್ಲಿ ನಾಲ್ಕು ಸ್ಟ್ರೋಕಿನ ಅಂತರ್ದಹನ ಇಂಜಿನ್ನನ್ನು ನಿರ್ಮಿಸಿದರು. ಇಂದಿನ ಕಾರುಗಳಲ್ಲಿ ಬಳಸಲ್ಪಡುವ ಇಂಜಿನ್ನಿನ ಮಾದರಿಯ ಮೂಲರೂಪವಿದು. ಯುರೋಪಿನ ಅನೇಕ ಉತ್ಪಾದಕರು ಈ ಅನ್ವೇಷಣೆಯಿಂದ ಉತ್ತೇಜಿತರಾಗಿ ಕಾರು ತಯಾರಿಕೆಯ ಧಂಧೆಯಲ್ಲಿ ತನ್ಮಯರಾದರು. ಆಗಿನ ಬಹುಪಾಲು ಕಾರುಗಳು ಮುಂಭಾಗದಲ್ಲಿ ಯಂತ್ರ ಹೊಂದಿದ್ದು ಹಿಂಬದಿ ಚಕ್ರಚಾಲಿತವಾಗಿದ್ದವು.

ಆಗ ಆರಂಭವಾಯಿತು ಕಾರಿನ ಕುಣಿತ. ತೆವಳುತ್ತ, ತೇಕುತ್ತ, ಕೀಳರಿಮೆಯಿಂದ ಕುಗ್ಗುತ್ತ ರಸ್ತೆಗಿಳಿದ ಕಾರು ಈಗ ತನ್ನೆಲ್ಲ ಡೌಲು-ದರ್ಪ ಮೆರೆಯತೊಡಗಿತು. ಒಂದು ಅರ್ಥದಲ್ಲಿ ತನ್ನ ಆಳ್ವಿಕೆಯನ್ನೇ ಆರಂಭಿಸಿತು. ಯುರೋಪಿನ ತುಂಬೆಲ್ಲ ಕಾರು ತಯಾರಕರ-ಕೊಳ್ಳುಗರ ಭರಾಟೆ. ಕಾರು ಹುಟ್ಟಿ ಬಂದದ್ದು ಯುರೋಪಿನಿಂದಾದರೂ ಅದು ಮೊದಲ ಸಾಮ್ರಾಜ್ಯ ಸ್ಥಾಪಿಸಿದ್ದು ಅಮೆರಿಕೆಯಲ್ಲಿಯೇ. ಹತ್ತೊಂಬತ್ತನೇ ಶತಕದ ಆರಂಭದಲ್ಲಿ ರ್‍ಯಾನ್‌ಸನ್ ಓಲ್ಡ್ಸ್, ಹೆನ್ರಿ ಫೋರ್ಡ್ ಮುಂತಾದ ಉದ್ಯಮಿಗಳು ದೊಡ್ಡ ಪ್ರಮಾಣದಲ್ಲಿ ಕಾರು ತಯಾರಿಸತೊಡಗಿದರು. ಇಂದಂತೂ ಅಮೆರಿಕೆಯನ್ನು 'ಗಾಲಿಗಳ ಮೇಲಿನ ದೇಶ'ವೆಂದೇ ಕರೆಯಲಾಗುತ್ತದೆ.

ಇದು ಕಾರಿನ ಕಾಲ!

ಇಂದು ಕಾರು ಬರಿ ಮನುಷ್ಯನನ್ನು ಹೊತ್ತು ತಿರುಗುವ ಗುಲಾಮನಾಗಿ ಉಳಿದಿಲ್ಲ. ಆಧುನಿಕ ಬದುಕಿನ ಗೂಡಿಗೆ ಬಿಡಿಸಲಾಗದ ಎಳೆಯಾಗಿ ಸೇರಿಹೋಗಿದೆ. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಯ ಪಥದಲ್ಲಿರುವ ರಾಷ್ಟ್ರಗಳ ಆರ್ಥಿಕ ಸಾಮರ್ಥ್ಯದ ಅಳತೆಗೋಲಾಗಿಯೂ ವಾಹನ ತಯಾರಿಕೆಯನ್ನು ಗಣಿಸಲಾಗುತ್ತದೆ

ಜಪಾನು ಮತ್ತು ಅಮೆರಿಕಾ ದೇಶಗಳು ಜಗತ್ತಿನಲ್ಲಿಯೇ ಕಾರು ತಯಾರಿಕೆಯಲ್ಲಿ ಅಗ್ರ ಸ್ಥಾನದಲ್ಲಿವೆ. ಅವೆರಡು ದೇಶಗಳ ನಡುವೆ ಪ್ರಥಮ ಮಾನ್ಯತೆಗಾಗಿ ತುರುಸಿನ ಪೈಪೋಟಿ ನಡೆದಿದೆಯಾದರೂ ಅಮೆರಿಕೆಯದೇ ಸದ್ಯಕ್ಕೆ ಮೇಲುಗೈ. ಈ ಹಿಂದೆ 1980ರಿಂದ 1983ರವರೆಗೆ ಮಾತ್ರ ಜಪಾನು ಅಮೆರಿಕೆಯ ಮೇಲೆ ವಿಕ್ರಮ ಸಾಧಿಸಿತ್ತು. ಜಾಗತಿಕ ಮಟ್ಟದಲ್ಲಿ ಕಾರು ಉತ್ಪಾದನೆಯ ಪಟ್ಟಿಯಲ್ಲಿ ಸ್ಥಾನ ಗಿಟ್ಟಿಸುವ ಇತರ ರಾಷ್ಟ್ರ



ಹೆಣ್ಣುರೂಪಿ ಕಾರು: ಹೆಣ್ಣನ್ನು ಕಾರಿನೊಂದಿಗೆ ಸಮೀಕರಿಸಿ ನಿರ್ಮಿಸಿದ ಹಿತ್ತಾಳೆ ಪಾರಿತೋಷಕ (1897)



ಜಗದ್ವಿಖ್ಯಾತ ಕಲಾವಿದ ಪಿಕಾಸೋನ ಒಂದು ಕಲಾಕೃತಿ 'ಮರಿಯೊಂದಿಗಿನ ಮಂಗ'. ತಲೆಯ ಭಾಗದಲ್ಲಿ ಆಟಿಕೆಯ ಕಾರು.

ಗಳೆಂದರೆ ಜರ್ಮನಿ, ಫ್ರಾನ್ಸ್, ರಶಿಯಾ, ಇಟಲಿ, ಸ್ಪೇನ್. ಕೆನಡಾ, ಇಂಗ್ಲೆಂಡ್. ಪ್ರಪಂಚದಾದ್ಯಂತ ಇಂದು ನಲವತ್ತು ಕೋಟಿಗೂ ಮಿಕ್ಕ ಪ್ರಯಾಣಿಕರ ಕಾರುಗಳು ಹರಿದಾಡುತ್ತಿವೆ.

ಕೆನಡ, ಜಪಾನ್ ಇತ್ಯಾದಿ ಶ್ರೀಮಂತ ರಾಷ್ಟ್ರಗಳ ರಸ್ತೆಗಳಲ್ಲಿ ಕಾರುಗಳು ಮೂತಿಗೆ ಮೂತಿ ಹಚ್ಚಿ (Bumper to bumper) ಸಾಗುತ್ತಿವೆ. ಅಮೆರಿಕನ್ನರ ಜೀವನಾಡಿಯಲ್ಲಿ ಕಾರು ಹೊಂದಿದ ಮಹತ್ವವನ್ನು ಬಿಂಬಿಸಲು ಒಂದು ನುಡಿಗಟ್ಟೇ ಹುಟ್ಟಿಕೊಂಡಿದೆ: 'ಅಮೆರಿಕನ್ನರು ವಾಹನಗಳೊಂದಿಗೆ ಪ್ರೇಮ ವ್ಯವಹಾರ ಹೊಂದಿರುತ್ತಾರಂತೆ!' ಈ ರಾಷ್ಟ್ರದಲ್ಲಿರುವ ಕುಟುಂಬಗಳಿಗಿಂತಲೂ ಕಾರುಗಳ ಸಂಖ್ಯೆಯೇ ಅಧಿಕ ಎಂಬುದು ಅಚ್ಚರಿಯ ಸಂಗತಿಯಾದರೂ ನಂಬಲೇಬೇಕಾದ ಸತ್ಯ.

ಪ್ರಯಾಣಿಕರ ಕಾರು ಆಧುನಿಕ ಬದುಕಿನ ಊರುಗೋಲಾಗಲು ಸಮ್ಮತಿಸುವುದರೊಂದಿಗೆ ಮಾನವನ ಬದುಕಿನ ಶೈಲಿಯನ್ನೇ ಬದಲಿಸಿತೆನ್ನಬೇಕು. ಅದು ದೈನಂದಿನ ಜೀವನದ ಬಹುಪಾಲು ಮಗ್ಗುಲನ್ನು ಪ್ರವೇಶಿಸಿ ತನ್ನ ಪ್ರಾಮುಖ್ಯವನ್ನು ಪ್ರತಿಬಿಂಬಿಸಿತು. ನಗರ ಚೌಕಟ್ಟನ್ನು ಹಿಗ್ಗಿಸಿತು. ಉಪನಗರಗಳು ಬೆಳೆದು ನಿಲ್ಲಲು, ಮೋಟೆಲ್‌ಗಳು ಮೇಲೇಳಲು, ವಾಣಿಜ್ಯ ಸಂಕೀರ್ಣಗಳು ಸಾಲುಗಟ್ಟಲು, ಡ್ರೈವ್ ಇನ್ ಸಿನಿಮಾಮಂದಿರ-ಹೊಟೇಲ್‌ಗಳು ಉದ್ಭವಿಸಲು ಕಾರು ಕಾಣಿಕೆಯಿತ್ತು ಕಾರಣೀಭೂತವಾಯ್ತು. ಹಲವು ದೇಶಗಳ ಅರ್ಥವ್ಯವಸ್ಥೆಯನ್ನು ನಿಯಂತ್ರಿಸುವಷ್ಟು ಪ್ರಾಬಲ್ಯವನ್ನೂ ಸಂಪಾದಿಸಿತು ಕಾರು.

ಕಾರು ಬಹು ಬುದ್ಧಿವಂತ ಯಂತ್ರ. ತನ್ನನ್ನು ಬಳಸುವವರ ಮನದಲ್ಲಿ ಎಂದೂ ಹಳಸಲು ಭಾವನೆ ಬಿತ್ತಲಿಲ್ಲ. ಕಾಲಮಾನದ ಬೇಡಿಕೆಗಳಿಗೆ ತಕ್ಕಂತೆ ತನ್ನ ಬಾಹ್ಯ ಸ್ವರೂಪವನ್ನು ತಿದ್ದಿಕೊಂಡಿತು; ಅಂತಃಸತ್ವವನ್ನು ಹೆಚ್ಚಿಸಿಕೊಂಡಿತು. ಆಧುನಿಕ ಆವಿಷ್ಕಾರದ ಸಕಲ ಸಾಧ್ಯತೆಗಳನ್ನು ತನ್ನದಾಗಿಸಿಕೊಂಡು ಚಿರನೂತನ ಚೆಲುವನ್ನು ಪ್ರದರ್ಶಿಸಲು ಸದಾ ಹೆಣಗುತ್ತದೆ ಕಾರು.

## ಕಾರು ಕಂಪನಿ ತೆತ್ತ ನಷ್ಟ ಪರಿಹಾರ

*ಅಮೆರಿಕದ ಫೋರ್ಡ್ ಕಂಪನಿಯ ಎದುರಿಗೆ ಆಗ ತಾನೆ ಸಿದ್ಧವಾದ ಕಾರೊಂದನ್ನು ಪರೀಕ್ಷಿಸಲು ನಿಲ್ಲಿಸಲಾಗಿತ್ತು. ಶಾಲೆಯಿಂದ ಮನೆಗೆ ಮರಳುತ್ತಿದ್ದ ಬಾಲಕನೊಬ್ಬ ಆ ಕಾರಿನ ಹತ್ತಿರ ಬರುತ್ತಿದ್ದಂತೆಯೇ ಅದು ಸ್ಫೋಟಗೊಂಡು ಬಾಲಕ ಅಂಗ ವಿಕಲನಾದ. ಹುಡುಗನ ಅಪ್ಪ ನ್ಯಾಯಾಲಯದ ಮೆಟ್ಟಲನ್ನೇರಿದ. 'ವಿಶ್ವವ್ಯಾಪಿ ವಹಿವಾಟು ಹೊಂದಿದ ಕಂಪನಿ ಕಾರು ಪರೀಕ್ಷಿಸಲು ಅಗತ್ಯ ವ್ಯವಸ್ಥೆ ಹೊಂದಿರಬೇಕು. ಅಲ್ಲದೆ ಮಾನವನ ಜೀವದೆಡೆ ಉದಾಸೀನ ಬೀರಿದ್ದಕ್ಕೆ ತಕ್ಕ ಬೆಲೆ ತೆರಬೇಕು' ಎಂದಿತು ನ್ಯಾಯಾಲಯ. ಈ ಬಾಲಕನಿಗೆ ಪರಿಹಾರ ಮೊತ್ತವನ್ನೂ ಘೋಷಿಸಿತು. ಅದು ಎಷ್ಟಿರಬಹುದು?*

*ಒಂದು ನೂರಾ ಏಳುವರೆ ಕೋಟಿ ರೂಪಾಯಿಗಳು!*

## ಕಾರು-ಬಾರು

*ಮುಂಬಯಿಯ ಬೀದಿಗಳಲ್ಲಿ ಬೇಸಗೆ ಸಮಯದಲ್ಲಿ ಒಂದು 'ಕಾರು-ಬಾರು' ಕಾಣ ಸಿಗುತ್ತವೆ! ಹಳೆಯ ಮುತ್ತೈದೆಯಂಥ ಕಾರಿಗೆ ಆಧುನಿಕ ಮೇಕಪ್ ಮಾಡಿ ಕಾರು-ಬಾರು ನಡೆಸುವಾತ ಅಜ್ಜಿಯನ್ನು ಆಸರೆಕೊಟ್ಟು ಮೆಲ್ಲಗೆ ನಡೆಸಿಕೊಂಡು ಮಧ್ಯಾಹ್ನ ಇಲ್ಲಿ, ಸಂಜೆ ಅಲ್ಲಿ ಎಂಬಂತೆ ವಾಕ್ ಮಾಡಿಸುತ್ತಾನೆ. ಒಳಗೆ ಸೀಟುಗಳಿಲ್ಲ. ಬಿಯರ್ ಬಾಟಲುಗಳು, ಟಿನ್‌ಗಳು ತುಂಬಿರುವ ಮೂರಡಿ ನಾಲ್ಕಡಿಯ ಒಂದು ಸೆಲ್ಫ್ ಇವೆ. ಪಕ್ಕದಲ್ಲಿ ಒಂದು ಮಿನಿ ಫ್ರಿಜ್ ಇದೆ. ಬಾಗಿಲು ತೆರೆದಿದ್ದು ಅವುಗಳಡಿಯಲ್ಲಿ ಒಂದೂವರೆ ಅಡಿಯ ಪ್ಲಾಟ್‌ಫಾರ್ಮ್. ಅದಕ್ಕೆ ಆಸರೆಯಾಗಿ ನಿಂತ ಸ್ಕೂಲ್ ಡೆಸ್ಕಿನಂಥ ಮಡಚುವ ಟೇಬಲ್ಲುಗಳು. ಈ ಕಾರು-ಬಾರಿನಾತ ತಂಪು ಬಯಸಿ ಬರುವ ಬಿಸಿಮೈಯವರಿಗೆ ನಗುಮುಖದಿಂದ ನೊರೆತುಂಬಿದ ಗ್ಲಾಸು ಕೊಡುತ್ತಲೇ ಹೊಟ್ಟೆ ತುಂಬಿಕೊಳ್ಳುತ್ತಾನೆ.*

ಅಮೆರಿಕೆಯ ಕಾರು ಉದ್ಯಮ ಮತ್ತು ಅದರ ಪೂರಕ ವ್ಯವಹಾರಗಳ ಜಾಲ ಸುಮಾರು ಒಂದೂ ಕಾಲು ಕೋಟಿ ಕಾರ್ಮಿಕರ ಒಡಲಿಗೆ ಊಟ ಊಡುತ್ತಿದೆ. 'ಬಿಗ್ ಥ್ರೀ' ಎಂದೇ ಪ್ರಖ್ಯಾತವಾದ ಅಮೆರಿಕೆಯ ಜನರಲ್ ಮೋಟಾರ್ಸ್ ಕಾರ್ಪೊರೇಶನ್, ಫೋರ್ಡ್ ಮೋಟಾರ್ ಕಂಪನಿ ಮತ್ತು ಕ್ರಿಸ್ಲರ್ ಕಾರ್ಪೊರೇಶನ್ ಕಾರು ಗ್ರಾಹಕರ ಅಭಿರುಚಿಗೆ ತಕ್ಕ ಮಾದರಿಗಳನ್ನು ರಸ್ತೆಗಿಳಿಸಲು ಶ್ರಮಿಸುತ್ತಿವೆ. ಟೊಯೊಟಾ, ನಿಸಾನ್, ಹೊಂಡಾ, ಮಜ್ದ ಇತ್ಯಾದಿ ಜಪಾನಿ ಕಾರು ಕಂಪನಿಗಳು ಜಪಾನಿನ ಚೊಕ್ಕಟ ತಂತ್ರಜ್ಞಾನದ ಮೂಸೆಯಿಂದ ಮುದ್ದು ಕಾರುಗಳನ್ನು ಒಡಮೂಡಿಸುತ್ತಿವೆ. ಜಪಾನಿನ ಕಿರು ರಸ್ತೆಗಳು ಪುಟ್ಟ ಕಾರುಗಳನ್ನೇ ಅಪೇಕ್ಷಿಸುತ್ತವೆ. ಅಲ್ಲದೆ ಬಕಾಸುರನಂತೆ ಇಂಧನವನ್ನು ನುಂಗುವ ಕಾರುಗಳಾದರೆ ಜಪಾನಿಯರಿಗೆ ಅಲರ್ಜಿ. ಪ್ರತಿಯೊಂದು ಹನಿ ಇಂಧನವನ್ನು ಆಮದು ಮಾಡಿಕೊಂಡು ಬಳಸಬೇಕಾದ ಈ ರಾಷ್ಟ್ರದಲ್ಲಿ ಕಂಜೂಸುತನ ಮೂಡುವುದು ಸಹಜವೇ. ಆದರೆ ಅಪಾರ ತಂತ್ರಜ್ಞಾನ, ಕೌಶಲವನ್ನು ತನ್ನೊಡಲಲ್ಲಿ ಹುದುಗಿಸಿಕೊಂಡಿರುವ ಈ ರಾಷ್ಟ್ರ ಜಗತ್ತಿಗೆಲ್ಲ ಬಯಕೆಯ ಕಾರುಗಳನ್ನು ಯಥೇಚ್ಛವಾಗಿ ಪೂರೈಸುತ್ತಿದೆ. ಜರ್ಮನಿಯ ಫೋಕ್ಸ್‌ವ್ಯಾಗನ್, ಫ್ರಾನ್ಸಿನ ಪೀಜಿಯಾಟ್, ಇಟಲಿಯ ಫಿಯೆಟ್ ಕಂಪನಿಗಳು ಸಹ ವರ್ಷಂಪ್ರತಿ ಲಕ್ಷಾಂತರ ಕಾರುಗಳನ್ನು ನಿರ್ಮಿಸುತ್ತಿವೆ.

ಇತರ ದೇಶಗಳೊಂದಿಗೆ ನಿಲ್ಲಿಸಿದರೆ ಭಾರತದ ಕಾರು ಉದ್ಯಮ ಎದೆಯುಬ್ಬಿಸುವಂತಿಲ್ಲ. ಮಧ್ಯಮ ವರ್ಗದವರ ಮನದನ್ನೆಯೆಂದೇ ಮಾರುಕಟ್ಟೆಯನ್ನು ಪ್ರವೇಶಿಸಿದ ಮಾರುತಿ ಕಾರುಗಳು ತಮ್ಮ ಹೊಸ ಬಗೆಯ ಬಾಹ್ಯ ಸ್ವರೂಪ, ತಾಂತ್ರಿಕ ಕುಶಲತೆಯಿಂದ ಹೊಸಗಾಳಿ ಹೊತ್ತು ತಂದವು. ಅದುವರೆಗೂ ಬದಲಾವಣೆ ದಿಕ್ಕಿನಲ್ಲಿ ತಲೆಯಿಟ್ಟು ಮಲಗಿರದಿದ್ದ ಅಂಬಾಸಡರ್,



ಚೀನೀ ಸಂಪ್ರದಾಯದಲ್ಲಿ ವಿಚಿತ್ರ ಆಚರಣೆಯೊಂದಿದೆ. ಅವರು ಸತ್ತ ಮನುಷ್ಯನ ಕಳೇಬರದೊಂದಿಗೆ ಕಾರಿನ ಹೊರಕವಚವನ್ನು ಅಗ್ನಿಗೆ ಆಹುತಿ ನೀಡುತ್ತಾರೆ. ತೀರಿಹೋದವನ ಮುಂದಿನ ಜನ್ಮದಲ್ಲಿ ಕಾರು ಸಹವರ್ತಿಯಾಗಲೆಂಬುದು ಈ ನಂಬಿಕೆಯ ಹಿಂದಿನ ಆಶಯ. ಮೇಲಿನ ಚಿತ್ರದಲ್ಲಿ ಶವಯಾತ್ರೆಯನ್ನು ಕೂಡಿಕೊಳ್ಳಲು ಹೊತ್ತೊಯ್ಯುತ್ತಿರುವ ಕಾರನ್ನು ಕಾಣಬಹುದು.

ಫಿಯಟ್‌ಗಳು ತುಸು ಎಚ್ಚೆತ್ತು ಆಧುನಿಕತೆಯನ್ನು ಅರಗಿಸಿಕೊಳ್ಳಲು ಯತ್ನಿಸಿದವು. 'ಅಂಬಾಸಡರ್ ಕಾರಿನ ಪ್ರತಿಯೊಂದು ಭಾಗವೂ ಶಬ್ದ ಮಾಡುವುದಂತೆ, ಹಾರ್ನ್ ಹೊರತಾಗಿ'. ಈ ಹಾಸ್ಯದ ಮಾತು ತುಸು ಉತ್ಪ್ರೇಕ್ಷೆಯೆನ್ನಿಸಿದರೂ ನಿಜದ ಹನಿಗಳಂತೂ ಅದರಲ್ಲಿ ಬೆರೆತಿವೆ.

ಉತ್ಪಾದನೆ ಒಂದು ಹಂತವಾದರೆ ಕಾರು ಮಾರಾಟ ಜಾಲವಂತೂ ಅಗಾಧ ವ್ಯಾಪ್ತಿಯಲ್ಲಿ ಹರಡಿಕೊಂಡಿರುವಂತಹದು. ಮಾರಾಟ ಮಾಡುವುದರೊಂದಿಗೆ ಉತ್ಪಾದಕರು ಕೈತೊಳೆದುಕೊಳ್ಳುವಂತಿಲ್ಲ. ಕಾರು ಮಾರುವುದು ಭಾಗಶಃ ಕೆಲಸ ಮಾತ್ರ. ಮಾರಾಟಾನಂತರದ ಸೇವೆಯೇ ಹೆಚ್ಚು ಶ್ರಮದಾಯಕವಾದುದು. ಬಹುಪಾಲು ಗ್ರಾಹಕರು ಕಾರು ಕೊಂಡ ನಂತರದ ಸೇವೆಯ ಗುಣಮಟ್ಟ ಗಣಿಸಿಯೇ ಖರೀದಿಗೆ ಕೈಹಚ್ಚುತ್ತಾರೆ. ಅಮೆರಿಕೆಯ ಮೇರಿಲ್ಯಾಂಡಿನಲ್ಲಿ 55 ವರ್ಷಗಳಿಂದ ಕಾರು ಮಾರಾಟದ ವ್ಯವಹಾರದಲ್ಲಿ ತೊಡಗಿಕೊಂಡಿರುವ ಡೀಟ್ಸ್ ವಾರ್‌ಫೀಲ್ಡ್ ಹೇಳು

# ಮಹಾರಾಜರ ಮೋಹದ ಕಾರುಗಳು

ಮಹಾರಾಜರುಗಳ ಕಾಲವೀಗ ನೇಪಥ್ಯ ಸೇರಿಯಾಗಿದೆ. ಆದರೆ ಅವರ ಅಧಿಕಾರ, ದರ್ಪ, ಹವ್ಯಾಸ, ತಿಕ್ಕಲುತನಗಳ ಪಳೆಯುಳಿಕೆಗಳಂತೂ ಇನ್ನೂ ಅಲ್ಲಲ್ಲಿ ಕಾಣಸಿಗುತ್ತವೆ. ದೌಲತ್ತಿನ ದಿನಗಳ ಮಧುರ ಸ್ವಪ್ನದ ನೆನಪಿನಂತೆ ಅನೇಕ ಅಪರೂಪದ ಕಾರುಗಳು ರಾಜವಂಶಸ್ಥರ ಸುಪರ್ದಿಯಲ್ಲಿ ಸುಮ್ಮನೆ ಕುಳಿತಿವೆ. ಮತ್ತೆ ಕೆಲವು ಅಳಿದ ಪ್ರತಿಷ್ಠೆಯ ಮಾಸಲು ರೂಪದಲ್ಲಿ ಮೂದಲಿಸುತ್ತಿವೆ. ಉಳಿದವು ಕಿರೀಟಹೀನ ರಾಜರ ಸಖ್ಯ ತೊರೆದು ಹಣವಂತರ ಬಂಗಲೆಯೆಡೆಗೆ ಚಲಿಸಿವೆ. ಪ್ರಸ್ತುತತೆಯ ಪರಿಧಿಯಿಂದ ಬಹುದೂರ ಸಿಡಿದಿರುವ ಹಳೆಯ ಯುಗದ ಮೋಹಕ ಕಾರುಗಳ ಜಾಡು ಹಿಂಬಾಲಿಸುವುದೇ ಒಂದು ಕುತೂಹಲಕಾರಿ ಅನುಭವ.

ಕುದುರೆಗಾಡಿಗಳಿಗಿಂತ ವೇಗವಾಗಿ ಓಡುತ್ತಿದ್ದ ರಾಜರ ಭೋಗಭೂಯಿಷ್ಠ ಮನಸ್ಸು ಯುರೋಪಿನಲ್ಲಿ ರಸ್ತೆಗಿಳಿದ ಕಾರುಗಳೆಡೆ ಕೀಲಿಸಿದ್ದು ಸಹಜವೇ. ಆಗ ಯುರೋಪು, ಅಮೆರಿಕೆಯ ಭವ್ಯ ಶೋರೂಮುಗಳನ್ನು ಸಂದರ್ಶಿಸಿ ನವೀನ ಮಾದರಿ ಕಾರುಗಳನ್ನು ತಮ್ಮ ಪ್ರತಿಷ್ಠೆಯ ಕಿರೀಟಕ್ಕೆ ಸಿಕ್ಕಿಸಿಕೊಳ್ಳುವುದೂ ಬಹುಪಾಲು ರಾಜರುಗಳ ಹವ್ಯಾಸ ಪಟ್ಟಿಗೆ ಸೇರಿತ್ತು.

ಕಾರುಗಳ ಲೋಕದ ಸಮ್ರಾಟನೆಂದೇ ಹೆಸರುಗಳಿಸಿದ ರೋಲ್ಸ್‌ರಾಯ್ಸ್ ಕಾರನ್ನು ಹೊಂದಿದ ಹೆಚ್ಚುತೆಯ ಪಟ್ಟಗಿಟ್ಟುವುದು ಗ್ವಾಲಿಯರ್‌ನ ಸಿಂಧಿಯಾ ರಾಜರಿಗೆ. 1908ರಲ್ಲಿ ಭಾರತಕ್ಕೆ ಬಂದಿಳಿದ ಈ ಕಾರಿಗೆ 'ಪಶ್ಚಿಮದ ರತ್ನ'ವೆಂದೇ ಹೆಸರು. ಹೈದರಾಬಾದಿನ ನಿಜಾಮ ದೊರೆಗಾಗಿ 1913ರಲ್ಲಿ ನಿರ್ಮಿಸಿದ 'ಸಿಲ್ವರ್ ಗೋಸ್ಟ್' ಕಾರನ್ನು ಬಂಗಾರದ ಒಡವೆಗಳಿಂದ ಸಿಂಗರಿಸಲಾಗಿತ್ತು. ಅದೇ ಸಮಯದಲ್ಲಿ ಸಿದ್ಧಗೊಂಡ ವಿಶಿಷ್ಟ ಕಾರೊಂದರಲ್ಲಿ (ಫ್ಯಾಂಟಮ್ 1) ಹಿಂದಿನ ಸೀಟಿನಲ್ಲಿ ಕುಳಿತವರೂ ನಡೆಸಬಹುದಾದ ರೀತಿಯ ನಿಯಂತ್ರಣ ಅನುಕೂಲಗಳಿದ್ದವು; ಘೋಷಾದಲ್ಲಿರುತ್ತಿದ್ದ 'ಬೇಗಂ' ಪರದೆಯೊಳಗಿನಿಂದಲೇ ಕಾರು ಚಾಲನೆ ಕಲಿಯಲೆಂದು ಈ ಸೌಲಭ್ಯ! ಪಶ್ಚಿಮ ಭಾರತದ ಮಹಾರಾಜನೊಬ್ಬ ಇಂತಹ ಹಿಂಬದಿ ಸೀಟಿನ ಚಾಲಕನಾಗಿದ್ದ. ಈತ ತನ್ನ ಕಾರಿನ ಹಿಂಬದಿ ಸೀಟಿಗೆ ಒರಗಿದಂತೆಯೇ ತನ್ನೆದುರಿನ ಗುಂಡಿಗಳನ್ನು ಒತ್ತಿ ಚಾಲಕನಿಗೆ ತನ್ನಿಚ್ಛೆಯಂತೆ ಸೂಚನೆ ಕೊಡಬಹುದಾಗಿತ್ತು.

ರಾಜಸ್ಥಾನದ ಧಾರ್ಮಿಕ ಸ್ವಭಾವದ ರಾಜಕುಮಾರನೊಬ್ಬ ಶುದ್ಧ ಶಾಕಾಹಾರಿಯಾಗಿದ್ದ. ಆತನ ಯಾವ ಯಂತ್ರವೂ ತುಣುಕು ಚರ್ಮವನ್ನು ಒಳಗೊಳ್ಳುವಂತಿರಲಿಲ್ಲ. ಅಲ್ಲದೆ ಆತನ ಕಾರಿನ ಸೀಟನ್ನು ಬೇಟೆಗೆ ಸಹಕಾರಿಯಾಗುವಂತೆ ಪೂರ್ಣ ಒಂದು ಸುತ್ತು ತಿರುಗುವ ರೀತಿಯಲ್ಲಿ ಅಳವಡಿಸಲಾಗಿತ್ತು. ಅನೇಕ ಸಲ ವರದಕ್ಷಿಣೆಯ ಭಾಗವಾಗಿ ಹಸ್ತಾಂತರಗೊಳ್ಳುತ್ತಿದ್ದ ಕಾರುಗಳು ಕೆಲವೊಮ್ಮೆ ಇತರೆ ವಸ್ತುಗಳಿಗಾಗಿ ವಿನಿಮಯವಾ

ತ್ತಾನೆ:

''ಕಾರಿನ ಬಣ್ಣ ಕುರಿತಂತೆ ಕಾಲಕಾಲಕ್ಕೆ ಅಭಿರುಚಿಯ ಅಲೆಗಳು ಬೀಸುತ್ತವೆ. ಕೆಲವೇ ವರ್ಷಗಳ ಹಿಂದೆ ಬಿಳಿ ವರ್ಣಕ್ಕೆ ವಸಂತಕಾಲವಿತ್ತು. ಈಗ ಬಿಳಿಯನ್ನು ಕೇಳುವವರೇ ಇಲ್ಲ. ಸದ್ಯಕ್ಕೆ ತೆಳು ನೀಲಿ ಮತ್ತು ಹಸಿರು ವರ್ಣಗಳು ಜನಪ್ರಿಯತೆ ಗಳಿಸಿವೆ. ಜತೆಗೆ ಮಂದಗಪ್ಪು ವರ್ಣ ಮತ್ತೆ ಮರಳಿ ಬರುವ ಸೂಚನೆಗಳಿವೆ.''

ಕಾರು ಕಟ್ಟಿಕೊಟ್ಟ ಸೌಲಭ್ಯಗಳ ಗಂಟಿನಲ್ಲಿ ಸಮಸ್ಯೆಗಳ ಪೊಟ್ಟಣಗಳೂ ಅಡಕವಾಗಿದ್ದವು. ಕಾರುಗಳ ಸಂತತಿ ಸತತ ಬೆಳೆದಂತೆ ನಗರದಲ್ಲಿ ನಿಲುಗಡೆ ಸ್ಥಳದ (Parking place) ಸಮಸ್ಯೆ ಹುಟ್ಟುಪಡೆಯಿತು. ಕಾರುಗಳು ಉಗುಳುವ ಹೊಗೆ ಪರಿಸರದ ಸಮಸ್ಯೆಯನ್ನು ಸೃಷ್ಟಿಸಿತು. ಓಡುವ ವೇಗ ಅಪಘಾತಗಳ ಬಳುವಳಿ ನೀಡಿತು. ಮತ್ತೆ ಪರಿಹಾರಗಳಿಗಾಗಿ ಪರಿತಪಿಸಬೇಕಾಯ್ತು. ಕೆರೆದುಕೊಂಡ ಸಂಶೋಧಕರ ತಲೆಯಿಂದ ಉಪಾಯಗಳೂ ಉದುರಿದವು.

---

ಗಿದ್ದೂ ಉಂಟು. ನಾರಾಜಲ್‌ನ ರಾಜಕುಮಾರ ತನ್ನ ಕಾರೊಂದನ್ನು ತೋಳುತುದಿಯ ಒಂದು ಜೊತೆ ವಜ್ರಖಚಿತ ಗುಂಡಿಗಾಗಿ ವಿನಿಮಯಿಸಿದ್ದನಂತೆ.

ಒಮ್ಮೆ ಪತಿಯಾಳಾದ ರಾಜ ಯುರೋಪಿನ ಪ್ರವಾಸದಲ್ಲಿದ್ದಾಗ 'ಫಿಯೆಟ್ ಕೊರ್ಸಾ' ಎಂಬ ಕಾರಿನ ಪ್ರೇಮಪಾಶಕ್ಕೆ ಸಿಲುಕಿ ಖರೀದಿಸಿಯೇ ಬಿಟ್ಟ. ಹಡಗಿನಲ್ಲಿ ಕುಳಿತು ಕಾರು ಭಾರತಕ್ಕೆ ತೇಲಿಬಂದಾಗ ಅದರ ಗಾಲಿಗಳು ರಾಜ ಆಯ್ಕೆ ಮಾಡಿದ ಮಾದರಿಯವಾಗಿರಲಿಲ್ಲ.. ಕುಪಿತಗೊಂಡ ರಾಜ ಇಡೀ ಕಾರನ್ನೇ ಇಟಲಿಗೆ ವಾಪಸ್ ಕಳಿಸಿ ಬೇರೆ ತರಿಸಿಕೊಂಡ.

ಸಾಂಪ್ರದಾಯಿಕ ಧೋತಿ ತೊಟ್ಟ ನೀಲಗಣ್ಣಿನ ಬಂಗಾಳಿಯೊಬ್ಬ ಲಂಡನ್ನಿನ ರೋಲ್ಸ್ ರಾಯ್ಸ್ ಶೋರೂಮಿಗೆ ಭೇಟಿ ನೀಡಿದಾಗ ಅವಮಾನಿತನಾದ. ತಕ್ಷಣ ಕಲಕತ್ತೆಗೆ ಹಿಂದಿರುಗಿದ ಆ ಬಂಗಾಳಿ 'ಸಿಲ್ವರ್ ಗೋಸ್ಟ್' ಕಾರುಗಳನ್ನು ಏಜೆಂಟರ ಮೂಲಕ ತರಿಸಿಕೊಂಡು ಅವುಗಳನ್ನು ಕಸತುಂಬುವ ವಾಹನಗಳಾಗಿ ಪರಿವರ್ತಿಸಿ ನಗರಸಭೆಗೆ ದಾನ ಮಾಡುವ ಮೂಲಕ ಸೇಡು ತೀರಿಸಿಕೊಂಡ. ಕಲ್ಸಿಯಾದ ಮಹಾರಾಜನ ಕಾರನ್ನು ಮಣ್ಣಿನ ಗೋಡೆಯೊಳಗೆ ಹುದುಗಿಸಿಟ್ಟು ಮೇಲೆ ಸಗಣಿಯಿಂದ ಸಾರಿಸಲಾಗಿತ್ತು. ಇತ್ತೀಚೆಗೆ ತಾನೆ ಅದನ್ನು ಹೊರ ತೆಗೆದಾಗ ಅಪರೂಪದ ಈ ವಿಂಟೇಜ್ ಕಾರು ಮಣ್ಣು ಮುದ್ದೆಯಂತೆ ಕಾಣುತ್ತಿತ್ತು.

ರಾಜರ ಕಿರೀಟಗಳ ಜಾರಿಕೆಯೊಂದಿಗೆ ಅವರ ಮುದ್ದು ಕಾರುಗಳೂ ಜಂಗುತಿನ್ನತೊಡಗಿದವು. ಅಲ್ಲದೆ ಸಂಗ್ರಹದ ಹವ್ಯಾಸ ಹಚ್ಚಿಕೊಂಡವರನ್ನು ಸೂಜಿಗಲ್ಲಿನಂತೆ ಸೆಳೆದದ್ದರ ಪರಿಣಾಮವಾಗಿ ಚೌಕಾಸಿ ಗಿರಾಕಿಗಳನೇಕರು ರಾಜವಂಶದ ಕುಡಿಗಳಿದ್ದಲ್ಲಿಗೆ ಎಡತಾಕತೊಡಗಿದರು. ಹವ್ಯಾಸಿಗಳಿಗೋ ಹಳೆಯ ಕಾರು ಕಂಡರೆ ಸಾಕು ಬಾಯಿತುಂಬ ಜೊಲ್ಲು; ಮಾಲಿಕರಿಗೆ ಮಾತ್ರ ಹೊತ್ತು ಹಾಕುವ ಕಾತರ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಒಬ್ಬ ರಾಜನಿಂದ ಕೇವಲ ಹದಿನೇಳು ಸಾವಿರ ರೂಪಾಯಿಗಳಿಗೆ ಮಾರಲ್ಪಟ್ಟ ಡ್ಯೂಸೆನ್‌ಬರ್ಗ್ ಕಾರಿನ ಇಂದಿನ ಬೆಲೆ ಎರಡೂವರೆ ಕೋಟಿ ರೂಪಾಯಿಗಳು.

1972ರಲ್ಲಿ ಸರ್ಕಾರ ಇಂಥ ಕಾರು ರಫ್ತಿನ ವ್ಯವಹಾರದ ಮೇಲೆ ನಿರ್ಬಂಧ ಹೇರುವಷ್ಟರಲ್ಲಿ ಅಸಂಖ್ಯ ಅಪರೂಪದ ಕಾರುಗಳು ದೇಶ ತ್ಯಜಿಸಿಯಾಗಿತ್ತು. ಈಗಲೂ ವಿವಿಧ ಒಳದಾರಿಗಳನ್ನು ತೂರಿ ಕಾರುಗಳು ವಿದೇಶಿಯರ ಪಾಲಾಗುತ್ತಿವೆ.

ಸಂಗ್ರಹಯೋಗ್ಯ ವಿಂಟೇಜ್ ಕಾರುಗಳಲ್ಲಿ ಶೇಕಡಾ ತೊಂಬತ್ತರಷ್ಟು ಕಾರುಗಳು ಭಾರತದ ಕೇವಲ ಹನ್ನೆರಡು ಜನರ ಒಡೆತನದಲ್ಲಿದ್ದರೆ ಉಳಿದವು ಇತರ ಮಾಲಿಕರನ್ನು ಆಶ್ರಯಿಸಿವೆ. ಅವುಗಳಲ್ಲೂ ಸುಸ್ಥಿತಿಯಲ್ಲಿ ಉಳಿಸಿಕೊಂಡ 50 ಕಾರುಗಳು ವಿಜಯ ಮಲ್ಯರ ಬಳಿಯೂ 200ಕ್ಕೂ ಮಿಕ್ಕಿ ಪ್ರಾಣ್‌ಲಾಲ್ ಭೋಗಿಲಾಲ್ ಅವರ ಸಂಗ್ರಹದಲ್ಲಿಯೂ ಇವೆ. ●

## ಅಧಿಕೃತ ವೇಗದ ದಾಖಲೆಗಳು

| ದಿನಾಂಕ | ಚಾಲಕ | ಕಾರು | ವೇಗ ( ಗಂಟೆಗೆ ) |
|---|---|---|---|
| 5.10.1964 | ಆರ್ಟ್ ಆರ್ಫೋನ್ಸ್ | ಗ್ರೀನ್ ಮಾನ್‌ಸ್ಟರ್ | 434.02 ಮೈಲು |
| 13.10.1964 | ಕ್ರೇಗ್ ಬ್ರೀಡ್‌ಲವ್ | ಸ್ಪಿರಿಟ್ ಆಫ್ ಅಮೆರಿಕಾ | 468.72 ಮೈಲು |
| 15.10.1964 | ,, | ,, | 526.28 ಮೈಲು |
| 27.10.1964 | ಆರ್ಟ್ ಆರ್ಫೋನ್ಸ್ | ಗ್ರೀನ್ ಮಾನ್‌ಸ್ಟರ್ | 536.71 ಮೈಲು |
| 2.11.1965 | ಕ್ರೇಗ್ ಬ್ರೀಡ್‌ಲವ್ | ಸ್ಪಿರಿಟ್ ಆಫ್ ಅಮೆರಿಕಾ (ಸೋನಿಕ್) | 555.13 ಮೈಲು |
| 7.11.1965 | ಆರ್ಟ್ ಆರ್ಫೋನ್ಸ್ | ಗ್ರೀನ್ ಮಾನ್‌ಸ್ಟರ್ | 576.55 ಮೈಲು |
| 15.11.1965 | ಕ್ರೇಗ್ ಬ್ರೀಡ್‌ಲವ್ | ಸ್ಪಿರಿಟ್ ಆಫ್ ಅಮೆರಿಕಾ (ಸೋನಿಕ್) | 600.60 ಮೈಲು |
| 23.10.1970 | ಗ್ಯಾರಿ ಗ್ಯಾಬೆಲಿಚ್ | ಬ್ಲೂ ಫ್ಲೇಮ್ | 622.407 ಮೈಲು |
| 9.9.1979 | ಸ್ಟ್ಯಾನ್ ಬ್ಯಾರೆಟ್ | 48,000 ಅಶ್ವಶಕ್ತಿ ರಾಕೆಟ್ ಕಾರ್ | 638.637 ಮೈಲು |



ಮತ್ತೆ ಕುದುರೆ ಪಾದವೇ ಗತಿ? : ಹೊಗೆಯ ಬದಲು ಗೊಬ್ಬರ ಉಗುಳುವ ಕಾರಿನ ಕನಸು ಕಾಣುತ್ತಾರೆ ಪರಿಸರವಾದಿಗಳು.

### ಕಾರು ಕುರಿತು ಅವರಿವರು........

★ ಆಸೆಯ ಕಾರಿಗೆ ಬಡತನವೇ ಚಾಲಕ.

- ಪೋಲಿಷ್ ಗಾದೆ

★ ಪಾದಚಾರಿಗಳ ಮೇಲೆ ಹರಿಯಲು ರಸ್ತೆಗಳಲ್ಲಿ ಸುತ್ತುತ್ತಿರುವ ಯಂತ್ರ.

- ಇಂಗ್ರಿಡ್ ಕ್ಲೆಮೆಂಟ್

★ ಇಂದಿನ ಕಾರು ಚಾಲಕ ನಿನ್ನೆಯ ಹೆದ್ದಾರಿಯಲ್ಲಿ ನಾಳಿನ ಕಾರನ್ನು ನಡೆಸುತ್ತಿರುವುದೇ ತೊಡಕು.

- ರಾಲ್ಫ್

★ ಸುಲಭವಾಗಿ ಚಾಲಕನ ಹತೋಟಿಗೆ ಸಿಗದ್ದರಿಂದಲೇ ಇಂಗ್ಲಿಷರು ಕಾರನ್ನು ಹೆಣ್ಣಾಗಿ ಕರೆಯುತ್ತಾರೆ.

- ಪಿಯರ್ ಡ್ಯಾನಿನೋಸ್

★ ಹಿಪ್ಪಿ ಕಾರಿನ ಬಾಗಿಲನ್ನು ತೆರೆಯುವದಾದರೆ ಎರಡರಲ್ಲೊಂದು ಖಚಿತ: ಕಾರು ಹೊಸದು ಇಲ್ಲವೇ ಹೆಂಡತಿ ಹೊಸಬಳು.

- ಫೆಟ್ರಿಸಿಯ ಸಲ್ಲೆ

(ಡಾ। ಡಿ.ಎಸ್. ಶಿವಪ್ಪನವರ 'ಸುಡಿ-ಕಿಡಿ'ಯಿಂದ)



ಮೊದಲು ಸುರಕ್ಷತೆ! : ಅಪಘಾತಕ್ಕೊಂದು ಅಪರೂಪದ ಪರಿಹಾರ - ಕಲಾವಿದನ ಕಣ್ಣಲ್ಲಿ.

ನಗರಗಳಲ್ಲಿ ಪಾರ್ಕಿಂಗ್ ಸಮಸ್ಯೆ ನೀಗಿಸಲು ನಿಲುಗಡೆ ಗೋಪುರಗಳು (Parking Towers) ರೂಪುಗೊಳ್ಳುತ್ತಿವೆ. ಒಂದರ ಮೇಲೊಂದರಂತೆ ಇಪ್ಪತ್ತೆರಡು ಕಾರುಗಳನ್ನು ಎರಡೇ ಕಾರುಗಳು ನಿಲ್ಲಬಹುದಾದಷ್ಟು ಸ್ಥಳಾವಕಾಶದಲ್ಲಿ ಹೊಂದಿಸಿಡಬಹುದಾಗಿದೆ.

ಗ್ಯಾಸೊಲಿನ್ ಕಾರಿನ ಇಂಜಿನ್ ದಹಿಸುವುದರಿಂದ ನೀರಿಂಗಾಲ (Hydro-carbon), ಕಾರ್ಬನ್ ಮೋನಾಕ್ಸೈಡ್ ಮತ್ತು ನೈಟ್ರೋಜನ್ ಆಕ್ಸೈಡ್ ಬಿಡುಗಡೆ ಹೊಂದಿ ವಾತಾವರಣದಲ್ಲಿ ಅಡರುತ್ತವೆ. ಕಾರುಗಳು ಉಂಟುಮಾಡುವ ವಾಯುಮಾಲಿನ್ಯವನ್ನು ನಿಯಂತ್ರಿಸಲು 'ಕೆಟಾಲಿಟಿಕ್ ಕನ್ವರ್ಟರ್' ಉಪಕರಣವನ್ನು ಅಳವಡಿಸಲಾಗುತ್ತದೆ.

ಕಾರಿನ ಹೊಸತನದ ದಾಹ ತೀರುವಂತಹದಲ್ಲ. ಎಲ್ಲ ಆವಿಷ್ಕಾರಗಳ ಲಾಭವನ್ನೂ ತನ್ನೊಳಗೆ ಅರಗಿಸಿಕೊಳ್ಳಬೇಕೆಂದು ತಹತಹಿಸುತ್ತದೆ ಅದು. ಅಂತೆಯೇ ಭವಿಷ್ಯದ ಕಾರುಗಳು ಏನೆಲ್ಲ ನವನವೀನ ರೀತಿ ರಿವಾಜುಗಳನ್ನು ಮೈಗೂಡಿಸಿಕೊಂಡು ಮನಸೂರೆಗೊಳ್ಳುತ್ತವೆಂಬುದನ್ನು ತರ್ಕಿಸುವುದೇ ಒಂದು ಕುತೂಹಲಕಾರಿ ಸಂಗತಿ.

ಸೊರಗುತ್ತಿರುವ ಇಂಧನ ಮೂಲಗಳು ಕಾರುಗಳ ತಂತ್ರಜ್ಞಾನದ ಮೇಲೆ ಅಪಾರ ಒತ್ತಡ ಹೇರುತ್ತಿವೆ. ಅದಕ್ಕನುಗುಣವಾಗಿಯೇ ಭವಿಷ್ಯದ ಕಾರುಗಳು ಆದಷ್ಟು ಕಡಿಮೆ ಇಂಧನ ಕುಡಿದು ಅಗಾಧ ದೂರ ಕ್ರಮಿಸುವಂತೆ ರೂಪಿಸಲ್ಪಡುತ್ತವೆ. ದಿನದಿನಕ್ಕೂ ಬದಲಾಗುತ್ತಿರುವ ಬದುಕಿನ ಶೈಲಿಯೂ ಒಂದು ಪ್ರಮುಖ ಮಾರ್ಗದರ್ಶಿ ಅಂಶ.

ಬಹುಪಾಲು ಕ್ಷೇತ್ರಗಳನ್ನು ತನ್ನ ವಶಕ್ಕೆ ಬಾಚಿಕೊಳ್ಳುತ್ತಿರುವ ಕಂಪ್ಯೂಟರ್‌ಗಳು ಕಾರಿನ ವಿನ್ಯಾಸ, ತಯಾರಿಕೆ, ಮಾರಾಟ, ನಿರ್ವಹಣೆ ಮುಂತಾದ ಪ್ರತಿಯೊಂದು ಹಂತದಲ್ಲೂ ಮೂತಿ ತೂರಿಸಿ ನಿಯಂತ್ರಿಸಲಿವೆ.

ವಾಯುಮಾಲಿನ್ಯ ಹರಡುವ ಅಂತರ್ದಹನ ಇಂಜಿನ್ನಿಗೆ ಬದಲಾಗಿ ವಿದ್ಯುತ್ ಕಾರುಗಳೇ ರಂಗಕ್ಕಿಳಿವ ಸಾಧ್ಯತೆ ಅಧಿಕ.

ಅಂತೂ ಕುದುರೆಯ ಕನಸನ್ನು ಅಪಹರಿಸಿ ನಾಗಾಲೋಟದಿಂದ ದೌಡಾಯಿಸುತ್ತಿದೆ ಕಾರು. ವೇಗ, ಸುರಕ್ಷತೆ, ಐಷಾರಾಮ - ಅದರ ಮಂತ್ರ. ಪ್ರಗತಿ ಎಂಬ ಅಂತ್ಯವಿಲ್ಲದ ಹಾದಿಯಲ್ಲಿ ಅದರ ನಿರಂತರ ಪರ್ಯಟನ. ●

## ಕಾಮು ಮತ್ತು ಕಾರು

*ಅಸಂಗತವಾದದ ನೆಲೆಯಿಂದ ವಿಶಿಷ್ಟ ಬಗೆಯ ಸಾಹಿತ್ಯ ಸೃಜಿಸಿದ ಆಲ್ಬರ್ಟ್ ಕಾಮುವಿಗೆ ಕಾರು ಕಂಡರೆ ಆಗುತ್ತಿರಲಿಲ್ಲ. ನೊಬೆಲ್ ಪಾರಿತೋಷಕ ಪಡೆದ ನಾಲ್ಕು ವರ್ಷಗಳ ತರುವಾಯ ಒಂದು ದಿನ ಕಾಮು ಸೆಸ್ಸನಲ್ಲಿದ್ದ ತನ್ನ ಪ್ರಕಾಶಕ ಮಿತ್ರನನ್ನು ಕಂಡು ರೈಲಿನಲ್ಲಿ ಪ್ಯಾರಿಸ್ಸಿಗೆ ಹಿಂದಿರುಗಲು ಟಿಕೆಟ್ ಕೊಂಡು ಸಿದ್ಧನಾಗಿದ್ದ. ಆದರೆ ಮಿತ್ರ, ಗಾಲಿಮಾ ಒತ್ತಾಯದಿಂದ ಕಾರಿನಲ್ಲೇ ಕರೆದುಕೊಂಡು ಹೊರಟ. ಹಾದಿಯಲ್ಲಿ ಅಪಘಾತವಾಗಿ ನಲವತ್ತಾರು ವರ್ಷದ ಕಾಮು ಅಸುನೀಗಿದ.*

# ಎಲ್ಲಿ ಸತ್ಯ?

ಮೂಲ: ಸೆಜಾರ್ ವಲೇಜಾ*
ಅನುವಾದ: ಬಂಜಗೆರೆ ಜಯಪ್ರಕಾಶ

ಸತ್ಯದ ಶವ ನೋಡೋಣೆಂದು
ಬಂದನೊಬ್ಬ ಮನುಷ್ಯ
''ಸಾಯಬೇಡ ಸ್ನೇಹಿತ'' ಎಂದ

''ಬರುತ್ತಿರುವೆ''ನೆಂದ
''ನಿನ್ನ ಪ್ರೇಮಿಸುತ್ತಿರುವೆ''ನೆಂದ

ಆದರೆ ಪಾಪ ಶವ
ಕದಲಿಲ್ಲ ನಿಜ

ಇಬ್ಬರು ಮನುಷ್ಯರು ಬಂದರು
ಏನೋ ಅರ್ಜಿ ತಂದರು
''ಬಿಡಬೇಡ ನಮ್ಮ''ನೆಂದರು
''ಬಿಡಬೇಡ ಧೈರ್ಯ''ವೆಂದರು

ಆದರೆ ಪಾಪ ಶವ
ಕದಲಿಲ್ಲ ನಿಜ

ಇಪ್ಪತ್ತು, ಮೂವತ್ತು, ನೂರು, ಸಾವಿರ
ಐವತ್ತು ಲಕ್ಷ ಮಂದಿ ಬಂದರು
ಪ್ರೇಮ ಧ್ವಜ ತಂದರು
ಬೇಡಿಕೊಂಡರು, ದಮ್ಮಯ್ಯ ಗುಡ್ಡೆ ಹಾಕಿದರು
''ಇಷ್ಟು ಪ್ರೇಮ ಕೂಡ
ಏನೂ ಮಾಡಲಾರದೆ ಮೃತ್ಯುವ''

ಎಂದು ಪ್ರಶ್ನಿಸಿದರು
ಕಣ್ಣೀರು ವರ್ಷಿಸಿದರು





*ಆದರೆ ಪಾಪ ಶವ*
*ಕದಲಿಲ್ಲ ನಿಜ*

*ಲಕ್ಷಗಳು ಬೆಳೆದವು ಕೋಟಿಗಳಾಗಿ*
*ಶವದ ಸುತ್ತಾ ಜನ*

*ಎಲ್ಲರಿಗೂ ಒಂದೇ ಧ್ಯಾನ*
*ಎಲ್ಲರಿಗೂ ಶತ್ರು, ಮರಣ*

*ಎಲ್ಲರದೂ ಒಂದೇ ಕೀರ್ತನೆ*
*ಎಲ್ಲರದೂ ಒಂದೇ ಪ್ರಾರ್ಥನೆ*

*''ಅಣ್ಣಯ್ಯ! ಬದುಕಿ ಬಾರಯ್ಯಾ'' ಎಂದು*

*ಆದರೆ ಪಾಪ ಶವ*
*ಕದಲಿಲ್ಲ ನಿಜ*

*ಪ್ರಪಂಚದ ಜನರೆಲ್ಲಾ*
*ಹೊರ ಬಂದು ನಿಂತರು*
*ಆಸತ್ಯದ ಮೇಲೆ ಮುಗಿಬಿದ್ದರು*

*ಶವದ ದೇಹ ಕದಲಿತು*
*ಜನರ ಕಣ್ಣು ತೆರೆಯಿತು*

*ಶವ ನಡೆಯಿತು*
*ಮೊದಲ ಮನುಷ್ಯನ ಕರೆಯಿತು*

*ಆತನ ಚುಂಬಿಸಿತು*
*ಪ್ರೇಮವ ಪ್ರತಿಬಿಂಬಿಸಿತು*

*ಆಸತ್ಯ ಸತ್ತಿತು*
*ಸತ್ಯ ಬದುಕಿತು.*

---

★ ಸೆಜಾರ್ ವಲೇಜಾ ಪೆರು ದೇಶಸ್ಥ. ಸ್ಪಾನಿಷ್ ಭಾಷೆಯ ಕವಿ. ಸರ್ರಿಯಲಿಸ್ಟಿಕ್ ಕವಿತೆಗಳಿಗೆ ಹೆಸರುವಾಸಿ. 1923ರ ನಂತರ ಯೂರೋಪಿನಲ್ಲಿ ನೆಲೆಸಿದ. ಸಾಮಾಜಿಕ ನ್ಯಾಯಕ್ಕಾಗಿ ಬದುಕಿದ. 1938ರ ಅವಧಿಯ ಸ್ಪಾನಿಷ್ ಅಂತರ್ಯುದ್ಧದಲ್ಲಿ ಕ್ರಾಂತಿಕಾರಿಗಳ ಪರ ಹೋರಾಡಿ ಮರಣಿಸಿದ.

# ಪ್ರೊ. ಗೋಕಾಕರು ಕವಿ ವಿನಾಯಕರನ್ನು ಕಂಡಾಗ

ವ್ಯಕ್ತಿ ಒಬ್ಬನೇ, ಆದರೆ ವ್ಯಕ್ತಿತ್ವ ಬೇರೆ ಬೇರೆ - ಹೀಗಿದೆ ಪ್ರೊಫೆಸರ್ ಗೋಕಾಕ ಮತ್ತು ಅವರ ಕಲಾಚೇತನವಾದ ವಿನಾಯಕರ ಎರಕ:

● ವಿ. ಕೃ. ಗೋಕಾಕ

ನಾನು ವಿನಾಯಕರನ್ನು ಭೆಟ್ಟಿಯಾಗಿದ್ದು ಸಂಧ್ಯಾಕಾಲದಲ್ಲಿ - ಹೊಂಬಿಸಿಲು ಇನ್ನೂ ಮನೆ-ಮಾಳಿಗೆಗಳ ಮೇಲೆ ಮೂಡಿರುವಾಗ.

'ಕಸ್ತೂರಿ'ಯ ಸಂಪಾದಕರ ಪ್ರಶ್ನೆಮಾಲಿಕೆಯನ್ನು ಹಿಡಿದುಕೊಂಡು ಅವರಿಗೆ ಸವಾಲು ಹಾಕಿದೆ: ''ನಿಮಗೆ ಅಭಿವ್ಯಕ್ತಿ ದೊರಕಿದುದು ಹೇಗೆ?''

ವಿನಾಯಕರದು ಆಮೆಯ ಸ್ವಭಾವ. ತಮ್ಮ ಕವಚದಿಂದ ಅವರು ಹೊರಗೆ ಬರುವುದೇ ಅಪರೂಪ. ಈಗ ಹೊರಗೆ ಬಂದಾಗ ಪ್ರಶ್ನೆಗಳನ್ನು ತೂರಿಸಿಕೊಂಡುಬಿಡೋಣವೆಂದೆ.

ವಿನಾಯಕರು ಹೇಳಿದರು: ''ನಿನಗೆ ನನ್ನ ಪರಿಚಯವಾಗಲೆಂದು ನಾನು ನಿನ್ನನ್ನು ಕನಸು-ಮನಸ್ಸಿನಲ್ಲಿ ಬೆನ್ನಟ್ಟಿದೆ. ಟಾಗೋರರಾಗಿ ಕನಸಿನಲ್ಲಿ ಶಾಂತಿನಿಕೇತನಕ್ಕೆ ಕರೆದೊಯ್ದೆ. ಅಮರಾವತಿಯ ಹೆಬ್ಬಾಗಿಲನ್ನು ತೋರಿಸಿದೆ....''

'ಕಸ್ತೂರಿ' ಈ ಹಿಂದೆ ನಾಡಿನ ಹೆಮ್ಮೆಯ ಕುವರರ ಸ್ವಸಂದರ್ಶನಗಳನ್ನು ಪ್ರಕಟಿಸಿತು. ಕುವೆಂಪು ಅವರನ್ನು ಪುಟ್ಟಪ್ಪ, ಅಂಬಿಕಾತನಯರನ್ನು ಬೇಂದ್ರೆ, ಈ ಪುಟಗಳಲ್ಲಿ ಮಾತನಾಡಿಸಿದ್ದರು. 'ನನ್ನ ನಾ ಕಂಡಂತೆ' ಮಾಲಿಕೆಯಲ್ಲಿ ಮೂರನೆಯದಾಗಿ 1964ರ ಜನೆವರಿ ಸಂಚಿಕೆಯಲ್ಲಿ ಪ್ರಸ್ತುತ ಸಂದರ್ಶನ ಮೂಡಿಬಂತು. ವಿನಾಯಕರಿಗೆ ಜ್ಞಾನಪೀಠ ಪ್ರಶಸ್ತಿ ಸಂದ ಈ ಸಂದರ್ಭದಲ್ಲಿ ಈ 'ಸ್ವಾತ್ಮದರ್ಶನ'ವನ್ನು ಮತ್ತೆ ಪ್ರಕಟಿಸುತ್ತಿದ್ದೇವೆ.

– ಸಂಪಾದಕ

''ಆದರೆ ಅದಕ್ಕೂ ಮೊದಲು ಕವಿತೆ ಬರೆಯುತ್ತಿದ್ದೆನಲ್ಲ,'' ಎಂದು ನಾನು ಕೇಳಿದೆ. ''ಅದು ನಿಜ. ಆದರೆ ಅವು ಕವಿತೆಗಳಲ್ಲ, ಪದ್ಯಗಳು. ನಿನ್ನಲ್ಲಿದ್ದ ನಾದಲೋಲುಪತೆಯೇ ನನ್ನನ್ನು ನಿನ್ನ ಕಡೆಗೆ ಆಕರ್ಷಿಸಿತು. ನಮ್ಮಿಬ್ಬರ ನಡುವಣ ಸೇತುವೆ ಅದು. ನೀನು ಆಯ್ದ ವಸ್ತುಗಳಲ್ಲಿ ಆಗ ನಾನು ನುಸುಳಿಕೊಳ್ಳುತ್ತಿದ್ದೆ. ಈಗ ನನ್ನನ್ನು ಮೂಡಿಸುವುದಕ್ಕಾಗಿ ನೀನು ವಸ್ತುಗಳನ್ನು ಆರಿಸಿಕೊಳ್ಳುತ್ತೀ!''

''ಆಶ್ಚರ್ಯ! ಆದರೆ ಇದು ನಿಜ,'' ನಾನೆಂದೆ.

ವಿನಾಯಕರು ತಮ್ಮ ಕವಚವನ್ನು ಪರೀಕ್ಷಿಸುತ್ತ ನುಡಿದರು: ''ಅಂತೇ ನಾನು ಹೇಳುತ್ತಿದ್ದೇನೆ. ನಿನ್ನ ಪದ್ಯಗಳಲ್ಲಿ ನುಸುಳಿದಾಗ ನಿನಗೆ ನನ್ನರಿವಾಯಿತು. ಅಲ್ಲಿ ನನ್ನನ್ನು ಕಂಡ ನಿನ್ನ ಹಿರಿಯರು, ಗೆಳೆಯರೂ ಆ ವಿಷಯವನ್ನು ನನಗೆ ತಿಳಿಸಿದರು. ನಿಸರ್ಗ, ಸ್ನೇಹ, ಪ್ರೇಮ, ಅಂತರ್ಮಥನ- ಈ ರಂಗಗಳಲ್ಲಿ ನೀನು ನನ್ನನ್ನು ಶೋಧಿಸಿದೆ. ರೊಮ್ಯಾಂಟಿಕ್ ಆದೆ. ಮುಂದೇನಾಯಿತು ಬಲ್ಲೆಯಾ?''

ಬೆಚ್ಚಿದ ನಾನೆಂದೆ: ''ಮುಂದೆ ನಾನು ಇಂಗ್ಲೆಂಡಿಗೆ ಹೋದೆ.''

''ಹಾಗೆ ಹೇಳು. ಹೋದೆಯೆಂದರೆ? ಅಲ್ಲಿಗೆ ನಿನ್ನನ್ನು ಎಳೆದೊಯ್ದವನೇ ನಾನು. ಡಿ.ಇ. ಸೊಸಾಯಟಿಯವರು ಅದಕ್ಕೆ ನಿಮಿತ್ತವಾದರು. ಅಲ್ಲಿ ಒಯ್ದುದ್ದೇಕೆ ಗೊತ್ತೋ? ನನ್ನ ಇನ್ನೊಂದು ಮುಖ ತೋರಿಸುವದಕ್ಕೆ!''

ವಿನಾಯಕನಿಗೆ 'ಇನ್ನೊಂದು ಮುಖವಿಲ್ಲ ಗಜಾನನವನ್ನು ತೋರಿಸುವುದಕ್ಕೆ!'' ಎಂದು ನಗೆಯಾಡಿದೆ.

''ಏನೇ ಎನ್ನು, ಆ ಆನನ ಯಾವುದು?''

''ಸಾಮಾಜಿಕ ಪ್ರಜ್ಞೆ'' ಎಂದು ನಾನು ತಟಕ್ಕನೆ ಉತ್ತರ ಕೊಟ್ಟೆ.

ಮುಗುಳುನಗೆ ನಕ್ಕು ವಿನಾಯಕರೆಂದರು: ''ಅಷ್ಟೆ ಇಲ್ಲ. ನನಗೆ ಒಳ್ಳೆಯ ಮೂಷಕವಾಹನವಾಗಿದ್ದೀ! ಮತ್ತೇನಾಯಿತು ಬಲ್ಲೆಯಾ?''

''ಅಲ್ಲಿದ್ದಾಗ ನೀವು ಮಾಡಿದ ಪ್ರಾಣದಾನ.''

''ಹಾಗೆ ಹೇಳು. ಆಗ ನಿನ್ನ ಶ್ರದ್ಧೆ ಬೆಳೆಯಿತು. ಪೂರ್ಣ ಪ್ರಜ್ಞೆಯ ಕನಸು ಆಗ ನಿನ್ನ ಆಂತರಿಕ



ಸಾಮಾಜಿಕ ಪ್ರಜ್ಞೆಗಳಿಗೆ ಬಿತ್ತು. ಸಮನ್ವಯದ ರುಚಿ ಹತ್ತಿ ಅರವಿಂದ ವಿಕಸಿತವಾಯಿತು. ಆದರೆ ನನ್ನ ಮೆಲೆ ನೀನು ಎರಡು ನಿರ್ಬಂಧನೆಗಳನ್ನು ಹೇರಿದಿ. ಯಾವವು ಗೊತ್ತೇ?''

''ಶಿಕ್ಷಣ ಹಾಗೂ ವಿಧಾಯಕ ಕಾರ್ಯ,'' ನಾನು ಉತ್ತರಿಸಿದೆ. ವಿನಾಯಕರ ಸಾಮೀಪ್ಯದಲ್ಲಿ ಮಂಜು ಸರಿದು ಎಲ್ಲವೂ ನನಗೆ ಸ್ಪಷ್ಟವಾಗಿ ಕಾಣುತ್ತಿತ್ತು.

''ನಿಜ. ಅದರಿಂದ ಗಾತ್ರದಲ್ಲಿ ನಾನು ಸೊರಗಿದರೂ ಪಾತ್ರತೆಯಲ್ಲಿ ಹಿಗ್ಗಿದೆ. ಇಷ್ಟೇ ಅಲ್ಲ, ಶಿಕ್ಷಣ, ಸಂಸ್ಕೃತಿ, ಕಾರ್ಯಕ್ಷಮತೆ, ಕಾವ್ಯ - ಇವನ್ನೆಲ್ಲ ಒಳಗೊಂಡ ಇಡಿಯಾದ ವ್ಯಕ್ತಿತ್ವವೇ ನನಗೆ ದೃಗ್ಗೋಚರವಾಯಿತು. ಕವಿಯಾದ ನಾನು ಈ ಪೂರ್ಣತೆಯ ಬೆನ್ನು ಹತ್ತಿದೆ. ಕ್ರಮೇಣ ಕಾವ್ಯವು ಈ ಸಂಕೀರ್ಣತೆಯ ಪ್ರತಿಬಿಂಬವಾಯಿತು. ಕಾವ್ಯವು ಈ ಕಾರಣದ ಮೂಲಕ ಇನ್ನಷ್ಟು ಕಾವ್ಯಮಯವಾಯಿತು.''

''ಹಾಗಾದರೆ ಈಗ ನಿಮ್ಮ ಸ್ಫೂರ್ತಿಯ ನೆಲೆಯೇನು?'' ಸಂಪಾದಕರ ಎರಡನೆಯ ಪ್ರಶ್ನೆ ನನ್ನನ್ನು ಬಾಧಿಸಿತ್ತು.

ವಿನಾಯಕರೆಂದರು: ''ಇದೇನು ಪ್ರಶ್ನೆ? ಟರ್ಬೋ ಇಲೆಕ್ಟ್ರಿಕ್ ಎಂಜಿನ್, ಥ್ರಂಬೊಸಿಸ್ ಮೊದಲಾದ ವಿಷಯಗಳನ್ನು ಕುರಿತು ಕಾವ್ಯ ಬರೆದು ನಗೆಗೀಡಾದ ನಾನು ಯಾವ ವಸ್ತುವಿಗೂ ಹಿಂಜರಿಯಲಾರೆ. ಆನೆ-ಇಲಿ-ಮನುಷ್ಯರನ್ನು ಸಮನ್ವಯಿಸಬಲ್ಲ ನನ್ನ ಅವತಾರ ಹೊಸತನದರಲ್ಲಿಯೇ ಒಂದು ತೃಪ್ತಿಯನ್ನು ಕಂಡಿದೆ. ಆದರೆ ಹಳೆಯದನ್ನು ಅನಾದರದಿಂದ ನೋಡಿಲ್ಲ. ಅಂತಃಸ್ಫುರಣವೇ ಕಾವ್ಯ. ಯಾವ ವಸ್ತು ಇಲ್ಲವೆ ಸನ್ನಿವೇಶವನ್ನೂ ಅದು ಭೇದಿಸಬಲ್ಲದು. ಸ್ಫೂರ್ತಿಯ ನೆಲೆ ಒಳಗಿದೆ. ಅದರ ಉದ್ದೀಪಕ ಸೃಷ್ಟಿ ಮಾತ್ರ ಹೊರಗೆ.''

'ನೀವು ಬರೆಯುವ ವಿಧಾನಗಳೇನು?'' ಎಂದು ಸಂಪಾದಕರ ಪರವಾಗಿ ನಾನು ವಿನಾಯಕರನ್ನು ಕೇಳಿದೆ.

''ಅಂದರೇನು?'' ಅವರು ಮರುಸವಾಲು

''ವಿಧಾನ-ಸೌಧವಲ್ಲ - ಬರೆಯುವ ವಿಧಾನ - ಸಾಹಿತ್ಯ ಪ್ರಕಾರ - ಅಲ್ಲ, ರೀತಿ ಇಲ್ಲವೆ ಸಮಯ'' ಎಂದು ನಾನು ತತ್ತರಿಸಿದೆ.

ವಿನಾಯಕರು ಮಂದಸ್ಮಿತರಾದರು. ''ಅಲ್ಲ, ಪ್ರಾಚಾರ್ಯರೆ! ನಿಮ್ಮ ಕೆಲಸಕ್ಕೆ ಬಲಿಯಾಗಿ ನನಗೆ ಭಾನುವಾರ ಇಲ್ಲವೆ ರಜೆಯ ದಿನದಲ್ಲಿ ಪ್ರವೇಶ ಸಾಧ್ಯ. ಇಲ್ಲವೆ ನಡುರಾತ್ರಿಯಲ್ಲಿ ನಿಶಾಚರರಂತೆ ನಿಮಗೆ ತೊಂದರೆ ಕೊಡಬೇಕು. ನಿಮ್ಮ ಪಾಂಡಿತ್ಯಕ್ಕೂ ನನ್ನ ಒಲವಿಗೂ ನಿಕಟ ಸಂಬಂಧವಿದ್ದಂತೆ ಕಾಣುತ್ತಿದೆ. ಆಂಗ್ಲರ ಉಡುಪು ನಿಮ್ಮ ಮೈಯುಂಡಂತೆ ಪಡುವಣದ ನಿಮ್ಮ ನವ್ಯ 'ವಿಧಾನ'ಗಳು ನನ್ನ ಪ್ರೀತಿಯ ರಹದಾರಿಗಳಾಗಿವೆ. ಆದರೆ ನಡೆಯುವವ ನಾನು - ನಾಯಕ - ಎಂಬುದನ್ನು ಮರೆಯಬೇಡಿರಿ! ನನ್ನ ವಿಮರ್ಶೆಯನ್ನು ಓದಿದ ಕೆಲವರಿಗೆ ನನ್ನ ಕಾವ್ಯದ ಅರ್ಥವಾಗಿಲ್ಲ. ನನ್ನ ಕಾವ್ಯವನ್ನು ಓದಿಕೊಂಡವರಿಗೆ ನನ್ನ ವಿಮರ್ಶೆ ಗೂಢವಾಗಿಯೇ ಉಳಿದಿದೆ, ಇದು ನನ್ನ ತಪ್ಪಲ್ಲ. ಅಂತಃಸ್ಫುರಣದ ಪ್ರತಿಬಿಂಬನ ಕಾವ್ಯ; ಅದರ ಚಿತ್ರಣ ಕಥಾ-ಕಾದಂಬರಿಯ ಪ್ರಪಂಚ; ಅದರ ರೂಪಣ ನಾಟಕ; ಅದರ ಮೀಮಾಂಸೆ ವಿಮರ್ಶೆ - ಹೀಗೆ ಪ್ರಕಾರಗಳಲ್ಲಿ ಭೇದವಿಲ್ಲವೆಂಬುದನ್ನು ಓದುಗರು ತಿಳಿಯಬೇಕಾಗಿದೆ. ಒಂದು ರೀತಿಯಿಂದ ಅವು ಏಕಪ್ರಕಾರವಾಗಿವೆ.''

''ನೀವು ಮಹಾ ಕಾವ್ಯವನ್ನು ಬರೆದಿಲ್ಲವಲ್ಲ,'' ಎಂದು ನಾನು ಅವರನ್ನು ಕೆಣಕಿದೆ.

''ಇನ್ನೂ ನೀವು ಮಹಾ-ಮಹೋನ್ನತದ ಬಂಗಡಿಕೆಯನ್ನು ತಿಳಿದಿಲ್ಲ,'' ಎಂದು ವಿನಾಯಕರು ಹಸುಳರಂತೆ ನಕ್ಕರು. ''ಅದು ಹೋಗಲಿ. 'ಬಾಳದೇಗುಲದಲ್ಲಿ' ಎಂಬುದು ಒಂದು ಮಹಾಕಾವ್ಯ. ಅದನ್ನು ಓದುವ ಸಾಹಸವನ್ನು ನೀವು ಮಾಡಿದ್ದೀರಾ? ಅದನ್ನು ನೀವೇ ಬರೆದುಕೊಂಡಿದ್ದೀರಿ. 'ಸಮರಸವೇ ಜೀವನ' ನೀವು ಓದಿದ್ದೀರಿ. ಅದು ಇನ್ನೊಂದು ಬಗೆಯ ಮಹಾಕಾವ್ಯ. ಮೂರನೆಯ ಮಾಡಬಿಡೋಣವೆ.

ಅದರ ಅವತಾರವಾಗುತ್ತದೆ,'' ಎಂದರು ವಿನಾಯಕರು. ''ಅಷ್ಟರಲ್ಲಿಯೇ ಅವತಾರ ಸಮಾಪ್ತಿ?'' ಎಂದು ನಾನು ಪ್ರಶ್ನಚಿಹ್ನವಾಗಿ ಅವರನ್ನು ನೋಡಿದೆ.

''ಅದನ್ನೂ ಲಕ್ಷ್ಯದಲ್ಲಿಡೋಣ,'' ಎಂದರು ವಿನಾಯಕರು.

''ಬರವಣಿಗೆಗೆ ನೀವು ವಸ್ತುವನ್ನು ಹೇಗೆ ದೊರಕಿಸುತ್ತೀರಿ?'' ಎಂದು ಸಂಪಾದಕೀಯ ಪ್ರಶ್ನೆ ಮಾಡಿದೆ.

''ಬಜಾರದಲ್ಲಿ ಹೋಗಿ ಕೊಂಡು ತರುತ್ತೇನೆ ಇಲ್ಲವೆ ಇನ್ನೊಬ್ಬರಿಂದ ಎತ್ತಿಕೊಳ್ಳುತ್ತೇನೆ!'' ಎಂದು ಅರ್ಧ ಸಿಟ್ಟಿನಲ್ಲಿಯೆ ವಿನಾಯಕರು ಉತ್ತರ ಕೊಟ್ಟರು. ಆಮೇಲೆ ಹೇಳಿದರು: ''ವಸ್ತುವನ್ನು ದೊರಕಿಸುವುದೆಲ್ಲ ಶೂನ್ಯ ಸಂಪಾದನೆ. ವಸ್ತುವೇ ನಮ್ಮನ್ನು ದೊರಕಿಸಿಕೊಳ್ಳುತ್ತದೆ. ಕವಿಯ ಕಣ್ಣೊಂದು ಅಣು ವರ್ತುಲ. ವಿಶ್ವ ಮಹದ್ವರ್ತುಲ. ಆದರೆ ಅಣುವಿನಲ್ಲಿ ಮಹತ್ತೆಲ್ಲ ಮೂಡಿಬರಬಲ್ಲದು. ತಪಸ್ವಿಯ ಕೃಪಾದೃಷ್ಟಿ ಬಿದ್ದ ಭಕ್ತನು ಧನ್ಯನಾದಂತೆ ಕವಿದೃಷ್ಟಿ ಬಿದ್ದ ವಸ್ತು ಧನ್ಯವಾಗುತ್ತದೆ. ಅದರ ದೈವ ತೆರೆದಿರಬೇಕು - ಅಷ್ಟೇ. ದೃಷ್ಟಿಯ ವ್ಯಾಪಕತೆಯನ್ನು ಮಾತ್ರ, ನಾವು ಅಳೆಯಬಲ್ಲೆವು.''

''ಅದೇಕೆ? ವಸ್ತುವಿಗೂ ಮಹತ್ವವಿದೆ. ಆರ್ನಾಲ್ಡ್ ಹಾಗೆ ಹೇಳಿದ್ದಾನೆ, ಎಲಿಯೆಟ್ ಹೀಗೆ ಹೇಳಿದ್ದಾನೆ,'' ಎಂದು ನಾನು ಕುಂಯ್ಗುಟ್ಟಿದೆ.

''ವಸ್ತುವಿನ ಆಕಾರತೆ ಕವಿದೃಷ್ಟಿಗೆ ಬೇಕು. ಅದಕ್ಕೂ ಹೆಚ್ಚಿನ ಮಹತ್ವವಿಲ್ಲ,'' ಎಂದರು ವಿನಾಯಕರು.

''ನಿಮ್ಮ ಬರವಣಿಗೆಯಲ್ಲಿ ಸಾಮಾಜಿಕ ಉದ್ದೇಶವಿದೆಯೇ?'' ನಾನು ಕೇಳಿದೆ. ವಿನಾಯಕರು ಹೇಳಿದರು: ''ಇಲ್ಲ. ಕವಿಯ ಹೃದ್ದೇಶವಿದೆ. ಕವಿಯೆಂದರೆ ಅಡವಿಯ ಮಂಟಬೆಕ್ಕಲ್ಲ: ನಾಗರಿಕ ಪ್ರಾಣಿ. ಅವನ ಮೇಲಾದ ಸಮಾಜದ ಪ್ರಘಾತಗಳು ಅವನ ಕಾವ್ಯದಲ್ಲಿ ಮೂಡುವದು ಸಹಜ. ಇದರಿಂದ ಉದ್ದೇಶವಿಲ್ಲದಿದ್ದರೂ

## ಹರಕೆ

ಆಗಲಿ ಆಗಲಿ
ಬದುಕದಿಂತು
ಮಾಗಲಿ.
ಆಸೆಯೆಲ್ಲ ಅಗ್ನಿಯಲ್ಲಿ ಬಿದ್ದು
ಭಸ್ಮವಾಗಲಿ
ಹೃದಯ ಬೆಂದು ನೊಂದು ಬೆಂದು
ಚೊಕ್ಕ ಚಿನ್ನವಾಗಲಿ
ಚಿತ್ತವು ನವನೀತದಂತೆ
ಕೃಷ್ಣ ಕವಳವಾಗಲಿ
ದೇಹವಿದು ಪುನೀತಗೊಂಡು
ಗುರುಮಂದಿರವಾಗಲಿ
ಪಂಚಪ್ರಾಣ ಮಂದಾರದ
ಮಲಯಾನಿಲಯವಾಗಲಿ
ದರ್ಶನ ಸುದರ್ಶನದೊಲು
ನಿರಿನಿಚ್ಚಳವಾಗಲಿ.
ವಾಣಿ ಧರ್ಮಕ್ಷೇತ್ರದಲ್ಲಿ
ಪಾಂಚಜನ್ಯವಾಗಲಿ.
ಕ್ರತುಶಕ್ತಿಯು ಗಾಂಡೀವವು
ಬಿಟ್ಟ ಬಾಣವಾಗಲಿ
ಆಗಲಿ ಆಗಲಿ
ಬದುಕದಿಂತು ಮಾಗಲಿ
ನೀಗಲಿ.

● ವಿ.ಕೃ. ಗೋಕಾಕ

('ಸಿಮ್ಲಾದಲ್ಲಿಯ ಉಳಿದ ಕವಿತೆಗಳು' (1973) ಸಂಕಲನದಿಂದ)

ಒಂದು ಉದ್ದೇಶ ಸಫಲಗೊಳ್ಳುತ್ತದೆ. ಅದು ಸಮಾಜದ ಉದ್ಧಾರ, ವ್ಯಕ್ತಿಗೆ ಒದಗಿಬರುವ ಸುಸಂಸ್ಕೃತಿ.''

ಸಂಪಾದಕರು ಕೇಳಿದ್ದರು: ಬರೆಯುವಾಗ ವಿಶೇಷ ಪರಿಸರ ಬೇಕೇ? ದಿನಾಲು ಬರೆಯುತ್ತೀರಾ? ಬರೆಯುವ ಹೊತ್ತು ಯಾವುದು? ಈ ಪ್ರಶ್ನೆಗಳನ್ನು ವಿನಾಯಕರಿಗೆ ಕೇಳುವ ಕಾರಣವಿರಲಿಲ್ಲ. ಏಕೆಂದರೆ ಬರೆದುಕೊಳ್ಳುವವ ನಾನು. ನನಗೆ ಅವರೆಷ್ಟು ತೊಂದರೆ ಕೊಟ್ಟಿರುವರೆಂಬುದು ನನಗೇ ಗೊತ್ತು. ತಿಂಗಳಾನುತಿಂಗಳವರೆಗೆ ಎಲ್ಲ ರೂಕ್ಷ. ಆದರೆ ಒಮ್ಮೆಲೆ ಬೇಸಗೆಯಲ್ಲಿ ಬಂದ ಮೋಡದ ಪಡೆಯಂತೆ ಕಾವ್ಯಮೇಘ ವೃಷ್ಟಿಗೆ ಆರಂಭವಾಗುತ್ತದೆ. ಆಗ ಹಗಲು-ರಾತ್ರಿ, ಮುಂಜಾನೆ-ಸಂಜೆ ವೇಳೆ ದೊರೆತಾಗೆಲ್ಲ ವಿನಾಯಕರ ಪ್ರಭಾವಕ್ಕೆ ನಾನು ಸಿಕ್ಕುಬೀಳುತ್ತೇನೆ. ಪ್ರವಾಸವೆಂದರೆ ನನಗೆ ಮೈಯೆಲ್ಲ ನುಗ್ಗು, ಆದರೆ ವಿನಾಯಕರಿಗೆ ಹಿಗ್ಗು. ಹಡಗದ ಮೇಲೆ ನಾನು 'ಸಮುದ್ರ ಗೀತ'ಗಳನ್ನು ಬರೆದುಕೊಳ್ಳಬೇಕೆಂದು ಅವರು ದುಂಬಾಲು ಬಿದ್ದರು. ವಿಮಾನದಲ್ಲಿ 'ಇಳಾ ಗೀತ' ಹಾಗೂ ಹಲವಾರು ಬಾನಾಡಿ ಕವಿತೆಗಳನ್ನು ಬರೆಯಿಸಿದರು. ಗಾಡಿಯಲ್ಲಿ ಅನೇಕ ಕವಿತೆಗಳನ್ನು ಬರೆಯಿಸಿದ್ದಾರೆ. ವಿಮಾನದಲ್ಲಿ ಪ್ರಾರಂಭವಾದ 'ಇಳಾ ಗೀತ' ಮುಂದೆ ಕೆಲವು ದಿನಗಳ ಮೇಲೆ ಬಾಗಲುಕೋಟೆಯಿಂದ ಹುಬ್ಬಳ್ಳಿಯವರೆಗೆ ಗಾಡಿಯಲ್ಲಿ, ಹಾಗೂ ನಂತರ ಹುಬ್ಬಳ್ಳಿ ರೇಲ್ವೆ ಪ್ಲ್ಯಾಟ್‌ಫಾರ್ಮಿನಮೇಲೆ ಮುಗಿಯಿತು. ವಿಮರ್ಶಾತ್ಮಕ ಲೇಖನಗಳನ್ನು ಬರೆಯಬೇಕಾದಾಗ ನನ್ನ ಪ್ರಭಾವಕ್ಕೆ ಸಿಕ್ಕುಬೀಳುತ್ತಾರೆ. ಏಕೆಂದರೆ ಅಲ್ಲಿ ದೃಷ್ಟಿ ಅವರದಾದರೂ ಪಾಂಡಿತ್ಯದ ಪರಿಸರ ನನ್ನದಿರುತ್ತದೆ. ಆದರೆ ಅವರ ಕಾವ್ಯಸ್ಫೂರ್ತಿಗೆ ಸಮಯ ಸಂದರ್ಭಗಳ ಪರಿವೆ ಇಲ್ಲ. ಅಲ್ಲದೆ ನೂತನ ಆವರಣವಿದ್ದಂತೆ ಅವರಿಗೆ ವಿಲಕ್ಷಣ ಉದ್ದೀಪನ ಬರುತ್ತದೆ. ಅಮೆರಿಕೆಯಲ್ಲಿ ನನ್ನ 120 ದಿನಗಳ ಪ್ರವಾಸದಲ್ಲಿ ವಿನಾಯಕರು 128 ಕವಿತೆಗಳನ್ನು ರಚಿಸಿದರು. ನವೀನ ಕ್ಷಿತಿಜ, ಪರದೇಶದ, ಸ್ವದೇಶದ ಐತಿಹಾಸಿಕ ಸ್ಥಳಗಳು - ಇವುಗಳಿಗಾಗಿ ವಿನಾಯಕರು ಜಪ್ಪಿಸಿಕೊಂಡು ಕೂತಿರುತ್ತಾರೆ.

ನಾನು ಒಮ್ಮೊಮ್ಮೆ ವಿಚಾರಿಸಿದ್ದೇನೆ, ವಿನಾಯಕರು ಬೆಳೆಯುವ ರೀತಿ ಯಾವುದು? ನನ್ನ ಜೀವನದ ಅಕ್ಕಿ ಅವರಿಗೆ ಅನ್ನವಾಗಿದೆ. ಅದನುಂಡೇ ಅವರು ಬೆಳೆದಿದ್ದಾರೆ. ಅವರ ಊಟಕ್ಕೆ ನನ್ನ ಜಗತ್ತು ಪಾಕಶಾಲೆ ಮಾತ್ರ. ವಿನಾಯಕ

ತಾವಾಗಿಯೇ ಕೇಳಿದ ಯಾವ ಬೇಕು-ಬೇಡಗಳೂ ಇಲ್ಲ. ನನ್ನ ಜೀವನದಲ್ಲಿ ಬೇಡಾದುದನ್ನು ತ್ಯಜಿಸಿ ಉಳಿದುದನ್ನು ಅವರು ಭುಂಜಿಸುತ್ತಾರೆ.

ನನ್ನ ಜೀವನಕಾಸಾರವನ್ನು ಹೊಕ್ಕು ಅಲ್ಲಿ ಅರವಿಂದವಾಗಿ ಬೆಳೆದುಬರುತ್ತಿರುವ ಈ ವಿನಾಯಕರ ಭವಿಷ್ಯ ಏನು? ನನ್ನದು ಪರಿಮಿತ ಜೀವನ. ಈ ಮರ್ತ್ಯ ಜೀವನದ ಪರಿಮಾಣದಿಂದ ವಿನಾಯಕರ ಆಯುಷ್ಯವನ್ನು ಅಳೆಯಲಾರೆ. ಅದಕ್ಕೂ ಹೆಚ್ಚು ಕಾಲ ಬಾಳುವದು ವಿನಾಯಕರ ಕಾವ್ಯ ಸೃಷ್ಟಿ. ಆದರೆ ಆ ಕಾವ್ಯ ಸೃಷ್ಟಿಗೂ ಕಾಲದ ಪರಿಮಿತಿ ಇದೆ. ವಿನಾಯಕರು ಮಾತ್ರ ಕಾಲದ ಪರಿಮಿತಿಯನ್ನು ಮೀರಿ ನಿಂತಿದ್ದಾರೆ. ಸೂರ್ಯೋದಯದಂತೆ ಅವರ ಉದಯವಾಯಿತು. ನನ್ನ ದಿನ-ರಾತ್ರಿಗಳು ಅವರವಲ್ಲ. ನನ್ನ ಮೂವತ್ತು ವರುಷ ಅವರಿಗೆ ಒಂದು ದಿನವಾದರೆ ಅನುಭವ ಪೂರ್ಣವಾದ ಒಂದು ದಿನ ಅವರಿಗೆ ಮೂವತ್ತು ವರ್ಷವಾಗಬಲ್ಲದು. ಅವರ ಕಾಲದ ಮಾನದಂಡವೇ ಬೇರೆ. ಅನಂತತೆಯ ದೃಷ್ಟಿಯಿಂದ ಅವರು ಕಾಲವನ್ನು ಅಳೆಯುತ್ತಾರೆ. ಶಿಲಾಖಂಡವಾದ ನನ್ನಲ್ಲಿ ಒಡಮೂಡಿ ದಿನದಿನಕ್ಕೂ ತನ್ನನ್ನು ಕಂಡರಿಸಿಕೊಳ್ಳುತ್ತಿರುವ ಈ ವಿನಾಯಕ ಮೂರ್ತಿಯನ್ನು ನೋಡಿ ನನಗೇ ಕುತೂಹಲವಾಗುತ್ತದೆ. ನನ್ನಂತಹ ಎಷ್ಟು ದೇಹಗಳನ್ನು ಇವರು ತೊಡುವವರಿದ್ದಾರೋ ಕಾಣೆ. ಆದರೆ ಅವರ ಸನ್ನಿಧಿ ನನಗೆ ಪವಿತ್ರವಾಗಿದೆ.

ವಿನಾಯಕತ್ವ ಹೆಚ್ಚು ಸ್ಪಷ್ಟವಾಗಿ ಒಡಮೂಡಿದಂತೆ ಅವರ ಕಾವ್ಯಸೃಷ್ಟಿಯಲ್ಲಿಯೂ ಹೆಚ್ಚಿನ ಆಳ ಹಾಗೂ ಸೌಂದರ್ಯ ಬಂದೀತು. ನನ್ನ ಹಾಗೂ ವಿನಾಯಕರ ಸಂಬಂಧಗಳನ್ನು ಸೆರೆಹಿಡಿಯುವ ವಿಧಾನವೆಂದರೆ ಅವರ ಕಾವ್ಯಸೃಷ್ಟಿಯೆಂದು ನಾನು ತಿಳಿದಿದ್ದೇನೆ. ಈ ಕಾವ್ಯಸೃಷ್ಟಿ ಒಂದು ವಿಶಿಷ್ಟ ಯುಗಮಾನದ್ದು; ಒಂದು ದೇಶ ಹಾಗೂ ಒಂದು ಪ್ರಾಂತದ ಸಂಸ್ಕೃತಿಯಿಂದ ಪುಟ್ಟಿದದ್ದು. ಆದರಂತೆ ಈ ಕಾವ್ಯಸೃಷ್ಟಿಯಲ್ಲಿ ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ಅಂಶಗಳಿದ್ದರೆ ಅವು ವಿನಾಯಕರಿಂದ ಬಂದಿವೆ.

''ಪ್ರಪಂಚ ನಿಮ್ಮನ್ನು ಹೇಗೆ ಕಾಣಬೇಕೆಂದು ನೀವು ಬಯಸುತ್ತೀರಿ?'' ಎಂದು ನಾನು ವಿನಾಯಕರನ್ನು ಕೇಳಿದೆ.

''ನಾನಿದ್ದ ಹಾಗೆ,'' ಎಂದರು ಅವರು.

''ನಿಮ್ಮ ಕವನವನ್ನು ಬಿಟ್ಟುಬಿಡಿರಿ. ನಿಮ್ಮ ಕೂರ್ಮವೃತ್ತಿ ಏನೆಂದು ತಿಳಿಯೋಣ?''

''ನೀನು ಹಾಕಿದ ಹಂದರದ ಮೇಲೆ ಬೆಳೆದ ಬಳ್ಳಿ ನಾನು. ಮುಖ್ಯವಾಗಿ ನಾನು ಸೂರ್ಯ ಇಲ್ಲವೆ ಚಂದ್ರ. ಆದರೆ ಗ್ರಹಣ ಹಿಡಿದ ಸೂರ್ಯ-ಚಂದ್ರ. ಈ ಗ್ರಹಣ ಮೆಲ್ಲನೆ ಮುಗಿಯುತ್ತಿದೆ. ಮೂರರಲ್ಲಿ ಒಂದು ಪಾಲಾದರೂ ಬಿಡುವುದರಲ್ಲಿದೆ. ನಾನು ಕೇವಲ ಸಾಹಿತಿಯಲ್ಲ. ಆದರೆ ಸಾಹಿತ್ಯ ನನ್ನ ಸಾಧನ ಮಾರ್ಗಗಳಲ್ಲಿ ಮುಖ್ಯವಾಗಿದೆ. ಚಿಂತನೆ, ಕಾರ್ಯೋನ್ಮುಖತೆ... ಇವೂ ನನಗೆ ಹೊರತಾಗಿಲ್ಲ. ಇವು ಮುಪ್ಪುರಿಗೊಂಡು ಬೆಳೆದಾಗ ವ್ಯಕ್ತಿತ್ವದ ಬೇರೆ ಪೈಲುಗಳು ಗೋಚರವಾಗಬಹುದು. ಅಂತೂ ಈ ವರ್ಧಮಾನ ವ್ಯಕ್ತಿತ್ವದ ವಾಣಿಯೇ ನನ್ನ ಸಾಹಿತ್ಯ. ವಿಕಸನಗೊಳ್ಳುತ್ತಿರುವ ಈ ಚೈತನ್ಯ ಮುಖ್ಯ. ಇದನ್ನು ಬೆಳೆಯಿಸಿಕೊಳ್ಳಲು ನನ್ನ ಸಾಹಿತ್ಯ ಸಿದ್ಧಿಯು ನನಗೊಂದು ಸಾಧನ. ನನ್ನ ಸಾಹಿತ್ಯದಲ್ಲಿ ಈ ಸಂಕೀರ್ಣ ಚಿನ್ಮಯ ವ್ಯಕ್ತಿತ್ವವನ್ನು ಓದುಗರು ಕಂಡರೆ - ಆ ಸಾಹಿತ್ಯ ಸಫಲವಾದಂತೆ. ನನ್ನ ಸಫಲತೆ ಅದನ್ನು ಅವಲಂಬಿಸಿ ಕುಳಿತಿಲ್ಲ. ಬರೆದು ಮುಗಿದಾದ ಮೇಲೆ ಬರವಣಿಗೆಗೂ ಬರೆಹಗಾರನಿಗೂ ಯಾವ ಸಂಬಂಧವೇ ಇಲ್ಲವೆಂದು ನನ್ನ ಅಭಿಪ್ರಾಯ. ಕವಿಯ ದೈವ ಬೇರೆ. ಅವನು ಬರೆದ ಕಾವ್ಯದ ದೈವ ಬೇರೆ.''

''ನಿಮ್ಮ ಸಾಹಿತ್ಯವನ್ನು ಜನ ಸ್ವೀಕರಿಸಿದ ಬಗ್ಗೆ ನಿಮಗೇನಾದರೂ ಕೊರಗು ಉಂಟೇ?'' ಎಂದು ವಿನಾಯಕರನ್ನು ಕೇಳಿದೆ.

''ನಮ್ಮ ಜನಕ್ಕೆ ಓದಿನ ಸವಿ ಇನ್ನೂ ಸಾಕಷ್ಟು ಹಿಡಿದಿಲ್ಲ. ಸಾಹಿತ್ಯವನ್ನು ಸವಿಯಬಲ್ಲವರು ಆಂಗ್ಲ ಇಲ್ಲವೆ ಸಂಸ್ಕೃತ ಇಲ್ಲವೆ ಪ್ರಾಚೀನ ಕನ್ನಡ ಸಾಹಿತ್ಯಕ್ಕೆ ಅಂಟಿಕೊಳ್ಳುತ್ತಾರೆ. ಇಲ್ಲವೆ ಪತ್ತೇದಾರಿ ಕಾದಂಬರಿಗಳಿಗೆ ಶರಣುಹೋಗುತ್ತಾರೆ.

ಕನ್ನಡ ಸಾಹಿತಿಗೆ ಕನ್ನಡ ನಾಡಿನಲ್ಲಿ ಒಂದು ವಿಶಿಷ್ಟ ಸ್ಥಾನವು ತನ್ನ ಕಾಲಮಾನದಲ್ಲಿದೆ. ತನ್ನ ಯುಗದ ಕನ್ನಡದ ಬಹುಮುಖ ಜೀವನವನ್ನು ಆ ಯುಗದ ಕನ್ನಡ ಸಾಹಿತಿಯೇ ಚಿತ್ರಿಸಬಲ್ಲ. ಈ ಬೆಳಕು ಬೇರೆ ಕಡೆಯಿಂದ ಬರಲಾರದು. ಇದನ್ನು ಕನ್ನಡದ ಜನ ಸಾಮಾನ್ಯವಾಗಿ ಇನ್ನೂ ಗ್ರಹಿಸಿ ಕೊಂಡಿಲ್ಲ. ಹೀಗಾಗಿ ತನ್ನ ಯುಗದ ಸಂಸ್ಕೃತಿಯ ಕಾಣಿಕೆಯನ್ನು ಕನ್ನಡಿಗ ಇನ್ನೂ ಸ್ವೀಕರಿಸಬೇಕಾಗಿದೆ. ಈಗ ಓರ್ವ ಲೇಖಕನಿಗೆ ಇನ್ನೊಬ್ಬ ಲೇಖಕನೇ ಓದುಗನಾದಂತಾಗಿದೆ,'' ಎಂದರು ವಿನಾಯಕರು.

''ಅಂದರೆ? ಉಳಿದ ಓದುಗರೇ ಇಲ್ಲವೆ?'' ಎಂದು ನಾನು ಕೇಳಿದೆ.

''ಇದ್ದಾರೆ, ಹಲವರು ಮಾತ್ರ. ನನ್ನ ಕೃತಿಗಳ ಬಗ್ಗೆ ಹೇಳುವದಾದರೆ, - ಅವುಗಳಲ್ಲಿ ಕೆಲವು ಬೆಳಕನ್ನು ಕೆಲವರಿಗೆ ಕೊಟ್ಟಿವೆ. 'ಸಮರಸವೇ ಜೀವನ' ಸಾಮಾನ್ಯರಿಗೂ ಒಂದು ದಾರಿಯನ್ನು ತೋರಿಸಿದೆ. ತಿಳಿದವರಿಗೆ ನನ್ನ ಕಾವ್ಯ ಒಂದು ವಿಶಿಷ್ಟ ಆನಂದವನ್ನು ಕೊಟ್ಟಿದೆ, - ಪ್ರೇರಣೆಯೂ ಆಗಿದೆ. ನನಗಾವ ಕೊರಗೂ ಇಲ್ಲ.''

''ಇಂದಿನ ಕವಿಗಳಲ್ಲಿ ನಿಮ್ಮ ಸ್ಥಾನಮಾನ ಯಾವುದು?'' ಎಂದೆ ನಾನು.

ವಿನಾಯಕರೆಂದರು: ''ಅದು ಇನ್ನು ನೂರು ವರ್ಷಗಳ ಮೇಲೆ ಕೇಳಬೇಕಾದ ಪ್ರಶ್ನೆ! ಇಂದಿನ ಬೈರನ್ ಕಾವ್ಯದ ಚಿರಂತನ ದೃಷ್ಟಿಯಲ್ಲಿ ನಾಳೆ ಎರಡೇ 'ರನ್' ತೆಗೆದ ಕವಿಯಾಗಬಹುದು, ಇಂದಿನ ಶೆಲ್ಲಿ ಬರಿ 30-40 ಓದುಗರನ್ನು ದೊರಕಿಸಿದ್ದರೂ ನಾಳೆ ಜನದ ಪ್ರಾಣಪದಕವಾಗಬಹುದು. ಇದು ಕಾಲಪುರುಷನ ವಿಮರ್ಶೆ. ಅದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಆದರೂ ಒಟ್ಟಾರೆ ಜೊಳ್ಳು ತಿರುಳಿನ ಸಮಾಲೋಚನೆ ಇಂದು ಸಾಧ್ಯ. ಆ ದೃಷ್ಟಿಯಿಂದ ವಿನಾಯಕತ್ವದ ತಿರುಳಿನಲ್ಲಿ ನನಗೆ ವಿಶ್ವಾಸವಿದೆ..''

''ಕರ್ನಾಟಕದಲ್ಲಿಷ್ಟು ನಿಮ್ಮ ಕಾವ್ಯದ ರಸ ಗ್ರಹಣ ನಡೆದರೆ ನಿಮಗೆ ತೃಪ್ತಿಯಿದೆಯೇ? ನಾಡಹೊರಗಿನ ಕೀರ್ತಿ ಬೇಡವೇ?'' ಎಂದು ಕೇಳಿದೆ.

ವಿನಾಯಕರೆಂದರು: ''ಕೀರ್ತಿಯ ಮೃಗಜಲಕ್ಕಾಗಿ ನಾನು ಅರಣ್ಯದಲ್ಲಿ ಅಲೆಯಲಾರೆ. ಓರ್ವ ನಾಡಿನ ಕವಿಯ ಕೀರ್ತಿ ಆ ನಾಡಿನ ಮಹತಿಯನ್ನು ಅವಲಂಬಿಸಿರುತ್ತದೆ. ಇಂದು ಇಂಗ್ಲೀಷಿನಲ್ಲಿ ಬರೆಯುವ ಒಬ್ಬ ಎಬ್ಬಂಕನಿಗೂ ಜಗತ್ತಿನ ತುಂಬ ವಾಚಕ ವರ್ಗ ದೊರೆಯುತ್ತದೆ. ಕನ್ನಡದಲ್ಲಿ ಇಲ್ಲವೆ ಅರಬ್ಬಿಯಲ್ಲಿ ಬರೆಯುವ ಶ್ರೇಷ್ಠ ಕವಿಯ ಕೃತಿಗಳನ್ನು ಅವನ ದೇಶದಲ್ಲಿ ಸಹ ಎಲ್ಲರೂ ಓದಿರಲಾರರು. ಇದಕ್ಕೆಲ್ಲ ನಾವೇನು ಮಾಡುವದಿದೆ? ನಮ್ಮ ದೇಶದ ಹಾಗೂ ಪ್ರಾಂತದ ದೈವದಲ್ಲಿ ನಮ್ಮ ದೈವವೂ ಲೀನವಾಗಿದೆ. ಕೀರ್ತಿಗಾಗಿ ಕಾವ್ಯವನ್ನು ಬರೆಯುತ್ತಿದ್ದರೆ ಈ ಎಲ್ಲ ಪ್ರಶ್ನೆಗಳು ಬಾಧಿಸುತ್ತವೆ. ಸ್ವಸಂತೋಷಕ್ಕಾಗಿ ಬರೆದ ಕಾವ್ಯದ ಕೀರ್ತಿ ಏನಿದ್ದರೂ ಕವಿಗೆ ಸಂತೋಷವೇ ಇದೆ. ಸ್ವಂತ ಹಣ ಖರ್ಚುಮಾಡದೆ ಕಾವ್ಯವನ್ನು ಅಚ್ಚುಹಾಕಿಸುವದೂ ದುಃಸಾಧ್ಯವಾದ ಈ ಕಾಲದಲ್ಲಿ ಅಲ್ಲದ ಸಲ್ಲದ ಅಪೇಕ್ಷೆಗಳನ್ನು ಇಟ್ಟುಕೊಳ್ಳುವುದು ಸಹ ಮೂರ್ಖತನವಾದೀತು.''

ಬರಬರುತ್ತ ಕಾವೇರತೊಡಗಿತ್ತು. ವಿನಾಯಕರು ಮತ್ತೆ ತಮ್ಮ ಗವಿ ಸೇರಲು ಆತುರರಾಗಿದ್ದರು. ಇಷ್ಟೆಲ್ಲ ಚರ್ಚೆಯೇ ಅವರನ್ನು ಮೊದಲು ಕೆಣಕಿತ್ತು.

ಏನೋ ನೆನಪಾಗಿ ನಾನೆಂದೆ: ''ಅಲ್ಲ, ನಿಮ್ಮ ಕವನಗಳ ಭಾಷಾಂತರ..... ''

''ಭಾಷಾಂತರವೂ ಇಲ್ಲ, ವೇಷಾಂತರವೂ ಇಲ್ಲ. ಇನ್ನು ನೀನು ನಿನ್ನ ಮನೆಗೆ ನಡೆ. ನಾನು ಗವಿ ಸೇರುತ್ತೇನೆ,'' ಎಂದು ವಿನಾಯಕರು ಮತ್ತೆ ಗೌಪ್ಯಧನವಾದರು. ●

---

ನೋಡಿ:

'ಸಮನ್ವಯದ ಉಪಾಸಕ ಗೋಕಾಕರು' - ಕಸ್ತೂರಿ, ಜುಲೈ 1978

ಡಾ. ಗೋಕಾಕರ

# ಭಾರತ ಸಿಂಧುರಶ್ಮಿ

• ಕೆ.ಎಸ್. ನಿಸಾರ್ ಅಹಮದ್ •

**1982**ರಲ್ಲಿ ಪ್ರಕಟವಾದ ''ಭಾರತ ಸಿಂಧು ರಶ್ಮಿ'' ಮಹಾಕಾವ್ಯ, ಗೋಕಾಕರ ಏಳೆಂಟು ವರ್ಷಗಳ ತಪಃಫಲ. ಅದರ ಹಿಂದಿನ ಸಿದ್ಧತೆ ಬಹುಶಃ ಹಲವು ದಶಕಗಳದ್ದು. 'ತ್ರಿವಿಕ್ರಮರ ಆಕಾಶಗಂಗೆ'ಯಲ್ಲಿ ಅಂಕುರಗೊಂಡ ಲೇಖಕರ ಮಹಾಕಾವ್ಯಾಸಕ್ತಿ, 'ತ್ರಿಶಂಕುವಿನ ಪ್ರಜ್ಞಾ ಪ್ರಭಾತ'ದಲ್ಲಿ ವಿಶ್ವಾಮಿತ್ರನ ಅರ್ಥವತ್ತಾದ ವ್ಯಕ್ತಿಮೆಯ ಆಳ ಅಗಲಗಳನ್ನು ಗ್ರಹಿಸಿ, ಕೊನೆಯಲ್ಲಿ ಆಧುನಿಕ ಮನುಷ್ಯನ ಜಟಿಲ ಬದುಕಿನ ಸಮರ್ಥ ಸಂಕೇತವಾಗಿ, 'ಭಾರತ ಸಿಂಧುರಶ್ಮಿ' ಯಲ್ಲಿ ಔನ್ನತ್ಯ, ಗರಿಮೆಗಳನ್ನು ದಕ್ಕಿಸಿಕೊಂಡಿತು. ವಿಶ್ವಾಮಿತ್ರನನ್ನು ಕೇಂದ್ರವಾಗಿಸಿಕೊಂಡು ಬೃಹತ್ಕಾವ್ಯ ರಚನೆಮಾಡುವ ಗೋಕಾಕರ ಹಂಬಲಕ್ಕೆ ಇಂಬು ದೊರೆತದ್ದು ಇಪ್ಪತ್ತು ವರ್ಷಗಳ ಹಿಂದೆ ಅವರು ಕೈಕೊಂಡ ವೇದಾಧ್ಯಯನ ಹಾಗೂ ಸಂಬಂಧಪಟ್ಟ ಕೃತಿಗಳ ಅಭ್ಯಾಸದಿಂದ. ಈ ಕಾವ್ಯದಲ್ಲಿ ಇನ್ನೂರಕ್ಕೂ ಮಿಕ್ಕು ಪಾತ್ರಗಳು ತಮ್ಮ ಔಚಿತ್ಯಪೂರ್ಣ ಅನನ್ಯತೆಯಿಂದ ಶೋಭಿಸಿವೆ. ಇದರಲ್ಲಿ ಕಾವ್ಯಾತ್ಮಕತೆಗಿಂತ ನಿರೂಪಣಾತ್ಮಕ ಅಂಶಕ್ಕೆ ಹೆಚ್ಚು ಒತ್ತು ಸಿಕ್ಕಿದೆ. ಇದರ ವಸ್ತು ಭಾರತವರ್ಷದ ಆರ್ಷ ಇತಿಹಾಸವನ್ನು ಆಧರಿಸಿದೆ; ಕನ್ನಡಕ್ಕೆ ನವೀನವಾಗಿದೆ. ಕನ್ನಡದ ಹಿಂದಿನ ಮಹಾಕಾವ್ಯಗಳಿಗೆ ಒಂದು ಸಿದ್ಧವಸ್ತುವಿದ್ದು, ಕವಿ ತನ್ನ ದರ್ಶನಕ್ಕೆ ಅನುಸಾರವಾಗಿ ಆ ಹಳೆಯ ವಸ್ತುವನ್ನು ಸಾಂಕೇತಿಕವಾಗಿ ಬಳಸಿಕೊಂಡಿರುವುದನ್ನು ನೋಡುತ್ತೇವೆ. ಪಂಪ, ರನ್ನ, ಕುಮಾರವ್ಯಾಸಾದಿಗಳಿಂದ ಹಿಡಿದು ಕುವೆಂಪು ಅವರನ್ನು ಉದಾಹರಿಸಬಹುದು. ಆದರೆ ಗೋಕಾಕರ 'ಭಾರತ ಸಿಂಧುರಶ್ಮಿ' ಮಹಾಕೃತಿಗೆ ಪೂರ್ವಸಿದ್ಧವಾದ ವಿಷಯವಿಲ್ಲ. ಭಾರತದ ಪ್ರಪ್ರಾಚೀನ ಚರಿತ್ರೆಯ ಉಷಃಕಾಲದ ಕೆಲವು ಸಂಗತಿಗಳಿಂದ ಅವರು ಒಂದು ಮಹತ್ ಕಥಾನಕವನ್ನೇ ರಚಿಸಿದ್ದಾರೆ. ಕವಿಯ ಕಲ್ಪನೆ, ನಿರೂಪಣೆ, ಕಾಣ್ಕೆಗಳು ಈ ಕಾವ್ಯದ ಹಲವು ಬಿಡಿ ಎಳೆಗಳನ್ನು ಬೆಸೆದು ಏಕಸೂತ್ರದಲ್ಲಿ ಹುರಿಗೊಳಿಸಿವೆ.

'ಭಾರತ ಸಿಂಧುರಶ್ಮಿ'ಯ ರಚನೆಗೆ ಮೂಲ ಪ್ರೇರಣೆ ಪ್ರಾಯಃ ಮಿಲ್ಟನ್. ಆತ ಸುರಾಸುರರ ಯುದ್ಧಗಳ ಜೊತೆಗೆ ಧರ್ಮ ಆಧ್ಯಾತ್ಮಗಳನ್ನೂ ಕೂಡಿಸಿದ. ಈ ಸಮನ್ವಯ ಗೋಕಾಕರಿಗೆ ಅತಿ ಮೆಚ್ಚಾಯಿತು. ಭಾರತದ ಸಂದರ್ಭದಲ್ಲಿ ವೇದಕಾಲೀನ ವಸ್ತು ಈ ಆಶಯ ಪೂರೈಕೆಗೆ ಸರ್ವಸಮರ್ಥವೆನ್ನಿಸಿತು.

'ಭಾರತ ಸಿಂಧುರಶ್ಮಿ' ಎಂದು ಈ ಮಹಾಕಾವ್ಯಕ್ಕೆ ಹೆಸರಿಡಲು ಕಾರಣವಿದೆ. ಈ ತಲೆಬರಹದ ಮೂಲಕ ಅವರು ಒಂದು ಅಂತರಾರ್ಥವನ್ನು ಧ್ವನಿಸಿದ್ದಾರೆ. ಸುದಾಸನ ಕುಲದ ಭರತ ಒಬ್ಬ ಚಕ್ರವರ್ತಿ. ಅವನು ಸಂಘಟಿಸಿದ ರಾಜ್ಯ ಭಾರತ ವರ್ಷ. ಹೀಗಾಗಿ 'ಭಾರತ' ಪದಕ್ಕೆ ಒಂದು ವಿಶಿಷ್ಟವಾದ ಪ್ರಾಚೀನಾರ್ಥವಿದೆ. 'ಸಿಂಧು' ಎನ್ನುವುದು ಅಸ್ತಿತ್ವದ ಒಂದು ಸೆಳಕು.

('ಗಾಂಧಿ ಬಜಾರ್'ನಿಂದ ಸಾಭಾರ)

**ಭಾರತ ಸಿಂಧುರಶ್ಮಿ**

**ವಿನಾಯಕ ಕೃಷ್ಣ ಗೋಕಾಕ**

*'ಭಾರತ ಸಿಂಧುರಶ್ಮಿ' 1986ರಲ್ಲಿ ಮೊಟ್ಟಮೊದಲ ಬಾರಿ ರಾಜಾಜಿ ಪ್ರಶಸ್ತಿಯನ್ನು ಕನ್ನಡಕ್ಕೆ ತಂದುಕೊಟ್ಟಿತು. ತಮಿಳಿನ ಶ್ರೇಷ್ಠ ಕತೆಗಾರರಾಗಿದ್ದ ರಾಜಕೀಯ ಚತುರ ಚಕ್ರವರ್ತಿ ರಾಜಗೋಪಾಲಾಚಾರಿ ಅವರ ಹೆಸರಿನಲ್ಲಿ ಭಾರತೀಯ ವಿದ್ಯಾಭವನ ಸ್ಥಾಪಿಸಿದ ಪ್ರಶಸ್ತಿ ಇದು. ಭಾರತೀಯ ಭಾಷೆಗಳಲ್ಲಿ ಧಾರ್ಮಿಕ ಮತ್ತು ನೈತಿಕ ಮೌಲ್ಯಗಳನ್ನು ಪ್ರತಿಪಾದಿಸುವಂಥ, ಒಂದು ಗೊತ್ತಾದ ಅವಧಿಯಲ್ಲಿ ರಚಿಸಲ್ಪಟ್ಟ ಸಾಹಿತ್ಯ ಕೃತಿಗೆ ಈ ಪ್ರಶಸ್ತಿ. ಕರ್ನಾಟಕ ಸಾಹಿತ್ಯ ಅಕಾಡೆಮಿಯೂ ಕೆಲವು ವರ್ಷಗಳ ಮೊದಲು ವರ್ಷದ ಶ್ರೇಷ್ಠ ಸೃಜನಶೀಲ ಸಾಹಿತ್ಯ ಪ್ರಶಸ್ತಿಯನ್ನು 'ಸಿಂಧುರಶ್ಮಿ'ಗೆ ನೀಡಿತು. ವಿನಾಯಕರು 'ಸಿಂಧುರಶ್ಮಿ'ಯ ಸಾರಾಂಶವನ್ನು ಇಂಗ್ಲಿಷಿನಲ್ಲಿ ಇತ್ತಿದ್ದಾರೆ.*

(stream of existence). 'ರಶ್ಮಿ' ಎನ್ನುವುದು ಪ್ರಜ್ಞೆಯ ಒಂದು ಕಿರಣ. ಈ ರಶ್ಮಿ ಸಿಂಧುವಿನಲ್ಲಿ ಲೀನವಾಗಬೇಕು. ಇಲ್ಲದಿದ್ದಲ್ಲಿ ಮನುಷ್ಯನ ತತ್ವ, ವೇದಾಂತಗಳು ಕಾರ್ಯವ್ಯವಹಾರಗಳು ವಿಘಟಿತಗೊಂಡು ಪ್ರತ್ಯೇಕ ನಿಲ್ಲುತ್ತವೆ. ಅಂದರೆ 'ಪ್ರಜ್ಞೆ' ಅಸ್ತಿತ್ವದಲ್ಲಿ ಸಮಾವೇಶವಾದಾಗ ಮನುಷ್ಯ ಜೀವನ ಪರಿಪೂರ್ಣಗೊಳ್ಳುತ್ತದೆ.

ಗೋಕಾಕರಿಗೆ ಈ ಮಹಾಕಾವ್ಯ ರಚನೆಯ ಸಂದರ್ಭದಲ್ಲಿ ವೇದಕಾಲೀನ ವಿಶ್ವಾಮಿತ್ರನ ಸಂಕೀರ್ಣ ವ್ಯಕ್ತಿತ್ವ ಆಕರ್ಷಿಸಿತು. ವ್ಯಕ್ತಿಯೊಬ್ಬ ತನ್ನ ಬದುಕಿನ ಪರಿಪೂರ್ಣತೆಯತ್ತ ಸಾಗಬೇಕಾದಲ್ಲಿ ಯಾವ ಯಾವ ಅಂಶಗಳು ಬೇಕಾಗುವವೋ ಅವೆಲ್ಲ ವಿಶ್ವಾಮಿತ್ರನಲ್ಲಿ ಇರುವಂತೆ ಅವರಿಗೆ ತೋರಿತು. ಅವನು ರಾಜನಾಗಿ ಸಮರ್ಥ ಆಡಳಿತಗಾರನಾಗಿದ್ದ. ಪುರೋಹಿತನಾಗಿ ಸಾಮ್ರಾಜ್ಯ ನಿರ್ಮಾಣಕ್ಕೆ ಕಾರಣನಾಗಿದ್ದ. ಜೊತೆಗೇ ಋಷಿ ಮತ್ತು ದ್ರಷ್ಟಾರನೂ ಆಗಿದ್ದ. ಋಗ್ವೇದದ ಸೂಕ್ತಗಳಲ್ಲಿ ಇದಕ್ಕೆ ಸಾಕ್ಷ್ಯಗಳು ಸಿಗುತ್ತವೆ. ವಿಶ್ವಾಮಿತ್ರನ ಋಷಿತ್ವ ಸ್ವಭಾವಸಿದ್ಧವಾದದ್ದು. ದ್ರಷ್ಟಾರತನ ದೀರ್ಘ ತಪಸ್ಸಿನಿಂದ ಸಂಪಾದಿಸಿಕೊಂಡದ್ದು. ವಿಶ್ವಾಮಿತ್ರನ ಜಟಿಲತಮ ವ್ಯಕ್ತಿತ್ವದಲ್ಲಿ ಕಾಣ್ಕೆ (vision) ಮತ್ತು ಮಾಳ್ಕೆ (executive ability) ಸರಿಸಮಾನವಾಗಿದ್ದವು. ಇದೊಂದು ವಿರಳ ಗುಣ. ಹೀಗಿದ್ದಾಗ ಬದುಕು ಪೂರ್ಣತೆಯ ಹಾದಿಯನ್ನು ಹಿಡಿಯುತ್ತದೆ. ಆಮೇಲಿನ ಪುರಾಣ ಯುಗಕ್ಕೆ ಬಂದರೆ ಯೋಗೀಶ್ವರನಾದ ಕೃಷ್ಣನಲ್ಲಿ ಪರಿಪೂರ್ಣ ಕಾಣ್ಕೆಯಿತ್ತು. ಧನುರ್ಧಾರಿಯಾದ ಅರ್ಜುನನಲ್ಲಿ ಪರಿಪೂರ್ಣ ಮಾಳ್ಕೆಯ ಗುಣವಿತ್ತು. ಹೀಗೆ ಈ ಗುಣಗಳು ಬೇರೆ ಬೇರೆ ವ್ಯಕ್ತಿಗಳಲ್ಲಿ ಸೇರ್ಪಡೆಯಾಗಿದ್ದವು. ಇವರ ಕಾಲಕ್ಕೆ ಸುಮಾರು ಒಂದು ಸಾವಿರ ವರ್ಷಗಳ ಹಿಂದಾದರೂ ಈ ಎರಡೂ ಮಹದ್ಗುಣಗಳ ಸಾಮರಸ್ಯವನ್ನು ಒಬ್ಬನೇ ವ್ಯಕ್ತಿಯಲ್ಲಿ ದರ್ಶಿಸುತ್ತೇವೆ. ಅವನೇ ವಿಶ್ವಾಮಿತ್ರ. ಈ ಸಂಕೀರ್ಣತರವಾದ ವ್ಯಕ್ತಿತ್ವ ಕೇವಲ ಹಳಗಾಲದ ವಿಶಿಷ್ಟ ಬಳು

ವಳಿಯಲ್ಲ. ಪ್ರತಿಯುಗದಲ್ಲೂ ಇಂಥ ವಿಶಿಷ್ಟ ಚೇತನದ ಕೆಲವೊಂದು ನಮೂನೆಗಳು ಇದ್ದೇ ಇರುತ್ತವೆ.

ಎಷ್ಟು ಮುಖದಿಂದ ಜೀವನವನ್ನು ಅನುಭವಿಸಲು ಸಾಧ್ಯವೋ ಅಷ್ಟು ಹೆಚ್ಚು ಹೆಚ್ಚು ಸಂತೋಷ ಸಮಾಧಾನಗಳು ವ್ಯಕ್ತಿ ಬದುಕಿಗೆ ಕೂಡಿಕೊಳ್ಳುತ್ತವೆ. ಈ ಕಾರಣಕ್ಕಾಗಿ ಅವರು ವ್ಯಕ್ತಿತ್ವದ ಸಂಕೀರ್ಣತೆಯನ್ನು ಅಧಿಕಗೊಳಿಸಿಕೊಳ್ಳಲು ಹವಣಿಸುತ್ತಾರೆ. ಕವಿಯ ಬದುಕೂ ಇಂಥ ಪೂರ್ಣ ಸಂಕೀರ್ಣತೆಯ ಉಪಾಸನೆಯಿಂದ ಸಮೃದ್ಧಗೊಂಡಿದೆ. ಅನುಭವ ಸಂಕೀರ್ಣವಿದ್ದಷ್ಟೂ ಆನಂದ ಉತ್ಕಟವಾಗುತ್ತ ಹೋಗುವ ಪರಿಯನ್ನು ಅವರು ಮನಗಂಡಿದ್ದಾರೆ. ಪ್ರಜ್ಞೆ, ಆಳ, ಎತ್ತರ ಚಿತ್ತರಗಳನ್ನು ಪಡೆಯುವಂತ ದಿನನಿತ್ಯ ಬದುಕನ್ನು ಸೂಕ್ಷ್ಮೀಕರಿಸುವುದು ಗೋಕಾಕರ ಗುರಿಯಾಗಿದ್ದ ಕಾಲವದು. ಪ್ರಜ್ಞೆ ದೇದೀಪ್ಯಮಾನವಾದಷ್ಟೂ ಆನಂದಕರಗೊಳ್ಳುತ್ತದೆ. ಮೃತ್ತಿಕೆ ತಾರಾಮೃತ್ತಿಕೆ ಜ್ಯೋತಿಯಾದಂತೆಲ್ಲ, ಆ ಶುದ್ಧ ಜ್ಯೋತಿ ಮಹದಾನಂದಕರವಾಗುತ್ತದೆ. ಇಂಥ ಸಂಕೀರ್ಣ ವ್ಯಕ್ತಿತ್ವದ ಸಂತತ ಸಾಧನೆ ಗೋಕಾಕರಿಗಿದ್ದುದರಿಂದ, ವಿಶ್ವಾಮಿತ್ರನಲ್ಲಿ ಆ ತೆರನಾದ ವ್ಯಕ್ತಿಮೆಯನ್ನು ಗ್ರಹಿಸಲು ಸಾಧ್ಯವಾಯಿತು. ಸಾಮಾಜಿಕ ಕಾರ್ಯಕಲಾಪಗಳ ಅನುಭವ ಹಾಗೂ ಆಂತರಿಕ ಪ್ರಜ್ಞೆಯ ಸಮನ್ವಯದಿಂದ ಈ ಪೂರ್ಣ ಸಂಕೀರ್ಣತೆ ಮೈತಾಳುತ್ತದೆ. ಇಂಥ ಅಪೂರ್ವ ಗುಣವಿರುವ ವಿಶ್ವಾಮಿತ್ರ, 'ಭಾರತ ಸಿಂಧುರಶ್ಮಿ'ಯ ಪ್ರಧಾನಪಾತ್ರವಾಗಿರುವುದು ಸರ್ವಥಾ ಯೋಗ್ಯವಾಗಿದೆ. ಇವನ ಪ್ರೇರಣೆಯ ಜೊತೆಗೆ ಈ ಮಹಾಕಾವ್ಯ ರಚನೆಗೆ ಮತ್ತೊಂದು ಕಾರಣವೂ ಇದೆ.

ಅದೆಂದರೆ ವಿಶ್ವಾಮಿತ್ರನ ಜೀವನ ಸನ್ನಿವೇಶಕ್ಕೆ ಸಂಬಂಧಿಸಿದ ತ್ರಿಶಂಕುವಿನ ಆಖ್ಯಾನ. ಈ ಆಖ್ಯಾನ 'ಭಾರತ ಸಿಂಧುರಶ್ಮಿ'ಯ ರಚನೆಗೆ ತತ್ಕ್ಷಣಿಕ ಸ್ಫೂರ್ತಿ ನೀಡಿದೆ. ಏಕೆಂದರೆ ತ್ರಿಶಂಕು ಆಧಿಕ ಮಾನವನ ದ್ವಂದ್ವ. 'ಕ್ರೈಸಿಸ್'ಗೆ ಸಂಕೇತ ಹೊಗಬಲ್ಲ ಅವನ ಪರಕೀಯ ಪ್ರಜ್ಞೆ ಇಂದಿನ ಮನುಷ್ಯನ ಸಮಸ್ಯೆಯೂ ಆಗಿದೆ. ಅಂದರೆ ಸುಖ ನೆಮ್ಮದಿಗಳ ಅರಸುವಿಕೆಯಲ್ಲಿ ಇವೊತ್ತಿನ ಮನುಷ್ಯನಿಗೆ ತ್ರಿಶಂಕು ಸ್ಥಿತಿ ಪ್ರಾಪ್ತವಾಗಿದೆ. ಇದು ಯಾಂತ್ರಿಕ ನಾಗರಿಕತೆಯ ಫಲ. ಸುಖಶಾಂತಿಗಳ ತಡಕಾಟವನ್ನು ಅವನು ಹಲವು ನೆಲೆಗಳಲ್ಲಿ, ವಿಧಾನಗಳಲ್ಲಿ ನಡೆಸಿ ವಿಫಲಗೊಳ್ಳುತ್ತಾನೆ. ಸಂತತವಾದ ಹಣಗಾಟ ಅವನ ಬೆನ್ನು ಬಿದ್ದಿರುತ್ತದೆ. ನೆನಪುಗಳಲ್ಲಿ, ಬುದ್ಧಿ ರಾಜ್ಯದಲ್ಲಿ, ಕಲ್ಪಕತೆಯಲ್ಲಿ, ಲೈಂಗಿಕ ಆಸಕ್ತಿಯಲ್ಲಿ ಅವನು ಸಂತೋಷ ನಿರಾಳಗಳನ್ನು ಅಗೆದು ತೆಗೆಯಲು ಪ್ರಯತ್ನಿಸುತ್ತಾನೆ. ಇದರಿಂದ ಅವನು ಗೊಂದಲಗೆಟ್ಟಾಗ, ಪರಿತಪಿಸುವಾಗ, ತ್ರಿಶಂಕುವಿನ ಆಕಾಶಲೋಕ ಸಂಚಾರದಂತೆ ಅವನ ಪಾಡಾಗಬಹುದು. ಈ ವೈಫಲ್ಯದ ವೇದನೆ ಮನುಷ್ಯನನ್ನು ಸದಸದ್ವಿವೇಚನೆಗೆ ಹಚ್ಚಿದರೆ, ಅವನಲ್ಲಿ ತ್ರಿಕರಣ ಶುದ್ಧಿಯಾದೀತು; ಅಂತಃಸ್ಫುರಣದ ಮುಖಾಂತರ ಅವನು ಇಡೀ ಬಹಿರ್ಜಗತ್ತಿನೊಡನೆ ಸಾಮರಸ್ಯ ಇಲ್ಲವೆ ತಾದಾತ್ಮ್ಯ ಹೊಂದಲು ಸಾಧ್ಯ. ಇವತ್ತಿನ ಮಾನವನಿಗೆ ಉಳಿದಿರುವ ಮಾರ್ಗೋಪಾಯ ಇದೊಂದೆ.

'ಭಾರತ ಸಿಂಧುರಶ್ಮಿ'ಯ ರಚನೆಗೆ ಮೂಲಸಯವಾದ ಮತ್ತೊಂದು ಪ್ರೇರಣೆಯನ್ನೂ ಗುರುತಿಸಬಹುದು. ಅದೆಂದರೆ ವಿಶ್ವಾಮಿತ್ರನ ಕಾಲಕ್ಕೂ ನಮ್ಮದಕ್ಕೂ ಇರುವ ಒಂದು ಮುಖ್ಯ ಸಾಮ್ಯ. ಈ ಭೂತ ವರ್ತಮಾನಗಳೆರಡೂ ಪುನರುಜ್ಜೀವನ (renaissance) ದ ಕಾಲಾವಧಿಗಳು. ಒಂದು ಸಂಸ್ಕೃತಿ ತಾತ್ಪೂರ್ತಿಕವಾಗಿ ನಿಶ್ಚೇತನಗೊಂಡು ಸ್ಥಗಿತವಾದಾಗ ಅದರ ಪುನರುತ್ಥಾನಕ್ಕೆ ಪ್ರಚೋದಕರು ಬೇಕಾಗುತ್ತಾರೆ. ನಾಯಕರು, ತೀವ್ರಗಾಮಿಗಳು, ಪ್ರತಿಗಾಮಿಗಳು, ಪುರಸ್ಕರ್ತರು ಹೀಗೆ ಪ್ರಚೋದಕರ ಯಾದಿ ಬೆಳೆಯುತ್ತದೆ. ಇಂಥ ಒಂದು ವಿಶೇಷ ವ್ಯಕ್ತಿ ಸಮುದಾಯ ಕಾಣಸಿಗುವುದು ಪುನರುಜ್ಜೀವನ ಸಮಯದಲ್ಲಿ. 'ಭಾರತ ಸಿಂಧುರಶ್ಮಿ'ಯಲ್ಲಿ ಆ ಕಾಲದ, ಎಂದರೆ ಕ್ರಿ.ಪೂ. 1000ದ ಕಾಲದ, ವ್ಯಕ್ತಿ ಸಮುದಾಯದ ಸ್ವರೂಪ, ಕ್ರಿಯಾಶೀಲತೆ, ಘಟನಾಪರಂಪರೆಗಳ ಚಿತ್ರಣ



ವನ್ನು ಕಾಣಬಹುದು. ಇತಿಹಾಸದ ಎರಡು ಚಹರೆಗಳಾದ ಸಾರ್ವತ್ರಿಕತೆ ಮತ್ತು ಸಮಕಾಲೀನತೆಗಳನ್ನು ಈ ಕಾವ್ಯದಲ್ಲಿ ಬಿಂಬಿಸಲು ಗೋಕಾಕರು ಶ್ರಮಿಸಿದ್ದಾರೆ.

ಒಂದು ಜನಾಂಗದ ಸಂಸ್ಕೃತಿಯ ಪುನರುಜ್ಜೀವನದ ಅಗತ್ಯ ಬೀಳುವುದು ಪ್ರಮುಖವಾಗಿ ಎರಡು ಕಾರಣಗಳಿಗಾಗಿ ಆವರೆಗೂ ಇರದ ಒಂದು ಜಟಿಲ ಸಮಸ್ಯೆ ಅವುಗಳ ಎದುರಾದಾಗ; ಹೊಸ ವಾಸ್ತವದೊಡನೆ, ಸನ್ನಿವೇಶದೊಡನೆ ಸಮನ್ವಯವಾಗಬೇಕಾದ ಸಂದಿಗ್ಧ ಮೂಡಿದಾಗ. ಆಗ ಆರ್ಯ ಜನಾಂಗಕ್ಕೆ ಉಂಟಾದ ಜಟಿಲ ಸಮಸ್ಯೆಯೆಂದರೆ ಅವರ ಹಾಗೂ ದಸ್ಯುಗಳ ನಡುವಣ ವಿರಸ, ಯುದ್ಧ. ಅದು ಸರಿಸುಮಾರು ಒಂದು ಸಾವಿರ ವರ್ಷಗಳವರೆಗಾದರೂ ನಡೆದಿರಬಹುದು: ಅಂದರೆ ಕ್ರಿ.ಪೂ. 3000 ದಿಂದ ಕ್ರಿ.ಪೂ. 2000ದತನಕ. ಇದರ ಪರಿಣಾಮವೆಂದರೆ ಆರ್ಯ-ದಸ್ಯುಗಳ ನಡುವಣ ರಕ್ತಸಂಬಂಧದ ಸಾಮರಸ್ಯ ಮತ್ತು ತತ್ಫಲವಾದ ಸಾಂಸ್ಕೃತಿಕ ಪುನರುಜ್ಜೀವನ. ಈ ರಕ್ತಸಂಬಂಧ ಹೊಸದೊಂದು ಪೀಳಿಗೆಗೆ - ದಾಸ - ಅನುವು ಮಾಡಿತು. ಆರ್ಯೇತಿಹಾಸವಾದ ಋಗ್ವೇದದಲ್ಲಿ ಕಾಣಿಸುವ ರಾಜರುಗಳಾದ ದಿವೋದಾಸ ಮತ್ತು ಅವನ ಮೊಮ್ಮಗ ಸುದಾಸ ಈ ಪೀಳಿಗೆಯ ಉದಾಹರಣೆಗಳು. 'ಭಾರತ ಸಿಂಧುರಶ್ಮಿ' ಯಲ್ಲಿ ಕಾಣುವ ಪುನರುಜ್ಜೀವನ ಈ ಆರ್ಯ ದಸ್ಯುಗಳ ಸಂಘರ್ಷ ಮತ್ತು ಅನಂತರದ ಸಮನ್ವಯವನ್ನು ಕುರಿತದ್ದು ಮತ್ತು ಅದನ್ನು ಪುರಸ್ಕರಿಸುವಂಥದ್ದು. ಈ ಸಂಕರರೂಪದ ರಕ್ತಸಂಬಂಧದಿಂದ ಜೀವನ ರೀತಿ, ಧಾರ್ಮಿಕ, ಸಾಮಾಜಿಕ ಆಚಾರವಿಚಾರಗಳು ನವೀಕೃತವಾದವು: ಬಲವಾದವು. ಕೊಳುಕೊಡೆಯಿಂದ ಅಪೂರ್ವ ಸಮತೋಲ ಸ್ಥಾಪಿತವಾಯಿತು. ಆರ್ಯರದು ಅಶ್ವಸಂಸ್ಕೃತಿ. ದಸ್ಯುಗಳದು ವೃಷಭ ಸಂಸ್ಕೃತಿ. ಬಿಲ್ಲುಬಾಣದ ಬಳಕೆಯನ್ನು ದಸ್ಯುಗಳು ಆರ್ಯರಿಂದ ಬಳುವಳಿಯಾಗಿ ಪಡೆದರು. ದಸ್ಯುಗಳ ರುದ್ರ ಆರ್ಯರ ದೇವತೆಗಳ ಸಾಲಿಗೆ ಸೇರಿದ. ಋಗ್ವೇದದ ಕಾಲಕ್ಕೆ ನಲವತ್ತೊಂಬತ್ತು ಮರುತರ ತಂದೆಯಾಗಿ ಮಾರ್ಪಟ್ಟ. ದಸ್ಯುದೇವತೆ ಉಮಾ. ಉಪನಿಷತ್ಕಾಲಕ್ಕೆ ಆರ್ಯಮಾನ್ಯೆಯಾಗಿ ರಾರಾಜಿಸಿದಳು. ದಸ್ಯುಗಳ ಸಂಸ್ಕೃತಿಯೂ ಆರ್ಯರಷ್ಟೇ ಕ್ರಿಯಾಶೀಲವೂ, ಉನ್ನತವೂ ಆಗಿತ್ತು ಎನ್ನುವುದನ್ನು ಹರಪ್ಪ, ಮೊಹಂಜೊದಾರೊ ಮತ್ತಿತರ ಪ್ರದೇಶಗಳ ಉತ್ಖನನ ನಿಸ್ಸಂದೇಹವಾಗಿ ಸಾರಿದೆ. ಇನ್ನೊಂದು ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸಬಹುದು: ಅದು ಭಾರತ ಸಿಂಧುರಶ್ಮಿಯ ವಸ್ತುವಿಗೆ ಸಂಬಂಧಿಸಿದ್ದು. ವಿಶ್ವಾಮಿತ್ರನ ಕಾಲಕ್ಕೂ ಇಂದಿನದಕ್ಕೂ ಇರುವಂತೆಯೇ ವ್ಯತ್ಯಾಸವಿರುವುದನ್ನು ಸೂಚಿಸುವಂಥದ್ದು. ವಿಶ್ವಾಮಿತ್ರನ ಕಾಲಕ್ಕೆ ವೈದಿಕ ಧರ್ಮ ಅರೆನಿದ್ರಾವಸ್ಥೆಯಲ್ಲಿತ್ತು. ಆಗ ಎದುರಾದ ಆರ್ಯ-ದಸ್ಯುಗಳ ಜಟಿಲ ಸಮಸ್ಯೆ, ಯಾವುದನ್ನು ನಾವು ಭಾರತೀಯತೆಯೆಂದು ನಿರ್ದೇಶಿಸುತ್ತೇವೆಯೋ ಅಂಥ ಮಿಶ್ರ ಸಂಸ್ಕೃತಿಗೆ ಎಡೆಮಾಡಿಕೊಟ್ಟಿತು. ಆಗ ಆ ಸಮಸ್ಯೆಯನ್ನು ಬಗೆಹರಿಸುವುದು ಇಂದಿನ ಭಾರತೀಯ ಪುನರುಜ್ಜೀವನದಷ್ಟು ಸುಲಭವಿರಲಿಲ್ಲ. ಇಂದಿನದು ಒಂದು ಪುನರ್ಜನ್ಮ ತಳೆದ ರೀತಿ. ಮಿಕ್ಕ ಹಲವು ಬಗೆಗಳಲ್ಲಿ ಮರಣಾಸನ್ನವಾಗಿ ಭಾರತೀಯ ಆತ್ಮವೊಂದು ಅಚೇಯವಾಗಿ ಉಳಿದದ್ದರಿಂದ; ಆತ್ಮಜ್ಞಾನ ಆತ್ಮವಿಶ್ವಾಸದ ಸ್ತರಕ್ಕೆ ಈ ಸಂಸ್ಕೃತಿ ಬೆಳೆದದ್ದರಿಂದ ಆಧುನಿಕ ಪುನರುಜ್ಜೀವನ ಸಾಧ್ಯವಾಗಿದೆ.

# ಗೋಕಾಕರ ಸೆಳವು

● ಗೋಪಾಲ ವಾಜಪೇಯಿ

**1969.** ಗೋಕಾಕರಿಗೆ ಅರುವತ್ತು. ನಾನು ಓದುತ್ತಿದ್ದ ನಮ್ಮೂರ (ಲಕ್ಷ್ಮೇಶ್ವರ) ಕಾಲೇಜಿನಲ್ಲಿ ಅವರಿಗೆ ನಾಗರಿಕ ಸನ್ಮಾನ. ಪ್ರೊ. ಗೋಕಾಕರ ಕುರಿತು ನನಗೆ ತಿಳಿದಂತೆ ಹಾಡೊಂದನ್ನು ಹೊಸೆದು ನಡುಗಿಕೊಂಡು ನಾಚಿಕೊಂಡು ಓದಿದ್ದೆ. ನಂತರ ವಿನಾಯಕರ ಗುಡುಗಿನಂಥ ಧ್ವನಿಯ ಧಬೆಧಬೆಯಂಥ ಭಾಷಣ. ಸಮಾರಂಭ ಮುಗಿದ ಮೇಲೆ ಅವರೊಂದಿಗೆ ಫೋಟೋ ತೆಗಿಸಿಕೊಳ್ಳುವ ಇಚ್ಛೆ ನಮಗೆ ಕೆಲವರಿಗೆ. ಕೇಳಿದೆ. ''ಆಗ ಓದಿದೆಲಾ ಆ ಕವನಾ, ಅದನ್ನ ಕೊಟ್ಟರ ನಾ ನಿಂಜೋಡಿ ಫೋಟೋಕ್ಕ ಪೋಜ್ ಕೊಡೂದು,'' ಎಂದವರು ನಕ್ಕರು.

''ಹೌವ್ಹೌದು, ನೀ ಓದಿದ್ದು ಗಾಳ್ಯಾಗ ಹಾರಿಹೋತು. ಅದರ ಪ್ರತಿ ಇದ್ರ ಇನ್ನೊಮ್ಮೆ ಬಿಟ್ಟಿನ್ನೊಮ್ಮೆ ಓದಿಕೋಬಹುದು'' - ದನಿಗೂಡಿಸಿದರು ಗೋಕಾಕರ ಅರ್ಧದಷ್ಟೆತ್ತರದ ವಾಮನಮೂರ್ತಿಯೊಬ್ಬರು. (ನಂತರ ಅವರು ನರೇಗಲ್ಲ ಪ್ರಹ್ಲಾದರಾಯರೆಂದು ಗೊತ್ತಾಯಿತು. ಅವರಂತೂ ಕೊನೆವರೆಗೂ ನನ್ನನ್ನು ತಮ್ಮ 'ಮಾನಸ ಪುತ್ರ'ನೆಂದೇ ಕರೆದರು.) ಕವನದ ಪ್ರತಿ ಪಡೆದು ಓದಿ, ಫೋಟೋ ತೆಗಿಸಿಕೊಂಡಾದ ಮೇಲೆ, ''ಯಾವಾಗರೆ ಪತ್ರಾ ಬರಿ. ನಾ ಇತ್ಲಾಗ ಬಂದಾಗ ಭೆಟ್ಯಾಗು - ಮಾತಾಡೂಣು,'' ಎಂದು ಮೈದಡವಿ ಗೋಕಾಕರು ಕಾರನ್ನೇರಿದರು. ಆ ಸ್ಪರ್ಶ - ಆತ್ಮೀಯ ಮಾತುಗಳಿಂದ ಪುಳಕಿತನಾದ ಹದಿನೆಂಟರ ನಾನು ಆ ಜ್ಞಾನಗೊಮ್ಮಟನ ಸರಳತೆಯ ಸೆಳವಿಗೆ ಸಿಕ್ಕಿಕೊಂಡುಬಿಟ್ಟೆ.

ಮುಂದೆಲ್ಲ ನರೇಗಲ್ಲರು ವಿನಾಯಕರ ಸಾಹಿತ್ಯ, ಜಯಕರ್ನಾಟಕದ ಅನುಭವಗಳು, ಗೆಳೆಯರ ಗುಂಪಿನ ಕಥೆಗಳನ್ನು ಗಂಟೆಗಟ್ಟಳೆ ಹೇಳಬೇಕು. ಕೆಲವೊಮ್ಮೆ ನಾನು 'ಚೆಲುವಿನ ನಿಲುವು' ಮುಂತಾದವುಗಳಲ್ಲಿ ಬರುವ ಪ್ರಸಂಗಗಳು, ವ್ಯಕ್ತಿಗಳ ಕುರಿತು ಪ್ರಶ್ನೆ ಕೇಳಿ ಸುಮ್ಮನಾಕ್ಕೊ, ಬೆಂಗಳೂರಿಗೋ ಪತ್ರ ಬರೆಯಬೇಕು. ಕ್ಷಿಪ್ರದಲ್ಲೇ ಗೋಕಾಕರಿಂದ ಕಾರ್ಡಿನಲ್ಲಿ ಉತ್ತರ ಬರಬೇಕು.

ನರೇಗಲ್ಲರಿಗೆ ಎಪ್ಪತ್ತು ತುಂಬಿದಾಗ ನಾವು ನಾಲ್ಕಾರು ಜನ ಗೆಳೆಯರು ಸೇರಿಕೊಂಡು ಅವರನ್ನು ನಮ್ಮಳವಿನಲ್ಲಿ ಗೌರವಿಸಲು ಯೋಚಿಸಿ, 'ಪ್ರಸಾದ'ವೆಂಬ ಕಿರುಹೊತ್ತಗೆಯನ್ನು ಪ್ರಕಟಿಸಲು ನಿರ್ಧರಿಸಿದೆವು. ಬೇಂದ್ರೆ ಆದಿಯಾಗಿ ಗೆಳೆಯರ ಗುಂಪಿನ ಎಲ್ಲರಿಂದಲೂ ನರೇಗಲ್ಲರ ಕುರಿತು ಲೇಖನಗಳನ್ನು ತರಿಸಿಕೊಂಡೆವು. ಗೋಕಾಕರು 'ವತ್ಸ' ಎಂಬೊಂದು ಪುಟ್ಟ ಲೇಖನ ಬರೆದರು.

ಬೆಂಗಳೂರಲ್ಲಿ ಗೋಕಾಕರು ನೆಲೆನಿಂತ ಮೇಲೆ ಆಗೀಗ 'ಮೀರಾ ಕುಟೀರ'ಕ್ಕೆ ಹೋದಾಗೊಮ್ಮೆ 'ದಾದಾ' ಅವರಿಂದ ಲಕ್ಷ್ಮೇಶ್ವರದ ನೆನಪುಗಳು. ತಾವು ಚಿಕ್ಕವರಾಗಿದ್ದಾಗ ವಾಸಿಸಿದ್ದ ಮನೆ, ಮಿರಜ ಸಂಸ್ಥಾನದ ಪುರೋಹಿತರಾಗಿದ್ದ ನನ್ನ ಮುತ್ತಜ್ಜ ಸಂಸ್ಥಾನಿಕರು ಏರ್ಪಡಿಸಿದ್ದ ಯಜ್ಞವೊಂದರ ನೇತೃತ್ವ ವಹಿಸಿದ್ದು, ಆಗ ಒಂಬತ್ತು ವರ್ಷದ ತಾವು ಸವಣೂರಿನಿಂದ ಲಕ್ಷ್ಮೇಶ್ವರಕ್ಕೆ ಬಂದದ್ದು, ಪಂಪ ಸಹಸ್ರ ವರ್ಷೋತ್ಸವದ ಸಂದರ್ಭ, ನಮ್ಮೂರ ಹಿರಿಯ ತಟ್ಟಿ ಅಣ್ಣಾವರ ಸಾಹಿತ್ಯಪ್ರೇಮ ಮುಂತಾಗಿ... ಬರುವಾಗ ಅವರು 'ಆಶೀರ್ವಾದಪೂರ್ವಕ' ಎಂದು ಪುಸ್ತಕವೊಂದನ್ನು ಕೊಡಬೇಕು.....

ನಮ್ಮೂರಲ್ಲಿಯ ನನ್ನ ಹಳೆಯ ಮನೆಯನ್ನು ಮಾರಬೇಕಾಗಿ ಬಂತು. ನಾನು ಕಂಡಂತೆ ಮೂವತ್ತಕ್ಕೂ ಹೆಚ್ಚು ವರ್ಷಗಳವರೆಗೆ ಕೀಲಿ ಜಡಿದುಕೊಂಡೇ ಇದ್ದ, ಸಾಗವಾನಿ ಸಂದುಕವೊಂದು ಸಾಗಾಟಕ್ಕೆ ಸಮಸ್ಯೆಯೊಡ್ಡಿತು. ಕೀಲಿ ಒಡೆದು ನೋಡಿದರೆ - ಅಬ್ಬಾ, ಅದೊಂದು ಕಾಲಕೋಶವೆ ಸೈ! ಹಲವಾರು ತಾಡೋಲೆ ಗ್ರಂಥಗಳು, ಮೋಡಿ ಅಕ್ಷರದಲ್ಲಿ ಬರೆದ - ಮನೆಯುದ್ದ ಹಾಸಬಹುದಾದ - ಕೈಕಾಗದದ ಸುರುಳಿಗಳು, ಕಲ್ಲಚ್ಚಿನಲ್ಲಿ ಮುದ್ರಿಸಿದ್ದ ಅಂಗೈಯಗಲದ ಪಂಚಾಂಗಗಳು, ಕೆಲವು - ಈಗ ಕಲಾತ್ಮಕವೆಂದು ಸಂಗ್ರಹಿಸಿಡುವಂಥ ನಿತ್ಯೋಪಯೋಗದ ಕಂಚು ಹಿತ್ತಾಳೆಯ ಪಾತ್ರೆಗಳು, ಪ್ರತಿಮೆಗಳು .....

ವೆಂಕಟ ರಂಗೋ ಕಟ್ಟಿಯವರು ಬರೆದ ಮರಾಠಿ ನಾಟಕಗಳು ಇತ್ಯಾದಿ. (ತಾಡೋಲೆ ಗ್ರಂಥಗಳು ಮತ್ತು ಕೈಕಾಗದದ ಸುರುಳಿಗಳನ್ನು ಡಾ. ಶ್ರೀನಿವಾಸ ಹಾವನೂರರಿಗೆ ಒಪ್ಪಿಸಿದೆ. ನರಗುಂದ ಬಾಬಾಸಾಹೇಬನ ವಂಶಕ್ಕೆ ಸಂಬಂಧಿಸಿದ ಜಾತಕಗಳು ಆ ಸುರುಳಿಗಳೆಂದೂ ತಾಡೋಲೆಗಳು ತೆಲಗು ಲಿಪಿಯಲ್ಲಿನ ಸಂಸ್ಕೃತ ಭಾಷೆಯ 'ಶಾಕುನ್ತಲ' ನಾಟಕ ಮತ್ತು ಕೆಲವು ಕೊನೆ ಮೊದಲ ಪುಟಗಳು ಮುರಿದುಹೋಗಿ ಹೆಸರು ಗೊತ್ತಾಗದ ವೀರಶೈವ ಪುರಾಣಗಳೆಂದೂ ನಂತರ ಹಾವನೂರರು ನನಗೆ ತಿಳಿಸಿದರು. ಅವೀಗ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಸುರಕ್ಷಿತ ಎಂದೂ ಹೇಳಿದರು.) ಮತ್ತೊಂದಷ್ಟು ಗಂಟುಗಳಲ್ಲಿ ನನ್ನ ವಂಶಜರ ಜಾತಕ, ಆಯುರ್ವೇದ ಶಾಸ್ತ್ರದ ವಿವರಗಳು, ನನ್ನಜ್ಜನಿಗೆ ಠಾಣೆಯ ಬ್ರಿಟಿಶ್ ಅಧಿಕಾರಿಯೊಬ್ಬ ತನಗೆ ಕನ್ನಡ ಕಲಿಸಿದ್ದಕ್ಕಾಗಿ ಕೊಟ್ಟ ಸರ್ಟಿಫಿಕೆಟ್ಟುಗಳು ಹೀಗೇ.... ಒಂದು ಗಂಟಿನಲ್ಲಿ 'ಶುಕ್ರವಾರದ ಹಾಡು'ಗಳ ಪುಸ್ತಕದ ಸೃಜನ ಕೆಲವು ಪುಸ್ತಿಕೆಗಳು, ಅವುಗಳ ನಡುವೆ 'ಜಯಕರ್ನಾಟಕ ಕಾರ್ಯಾಲಯ ಧಾರವಾಡ' ಪ್ರಕಟಿಸಿದ 'ಸೆಳವು' ಎಂಬೊಂದು ನೀಳ್ಗವನದ ಪ್ರತಿ! ಎರಡಾಣೆ ಬೆಲೆಯ ಅದರ ಹಸಿರು ಕವರನ್ನು ಹೊರಳಿಸಿದರೆ '**ಒಲವಿನ ಕಾಣಿಕೆ - ಶ್ರೀ ಆಲೂರ ವೆಂಕಟರಾಯರಿಗೆ - ಗೆಳೆಯರ ಗುಂಪಿನ ವಿನಾಯಕ**' ಎಂದು ಗೋಕಾಕರ ಕೈಬರಹ! ಪ್ರಕಟವಾದ ದಿನ 'ಚಾಲುಕ್ಯ ವಿಕ್ರಮ ವರುಷ, 854ರ ಫಾಲ್ಗುಣ ಬಹುಳ ಅಷ್ಟಮೀ, (ನಾಡಹಬ್ಬ, ನನ್ನಿ-ನಲ್ ಮುಂತಾದ ಪದಗಳನ್ನು ಚಲಾವಣೆಗೆ ತಂದ 'ಗೆಳೆಯರ ಗುಂಪು' ಕನ್ನಡಿಗರಿತ್ತ ಮತ್ತೊಂದು ಕಾಣಿಕೆ ಈ 'ಚಾಲುಕ್ಯ ವಿಕ್ರಮವರ್ಷ') ಇಪ್ಪತ್ನಾಲ್ಕು ಪುಟಗಳಲ್ಲಿ ಮೂರು ಭಾಗಗಳಲ್ಲಿರುವ ಈ ನೀಳ್ಗವನ ('ಶಕ್ತಿ-ವ್ಯಕ್ತಿಗಳ ಸಂಘರ್ಷ' ಎಂದು ಹೇಳಿದ್ದಾರೆ ವಿನಾಯಕರು) ಪುಸ್ತಿಕೆಯ ರೂಪದಲ್ಲಿ ಪ್ರಕಟವಾದದ್ದು ಹೇಗೆ? ಅವರ ಕೃತಿಗಳ ಪಟ್ಟಿಯಲ್ಲಿದು ಸೇರ್ಪಡೆಯಾಗಿಲ್ಲವಲ್ಲ? ಕರ್ನಾಟಕದ ಕುಲಪುರೋಹಿತರಿಗೆಂದು ಬರೆದುಕೊಟ್ಟ ಈ ಪ್ರತಿ ನಮ್ಮ ಮನೆಯ 'ಕಾಲಕೋಶ'ವನ್ನು ಸೇರಿದ್ದು ಹೇಗೆ?

ಈ ಕುರಿತು ಗೋಕಾಕರನ್ನೇ ಕೇಳಬೇಕೆಂದುಕೊಂಡೆ. ಅಷ್ಟರಲ್ಲೇ ಅವರ ಸೆಳವು ನನ್ನನ್ನು ಬೆಂಗಳೂರಿಗೆಳೆದೊಯ್ದಂತೆ ನನಗೆ ವರ್ಗಾವಣೆ (1988). ಕಾಣುವ ತವಕ ತಡೆಯದಾಗಿತ್ತು. ''ತಮ್ಮನ್ನು ಕಾಣಬೇಕು ಯಾವಾಗ ಬರಲಿ?'' ರಿಪ್ಲೈ ಕಾರ್ಡ ಸಹಿತ ಅವರಿಗೆ ಬರೆದೆ. ಮೂರನೆಯ ದಿನವೆ ಅವರಿಂದ ಉತ್ತರ: ''ರವಿವಾರ, ದಿ. 15.5.88ರಂದು. ಸಂಜೆ ಐದೂವರೆ ನಂತರ ಮನೆಯಲ್ಲೇ ಇರುತ್ತೇನೆ. ಬಾ.''

ಸಿಟ್‌ಔಟ್‌ನಲ್ಲಿ ಜತೆಯಾಗಿ ಕುಳಿತಿದ್ದ ಆ ದಂಪತಿ ನನಗೆ ಥಟ್ಟನೆ ಕಲರ್‌ಫೋಟೋದಲ್ಲಿ ಕಂಡಂಥ ಭಾಸ ಉಂಟುಮಾಡಿದರು. ಕಣ್ಣು ಪಿಳುಕಿಸದೆ ನನ್ನನ್ನೇ ನೋಡುತ್ತಿದ್ದ ಆ ಇಬ್ಬರ ಮುಖದಲ್ಲಿ ನಾನು ಕಂಡದ್ದು ಪ್ರೇಮಳ ಮಂದಹಾಸ. ''ಬಾ, ನಿಂದs ದಾರಿ ಕಾಯ್ತಿದ್ದೆ,'' ಎಂದು ಮುಂಗೈ ಹಿಡಿದು ಕುಳ್ಳಿರಿಸಿಕೊಂಡರು. ಅಸ್ವಾಸ್ಥ್ಯದ ಪರಿಣಾಮ ಅವರ ಮುಖದ ಮೇಲೆ ಎದ್ದು ತೋರುತ್ತಿತ್ತು. ಅದೇ ಬಡಾವಣೆಯ ಗಣ್ಯರೊಬ್ಬರು ವಾಕ್ ಮುಗಿಸಿ ಹೊರಟವರು, ''ಪ್ರೊಫೆಸರ್ ಸಾಹೇಬರಿಗೆ ನಮಸ್ಕಾರ'' ಎನ್ನುತ್ತ ಒಳಬಂದರು. ''ನಾಳೆ ಅಗಸ್ಟಿಗೆ ನನಗ ಎಂಬತ್ತು ತುಂಬತಾವ. ಮದಲಿನ್ಹಂಗ ಶಕ್ತಿ ಇರು ಅಂದ್ರ ಹೆಂಗ? ಮಕ್ಕಳಾದ್ರೂ ಎಷ್ಟು ದಿನಾ ಇಲ್ಲೆ ಬಂದಿರಲಿಕ್ಕೆ ಸಾಧ್ಯಾ? ಅಂಥಂಗ - ನಾ ಹೇಳಿದ್ದು ನೆನಪಿನ್ಯಾಗದs ಅಲ್ಲs .... ನಮ್ಮಲ್ಲೇ ಇದ್ದು ತನ್ನ ಸ್ಟಡಿ ಜತಗೆ ನಮ್ಮಿಬ್ಬರನ್ನೂ ಅಟೆಂಡ್ ಮಾಡೋ ಒಬ್ಬ ಬಡಹುಡುಗಾ ಆದ್ರ ಸಾಕು'' ಎಂದ ಗೋಕಾಕರಿಗೆ ಬಂದವರು ''ಐಯಾಮ್ ಎಟಿಟ್'' ಎಂದು ಹೇಳಿ ವಂದಿಸಿ ಹೊರಟರು.

ನಾನು ಮೆಲ್ಲನೆ 'ಸೆಳವು' ಪ್ರತಿಯನ್ನು ಹೊರತೆಗೆದೆ. ಅದು ಸಿಕ್ಕ ಹಿನ್ನೆಲೆಯನ್ನು ಹೇಳಿದೆ. ಗೋಕಾಕರು ನಕ್ಕರು. ''ನಿನ್ಹತ್ರs ಇರಲಿ,'' ಎಂದು ಆ ಪುಸ್ತಿಕೆಯ ಮೊದಲ ಪುಟದಲ್ಲಿ 'ಆಶೀರ್ವಾದಪೂರ್ವಕ' ಬರೆದು ಹಿಂದಿರುಗಿಸಿದರು. ''ಇದು ಜಯಕರ್ನಾಟಕದೊಳಗ ಪ್ರಿಂಟಾದ ಕವಿತಾ. ಇಂಥಾ ಕೆಲವು ಆಫ್-ಪ್ರಿಂಟ್ಸ್ ತಗದು

ಬ್ಯಾರೆ ಕವರ್ ಪ್ರಿಂಟ್‌ಮಾಡಿ ಪುಸ್ತಕಾ ಮಾಡ ತಿದ್ವಿ. ನನ್ನ ಮ್ಯಾರೇಜಗಿಂತಾ ಮುಂಚೆ 'ಸೇವು'ದ off-prints ತಗದು ಹಂಚಿದ್ದೆ. ಮುಂದ, 'ಕಲೋಪಾಸಕ'ದಾಗ ಈ ಕವಿತಾ ಸೇರಿಸಿದೆ.'' ಅರವತ್ತು ವರ್ಷಗಳ ಹಿಂದಿನ ದೃಶ್ಯವನ್ನು ನನ್ನ ಕಣ್ಣ ಮುಂದೆ ನಿಲ್ಲಿಸಿದರು. ಅದಾಗಲೆ ಸಂಜೆ ಏಳರ ಹೊತ್ತು. ಕುರ್ಚಿಯಿಂದ ಎದ್ದರು. ''ಕಮ್ ಆನ್, ಲೆಟ್ ಅಸ್ ಹ್ಯಾವ್ ವೀವ್ವಾ'' ಎಂದು ಮೆಲ್ಲಡಿಯಿಟ್ಟು ಒಳಹೊರಟರು. ''ಟೈಂ ಸಿಕ್ಕಾಗ ಬಾ. ಏನರೆ ಬೇಕಾದ್ರ ಫೋನ್ ಮಾಡು. ಡಿರೆಕ್ಟರ್‍ಯಾಗ ಫೋನ್ ನಂಬರು ಹಾಕ್ಸಿಲ್ಲಾ. ನಂಬರು ಬರಕೋ,'' ಎಂದರು.

ಮುಂದೆ ಆರೇಳು ತಿಂಗಳುಗಳ ನಂತರ ಗೋಕಾಕರು ಮುಂಬಯಿಯಲ್ಲಿ ತಮ್ಮ ಪುತ್ರನೊಂದಿಗೆ ಇರಲೆಂದು ಬೆಂಗಳೂರು ಬಿಟ್ಟರೆಂದು ಗೊತ್ತಾಯಿತು.

ಅವರಿಗೆ ಜ್ಞಾನಪೀಠದ ಗೌರವ ದೊರೆತ ಸುದ್ದಿ ತಿಳಿದಾಗ ಸಂತಸದಿಂದ ಕಾಗದ ಬರೆದಿಟ್ಟೆ. ಅಂದೇ ಮುಂಬಯಿಯಲ್ಲಿ ಸನಿಹಸಂಬಂಧಿ ತರುಣ ಜೋಡಿ ದುರಂತದಲ್ಲಿ ಮಡಿದ ವಾರ್ತೆ ಬಂದು, ನನ್ನಾಕೆಯೊಂದಿಗೆ ರೈಲನ್ನೇರಿದೆ. ಸಾವಿನ ಆ ಮನೆಯಲ್ಲಿ ಕುಳಿತು ಸಂಕಟಪಡಲಾಗದೆ, ಒಂದು ಮುಂಜಾನೆ ನನ್ನಾಕೆಯೊಂದಿಗೆ ಹೊರಹೊರಟೆ. ಗೋಕಾಕರನ್ನು ಕಾಣುವ ಆಸೆಯು ಬಲವತ್ತರವಾಗಿತ್ತು. ಗೋಕಾಕರೊಂದಿಗೆ ಫೋನ್‌ನಲ್ಲಿ ಮಾತನಾಡಿದೆ. ''ನೀನು ಮುಂಬೈದಾಗ!'' ಎಂದು ಅಚ್ಚರಿ ವ್ಯಕ್ತಪಡಿಸಿದ ಅವರು ''ಮಧ್ಯಾಹ್ನ ನಾಲ್ಕರ ಸುಮಾರಿಗೆ ಬಾ'' ಎಂದರು. ಜತೆಯಲ್ಲಿ ನನ್ನವಳೂ ಇದ್ದಾಳೆಂದೆ. ''ಹಂಗಾದ್ರ ಐದೂವರಿಗೆ ಬಾ.''

ಸಚಿವಾಲಯದೆದುರಿನ ಸರಕಾರಿ ಅಧಿಕಾರಿಗಳ ನಿವಾಸ ಸಂಕೀರ್ಣ 'ಸುರುಚಿ'. ಹತ್ತನೆಯ ಅಂತಸ್ತಿನಲ್ಲಿ ವಿನಾಯಕರ ಪುತ್ರ, (ಐ.ಎ.ಎಸ್. ಅಧಿಕಾರಿ) ಅನಿಲ ಗೋಕಾಕರ ಮನೆ. ಸದ್ದುಗದ್ದಲವಿಲ್ಲದ ಶಾಂತ ಪರಿಸರ. ಸರಿಯಾಗಿ ಐದೂವರೆಗೆ ಬೆಲ್ ಮಾಡಿದೆ. ಬಾಗಿಲು ತೆರೆದು ಕರೆದು ಕುಳ್ಳಿರಿಸಿದರು ಅವರ ಸೊಸೆ. ಹತ್ತು ನಿಮಿಷಗಳ ನಂತರ ಗೋಕಾಕರ ಧ್ವನಿ. ಜತೆಗೆ ಊರುಗೋಲಿನ ಟಕ್.ಟಕ್. ಪತ್ನಿಯ ನೆರವಿನೊಂದಿಗೆ ಊರುಗೋಲಿನ ಆಸರೆ ಹಿಡಿದು ಮೆಲ್ಲನೆ ಬಂದರು. ಹೋಗಿ ನಾನೂ ಆಸರೆ ಕೊಟ್ಟೆ. ಎಡಗೈ ನನ್ನ ಹೆಗಲಮೇಲಿಟ್ಟುಕೊಂಡು ಬಂದು ಕುರ್ಚಿಯಲ್ಲಿ ಮೆಲ್ಲನೆ ಕುಳಿತರು.

ಧ್ವನಿ, ದೃಷ್ಟಿ ಮತ್ತು ಶ್ರವಣಶಕ್ತಿಗಳ ಮೇಲೆ ಅವರ ವಯಸ್ಸು ಪರಿಣಾಮವನ್ನುಂಟುಮಾಡಿಲ್ಲ. ಅದೇ ನಗೆ, ಅದೇ ಶೈಲಿ, ಮಾತಿನಲ್ಲಿ ಅದೇ ಸ್ಪಷ್ಟತೆ, ಅದೇ ನಿರ್ದಿಷ್ಟತೆ...... ಎಂಬತ್ತೆರಡರ ಗೋಕಾಕರು ಧಾರವಾಡದ ಸಿಹಿ-ಕಹಿ ನೆನಪುಗಳನ್ನು ಹೇಳಿದರು. ನಾನು ಮಾತು ಬದಲಿಸಲು ಕೇಳಿದೆ: ''ಈಗಿನ ನಿಮ್ಮ ದಿನಚರಿ-ನಿಮ್ಮ ಬರವಣಿಗೆ ಏನು?''

ಅಂದಿಗೆ (30-8-91) ಇಪ್ಪತ್ತು ದಿನಗಳ ಹಿಂದಿನವರೆಗೂ ತಾವು ಬೆಳಗಿನ ಐದೂವರೆಗೆ ಎದ್ದು, ಲಿಫ್ಟಿನಲ್ಲಿ ಅಂಗಳಕ್ಕಿಳಿದು, ಆಳುಮಗನೊಬ್ಬನ ನೆರವಿನಿಂದ ಕಂಪೌಂಡಿನಲ್ಲಿ ವಾಕ್ ಮಾಡುತ್ತಿದ್ದರಂತೆ. ನಂತರ ಸ್ನಾನ-ಧ್ಯಾನ ಇತ್ಯಾದಿ. ''ಕೈ ಬರಿಯೂ ಶಕ್ತಿ ಕಳಕೊಂಡದ. ಹೆಚ್ಚು ಬರ್‍ಯಾಕಾಗೂದಿಲ್ಲಾ. ದಿನಕ್ಕ ಐದಾರು ಪತ್ರಕ್ಕ ಉತ್ತಾ ಬರೀತೀನಿ. ಸದ್ಯದೊಳಗ ಹೊರಬರೊ ನನ್ನ ಇಂಗ್ಲಿಷ್ ಪೊಯಿಟ್ರಿ ಕಲೆಕ್ಶನ್ನಿನ ಪ್ರೂಫ್ಸ್ ನೋಡ್ತೀನಿ. ನನ್ನ ದಿಲ್ಲೀ ಮಗಳು ಯಶೋದಾ (ಭಟ್) 'ಸಮರಸವೇ ಜೀವನ'ದ ಇಂಗ್ಲಿಷ್ ಅನುವಾದದಾಗ ಇದ್ದಾಳ...''

ತುಂಬ ಬಳಲಿದಂತೆ ಕಂಡ ಅವರನ್ನು ಹೆಚ್ಚು ಹೊತ್ತು ಅವಿಶ್ರಾಂತರನ್ನಾಗಿಸಲು ಮನಸ್ಸಾಗಲಿಲ್ಲ. ''ನಾನಿನ್ನ ಬರ್ತೀನಿ, ನಿಮ್ಮಾಶೀರ್ವಾದ ಇರ್ಲಿ'' ಎಂದು ಎದ್ದೆ.

''ನೀ ಬಂದಿ. ಐಯಾಮ್ ಗ್ಲ್ಯಾಡ್'' ಕಣ್ತುಂಬಿ ನೋಡಿ ತಲೆಮೇಲೆ ಕೈಯಾಡಿಸಿದರು.

●



ತನ್ನ ವ್ಯಕ್ತಿತ್ವ ಬೆಳೆದು ಬಂದಂತೆಲ್ಲ ಮನುಷ್ಯ ಹಲವಾರು ಗುಣಗಳನ್ನು ರೂಢಿಸಿಕೊಳ್ಳುತ್ತಾ ನಡೆಯುತ್ತಾನೆ. ಅವುಗಳಲ್ಲಿ ಮತ್ತೊಬ್ಬರ ಮಾತುಗಳನ್ನು ಅಥವಾ ಮಾತಿನ ವಿಷಯವನ್ನು ಗಂಭೀರವಾಗಿ 'ಆಲಿಸುವುದು' ಸಹ ಒಂದು. ಇದೊಂದು ವಿಶೇಷ ಗುಣವೆ. ಒಳ್ಳೆಯ ಸಂವಾದ ಜೀವನಕ್ಕೆ ಬಹಳ ಅಮೂಲ್ಯ. ಅದೊಂದು ಕುಶಲಕಲೆಯೂ ಹೌದು. ಮಾತುಕತೆಯಲ್ಲಿ 'ಮಾತನಾಡುವುದು' ಎಷ್ಟು ಮುಖ್ಯವೋ, ಅಷ್ಟೇ ಮುಖ್ಯ 'ಆಲಿಸುವುದು'. ಇಲ್ಲಿ ಕೇಳುವವನು ಹೇಳುವವನಿಗಿಂತಲೂ ಹೆಚ್ಚು ಕಲಿತುಕೊಳ್ಳುತ್ತಾನೆ.



# ಆಲಿಸುವಿಕೆ

● ಟಿ.ಬಿ.ಗುರುನಂಜಯ್ಯ

ನಾವು 'ಆಲಿಸು'ವಾಗ ಕೇಳುತ್ತಿರುವ ವಿಷಯದಲ್ಲಿ ನಮ್ಮ ಮನಸ್ಸು ಉಪಸ್ಥಿತವಾಗಿರಲು ಸಾಧ್ಯವೇ? ಅಂತಹ ಒಂದು ಮಾನಸಿಕ ಸ್ಥಿತಿ ಇರುವುದು ಸಾಧ್ಯವೇ?

ಆಲಿಸುವುದೆಂದರೆ, ಬರಿ ಶಬ್ದಗಳನ್ನು ಕಿವಿಗಳಿಂದ ಕೇಳುವುದಲ್ಲ. ಆಲಿಸುವುದರಲ್ಲಿ ಮನುಷ್ಯ ನಿಜವಾಗಿ ಮಗ್ನನಾಗಬೇಕಾಗುತ್ತದೆ. ಇದಕ್ಕೆ ಅನೇಕ ಅಡಚಣೆಗಳುಂಟಾಗುತ್ತವೆ ನಿಜ. ಮುಖ್ಯ ಸಮಸ್ಯೆ ಎಂದರೆ, ನಾವು ಮಾತನಾಡುವುದಕ್ಕಿಂತ ವೇಗವಾಗಿ ಚಿಂತಿಸುತ್ತೇವೆ. ಒಬ್ಬ ಪರಿಣಿತ ಒಂದು ನಿಮಿಷಕ್ಕೆ 125 ಪದಗಳನ್ನು ಉಚ್ಚರಿಸಬಲ್ಲವನಾದರೆ, ಅವನ ಮನಸ್ಸು ಮಾತನಾಡುವದಕ್ಕಿಂತ ನಾಲ್ಕು ಪಟ್ಟು ವೇಗದಲ್ಲಿ ಯೋಚನೆ ನಡೆಸುತ್ತಿರುತ್ತದೆ. ಅಂದರೆ ಪ್ರತಿ ನಿಮಿಷಕ್ಕೆ ಇನ್ನೂ ಸುಮಾರು 400 ಪದಗಳ ಯೋಚನೆ ಮಾಡುವಷ್ಟು ಹೆಚ್ಚುವರಿ ಕಾಲ ಮನಸ್ಸಿನಲ್ಲಿ ಉಳಿದಿರುತ್ತದೆ. ಮನುಷ್ಯನ ಮನಸ್ಸು ಆಲೋಚನೆಗಳ ಅಥವಾ ಚಿಂತನೆಯ ಭಾಂಡಾರ. ಅದು ಯೋಚನೆಗಳಿಂದ ತುಂಬಿ ಹರಿಯುತ್ತಿರುತ್ತದೆ. ಈ ಆಲಿಸುತ್ತಿರುವ ಮನಸ್ಸು ಶೂನ್ಯದಲ್ಲಿರಲು ಸಾಧ್ಯವಿಲ್ಲ. ಅಲ್ಲಿ ಪುಂಖಾನುಪುಂಖವಾಗಿ ಯೋಚನೆಗಳು ಅಲೆಗಳೋಪಾದಿಯಲ್ಲಿ ಚಲಿಸುತ್ತಿರುತ್ತವೆ. ಆಲಿಸುತ್ತಿರುವ ವಿಷಯದ ಬಗ್ಗೆ ಮೊದಲು ಚಿಂತನೆ ಪ್ರಾರಂಭವಾಗಿ ಮತ್ತೆ ಕೆಲವೇ ಕ್ಷಣಗಳಲ್ಲಿ ಬೇರೊಂದು ವಿಷಯದ ಬಗ್ಗೆ ಮನಸ್ಸಿನ ಚಿಂತನೆ ಹೊರಳುತ್ತದೆ. ಅಲ್ಲಿಂದ ಮತ್ತೊಂದು ವಿಷಯಕ್ಕೆ ಹಾರುತ್ತದೆ. ಹೀಗೆ ಬೇರೆ ಬೇರೆ ವಿಷಯಗಳ ಬಗ್ಗೆ ಚಿಂತನೆಗಳಲ್ಲಿ ತೊಡಗಿದ ಮನಸ್ಸು ಮತ್ತೆ ಆಲಿಸುತ್ತಿರುವ ವಿಷಯದ ಬಗ್ಗೆ ಯೋಚಿಸಲು ವಾಪಸ್ಸು ಬರುವ ವೇಳೆಗೆ, ಆಲಿಸುತ್ತಿದ್ದ ವಿಷಯ ಬಹಳ ಮುಂದುವರೆದಿದ್ದು, ಆಲಿಸುತ್ತಿರುವ ವಿಷಯದ ಜಾಡು ತಪ್ಪಿರುತ್ತದೆ. ಇಂಥ ಒಂದು ಪರಿಸ್ಥಿತಿಯಲ್ಲಿ ಆಲಿಸುತ್ತಿರುವ ವಿಷಯ ನಮಗೆ ಅರ್ಥವಾಗಿರುವುದಿಲ್ಲ. ಹೀಗೆ ಆಲಿಸುತ್ತಿರುವ ವ್ಯಕ್ತಿಯ ಮನಸ್ಸಿನ ಅಂತರಗದಲ್ಲಿ ನಡೆಯುತ್ತಿರುವ ಗೊಂದಲಗಳನ್ನೋ ತುಮುಲಗಳನ್ನೋ ಹತ್ತಿಕ್ಕುವ ಇಲ್ಲವೆ ಬದಲಾವಣೆ ತೋರಿಸುವ ಪ್ರಯತ್ನ ನಡೆಯುತ್ತಿರುತ್ತದೆ. ಈ ತಿಕ್ಕಾಟ, ದ್ವಂದ್ವಗಳಿಗೆ ಒಂದು ರೂಪ ಕೊಡುವ ಯತ್ನ ಎನ್ನಿ ಬೇಕಾದರೆ. ಇಂಥ ಸ್ಥಿತಿಯಲ್ಲಿ ನಮ್ಮ ಆಲಿ

ಸುವಿಕೆ ಪೂರ್ಣ ಕಡಿದು ಹೋಗಿರುತ್ತದೆ.

ಆಲಿಸುವುದೇ ಒಂದು ಪೂರ್ಣ ಕೃತಿ. ಈ ಆಲಿಸುವಿಕೆಯಲ್ಲಿಯೇ ತನ್ನದೇ ಆದ ಸ್ವಾತಂತ್ರ್ಯ ಅಡಗಿದೆ ಎನ್ನಬಹುದು. ಮನಸ್ಸು ಆಲಿಸುವಾಗ ಬೇರ ವಿಷಯಗಳ ಬಗ್ಗೆ, ಹೊಯ್ದಾಟಗಳ ಬಗ್ಗೆ ಚಿಂತನಕ್ಕೆ ಒಳಗಾಗಿರುತ್ತದೆ ಎಂಬುದನ್ನು ಮೊದಲು ಅರಿಯಬೇಕು. ಆಲಿಸುವ ಉಪಸ್ಥಿತಿ ಬರಬೇಕಾದರೆ, ಬೇರೆ ವಿಷಯಗಳ ತುಮುಲಗಳನ್ನು ಬದಿಗಿರಿಸಿ ಆಲಿಸುತ್ತಿರುವ ವಿಷಯದಲ್ಲಿ ಯಾವದೇ ಭಾವನೆಗೆ ಹಾರಿ ಹೋಗದೆ ಮಗ್ನರಾಗಬೇಕಾಗುತ್ತದೆ. ಹಾಗೆ ತಿಕ್ಕಾಟಗಳಿಗೆ ಮನಸ್ಸು ಸಿಕ್ಕಿಹಾಕಿಕೊಂಡರೆ ಅದು ನಿಜವಾದ 'ಆಲಿಸುವಿಕೆ' ಆಗಲಾರದು. ಅಲ್ಲಿ ವಿಷಯಗಳ ಕ್ರಿಯಾಚಿಂತನೆ ಪ್ರಾರಂಭವಾಗಿರುತ್ತದೆ. ಆಲಿಸುತ್ತಿರುವ ವಿಷಯ ಮತ್ತು ಆಗ ಮನಸ್ಸಿನಲ್ಲಿ ಉಂಟಾಗುತ್ತಿರುವ ಗೊಂದಲಮಯ ಆಲೋಚನೆಗಳ ಮಧ್ಯ ನಿಜ ಯಾವುದು ಸುಳ್ಳು ಯಾವುದು ಎಂಬುದರ ಚಿಂತನೆ ಪ್ರಾರಂಭವಾಗುತ್ತದೆ. ಆಲಿಸುತ್ತಿರುವ ವಿಷಯದ ಬಗ್ಗೆ ಯೋಚಿಸುವುದು, ಅದಕ್ಕೆ ತನ್ನದೇ ಆದ ಅರ್ಥ ನಿರೂಪಣೆ ನೀಡುವುದು, ಇವುಗಳ ಮಂಥನ ನಡೆಯುತ್ತಿರುತ್ತದೆ. ಚಿಂತನೆಗೆ ಒಳಗಾದ ವಿಷಯ ವ್ಯಕ್ತಿಯ ಬಗ್ಗೆ ಯಾವದರ ಹೋಲಿಕೆ (comparison) ಮಾಡುವುದು, ಬೇರೆ ವಿಷಯಗಳಿಗೆ ಸಂಬಂಧಿಸಿದ್ದಾದರೆ, ಆ ವಿಷಯದ ಪರ ಅಥವಾ ವಿರುದ್ಧ ಭಾವನೆಗಳು ಮನಸ್ಸಿನ ಪಟಲದಲ್ಲಿ ಹಾದು ಹೋಗಿ ನಿಜವಾದ ಆಲಿಸುವಿಕೆಯ ವಿಷಯ ಹಾದಿ ತಪ್ಪುತ್ತದೆ. ಅಂತರಂಗದ ದ್ವಂದ್ವಗಳನ್ನು ತಿಕ್ಕಾಟಗಳನ್ನು ಬದಿಗೊತ್ತಿ, ಆಲಿಸುವ ಉಪಸ್ಥಿತಿಗೆ ಬರಲು ಯತ್ನಿಸಬೇಕು.

ಅನೇಕರು ಆಲಿಸಬೇಕೆಂದು ಕಷ್ಟಪಟ್ಟು ಪ್ರಯತ್ನಿಸುತ್ತಾರೆ. ಚಂಚಲ ವಿದ್ಯಾರ್ಥಿ ಪಾಠ ಆಲಿಸುವಾಗ ಬಲಾತ್ಕಾರವಾಗಿ ಏಕಾಗ್ರತೆಯನ್ನು ತಂದುಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ, ಈ ಪ್ರಯತ್ನಗಳೇ ಆಲಿಸುವಿಕೆಗೆ ಅಡಚಣೆಯಾಗಿ ಬರುತ್ತವೆ. ಇಲ್ಲಿ ಕೇಳುವ ಪ್ರಯತ್ನದಲ್ಲಿ ಬಲಾತ್ಕಾರ ಕಂಡು ಬರುವುದಿಲ್ಲವೇ? But comparision is resistance. And resis tence breeds problem, so listening becomes one of them. ಆದರೆ ಆಲಿಸುವಿಕೆ ಯಾವತ್ತೂ ಸಮಸ್ಯೆಯಾಗಿಲ್ಲ. ಬಹಳಷ್ಟು ಜನ ಆಲಿಸಬೇಕೆಂಬ ಯತ್ನದಲ್ಲಿ ತಮ್ಮದೇ ಆದ ಸಮಸ್ಯೆಗಳನ್ನು ತಂದುಕೊಳ್ಳುತ್ತಾರೆ. ಈ ತರದ ಬಲಾತ್ಕಾರ ನಿಜವಾದ ಆಲಿಸುವಿಕೆಯನ್ನು ದೂರೀಕರಿಸುತ್ತದೆ. ಅಂದರೆ, ಆಲಿಸುವಿಕೆಯ ಘನೀಕರಿಸಿದ ಮಾನಸಿಕ ಸ್ಥಿತಿಯನ್ನು ತಂದುಕೊಳ್ಳಲು ಸಾಧ್ಯವೇ? ಯೋಚನಾಭರಿತವಾದ ಮನಸ್ಸು ಸ್ವತಂತ್ರವಾಗಿ ಆಲಿಸಲು ಸಹಾಯ ಮಾಡಬಲ್ಲದೇ? ಭಾವನೆಗಳು, ಅಭಿಪ್ರಾಯಗಳು, ನಂಬಿಕೆಗಳು ಈ ಚಿಂತನೆಯಲ್ಲಿ ಹಾದು ಹೋಗುತ್ತವೆ. ಆದರೆ ಅವು ಯಾವಾಗ ನಿಲ್ಲಬಲ್ಲವು? ಮಲಗಿದ್ದಾಗಲೆ? ಹಾಗಿದ್ದರೆ, ನಿದ್ರೆ ಮಾಡುವಾಗ ಯೋಚನಾತರಂಗಗಳು ಎಲ್ಲಿ ಹೋಗುತ್ತವೆ? ನಾವು ಸುಮಧುರ ಸಂಗೀತದ ಧ್ವನಿಯ ಇಂಪಿನಲ್ಲಿ ಮುಳುಗಿ ಆಲಿಸುತ್ತ ಹಾಗೆಯೇ ನಿದ್ರೆ ಮಾಡುತ್ತೇವೆ. (ತಾಯಿಯ ಜೋಗುಳದ ಇಂಪಿನ ಧ್ವನಿಯನ್ನು ಆಲಿಸುತ್ತ ಮಗು ಮಲಗಿಕೊಳ್ಳುವಂತೆ.) ಹಾಗೆ ಮಲಗಿ ನಿದ್ರೆ ಮಾಡುವಾಗ ಆಲಿಸುವಿಕೆ ನಿಂತು ಹೋಗುತ್ತದೆ. ಹಾಗಾದರೆ ಎಚ್ಚರವಿದ್ದಾಗ ಈ ಸ್ಥಿತಿಯನ್ನು ತಂದುಕೊಳ್ಳಲು ಸಾಧ್ಯವಿದೆಯೇ? ಆಲಿಸುವಾಗ ಯಾವುದೋ ಯೋಚನೆಯನ್ನು ತರಿಸಿಕೊಂಡು ಅಲ್ಲಿ ಮಗ್ನರಾಗಿ ಮತ್ತೆ ಮೊದಲನೆಯ ಯೋಚನೆಗೆ ವಾಪಸು ಬರುತ್ತೇವೆ. ಈ ಮಧ್ಯದ ಅವಧಿಯಲ್ಲಿ ಆಲಿಸುವುದು ನಿಂತು ಹೋಗಿರುತ್ತದೆ.

ಆಲಿಸುವಿಕೆಯ ಉಪಸ್ಥಿತಿ ಪಡೆಯಲು ಚಿತ್ತದ ಏಕಾಗ್ರತೆ ಬೇಕೆನ್ನುತ್ತಾರೆ. ಕೇಳುತ್ತಿರುವ ಪದಗಳ ಶಬ್ದಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕಾಗುತ್ತದೆ. ಆದರೆ, ಈ ಕೇಂದ್ರೀಕರಿಸುವ ಯೋಚನೆಗೆ ಬಂದ ತಕ್ಷಣ ಆಲಿಸುವಿಕೆ ಕಡಿದು ಹೋಗಬಲ್ಲದು, ಏಕೆಂದರೆ, ಇಲ್ಲಿ ಮನಸ್ಸಿನ ಏಕಾಗ್ರತೆ ಉಂಟುಮಾಡಿಕೊಳ್ಳುವಲ್ಲಿ ಆಲಿಸುವವನು ತನ್ನ

ದೇಹ ಮತ್ತು ಅದರ ಪಂಚೇಂದ್ರಿಯಗಳ ಬಗ್ಗೆ (ಕಿವಿ ಹೊರತುಪಡಿಸಿ) ಗಮನವಿರಿಸಲು ಸಾಧ್ಯವಾಗಲಾರದು. ಆದುದರಿಂದ ಮನಸ್ಸಿನ ಏಕಾಗ್ರತೆ ಒಂದೇ ಸಾಲದು, ಇದರ ಸಂಗಡ ಆಲಿಸುತ್ತಿರುವ ವ್ಯಕ್ತಿ ತನ್ನ ದೇಹದ ಇತರೆ ಇಂದ್ರಿಯಗಳನ್ನೂ ಆಲಿಸುವುದರಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ. ಇದನ್ನೇ ನಾವು 'Attention' ಎನ್ನುತ್ತೇವೆ. Attention ಎನ್ನುವ ಪದ Concentrationಗಿಂತ ವಿಶಾಲ ಅರ್ಥವುಳ್ಳದ್ದು. 'Attention'ನಲ್ಲಿ ಒಂದು ಅವಿಭಾಜ್ಯ ಭಾಗವಾಗಿ concentration ಆಗಿರಬಲ್ಲದು. ಆದರೆ, concentrationನಲ್ಲಿ, attention ಇರಲಾರದು. ವಿಷಯವನ್ನು ಆಲಿಸುವವನ ಶರೀರದ ಪಂಚೇಂದ್ರಿಯಗಳು ಮತ್ತು ಮನಸ್ಸಿನ ಏಕಾಗ್ರತೆ ಇವೆಲ್ಲವೂ ಸಮಗ್ರವಾಗಿ ಏಕ ಕಾಲಕ್ಕೆ ತಲ್ಲೀನತೆ ಪಡೆಯಬೇಕಾಗುತ್ತದೆ. ಇಂಥ 'ತಲ್ಲೀನತೆ' ಯಲ್ಲಿ ಯಾವುದೇ ಒಡಕು ಅಥವಾ ದ್ವಂದ್ವ ಭಾವ ಕಾಣಲಾರದು. ಆಗ ಮನಸ್ಸು ನಿಜವಾದ ಅರ್ಥದಲ್ಲಿ ಮೌನಿಯಾಗಿ ಆಲಿಸುವಿಕೆಯಲ್ಲಿ ಮಗ್ನವಾಗಿರಬಲ್ಲದು. ಇಲ್ಲಿ ಮೌನವಾಗಿರುವುದು ಒಂದು ಪೂರಕ ಸ್ಥಿತಿಯಾಗಿರುತ್ತದೆ. ಏಕೆಂದರೆ, ಮೌನಕ್ಕೂ ಆಲಿಸುವಿಕೆಗೂ ಬಹಳ ನಂಟು; ಮೌನವಾಗಿರದೆ ಆಲಿಸುವ ಉಪಸ್ಥಿತಿ ಪಡೆಯಲು ಅಸಾಧ್ಯ.

ಇಂಥ ಒಂದು ಸನ್ನಿವೇಶದಲ್ಲಿ ಆಲಿಸುವಿಕೆಯಲ್ಲಿ ವ್ಯಕ್ತಿ ಮಗ್ನನಾದಾಗ ಪರಿಸರದ ಸನ್ನಿವೇಶಕ್ಕನುಗುಣವಾಗಿ ಯೋಚಿಸುತ್ತ ವಿಷಯದಲ್ಲಿ ತಲ್ಲೀನನಾಗುತ್ತಾನೆ. ಒಂದು ಟೆಲಿಫೋನು ಗಂಟೆ ಬಾರಿಸಿಕೊಳ್ಳಲಾರಂಭಿಸಿದ ತಕ್ಷಣ ನಾವು ನಮ್ಮ ಪರಿಸರ, ಇರುವು ಇವೆಲ್ಲವನ್ನೂ ಮರೆತು ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಕೇಂದ್ರೀಕರಿಸಿ ಆಲಿಸಲು ಯತ್ನಿಸುತ್ತೇವೆ. ಟೆಲಿಫೋನಿನಿಂದ ಯಾರಿಂದ ಮತ್ತೆ ಯಾವ ಪದಗಳು ಬರಲಿವೆ ಎಂಬುದನ್ನು ತಿಳಿಯಲು ನಿಜವಾದ ಅರ್ಥದಲ್ಲಿ ಆಲಿಸುತ್ತೇವೆ. ಆಗ ಕೇಳಿಸಿಕೊಳ್ಳುತ್ತಿರುವ ಪದಗಳ ಬಗ್ಗೆ ಯಾಗಲಿ ಅಥವಾ ವಿಷಯದ ಬಗ್ಗೆ ಯಾಗಲಿ ತಕ್ಷಣ ವಿಮರ್ಶೆ ಮಾಡುವುದಿಲ್ಲ, ನಮ್ಮ ಅಭಿಪ್ರಾಯವನ್ನು ತಕ್ಷಣ ನೀಡುವುದಿಲ್ಲ, ಪ್ರತಿರೋಧವನ್ನೂ ಒಡ್ಡುವುದಿಲ್ಲ. ಆಲಿಸಿದ ನಂತರ ಮಾತ್ರ ಚಿಂತನಾ ಶಕ್ತಿ ಬದಲಾಗಿರುತ್ತದೆ. ಟೆಲಿಫೋನ್ ಆಲಿಸುವಾಗ ಮನಸ್ಸು ಕೇವಲ 'ರಿಸೀವರ್' ಆಗಿರುತ್ತದೆ.



ಆದರೆ, ಸ್ಪಷ್ಟವಾಗಿ ನಾವು ಆಲಿಸಬೇಕಾದರೆ, ಕೇಳುವ ಧ್ವನಿಯಲ್ಲಿ ಮಗ್ನರಾಗಬೇಕಾಗುತ್ತದೆ. ಮನಸ್ಸು ಒಂದು ರೇಡಿಯೋ ಇದ್ದ ಹಾಗೆ. ನಮಗೆ ಬೇಕಾದ ತರಂಗದಲ್ಲಿ ಒಂದು ಸ್ಟೇಶನ್ನಿಗೆ ಟ್ಯೂನ್ ಮಾಡುವಾಗ ಪಕ್ಕದ ಸ್ಟೇಶನ್‌ಗಳಿಂದ ಬರುತ್ತಿರುವ ಗದ್ದಲ ಕೇಳಿ ಬರುತ್ತದೆ. ಸರಿಯಾದ ತರಂಗದಲ್ಲಿ ನಮಗೆ ಬೇಕಾದ ಸ್ಟೇಶನ್ ಸಿಕ್ಕಿದಲ್ಲಿ, ಇತರ ಗದ್ದಲದ ಶಬ್ದಗಳು ನಿಲ್ಲುತ್ತವೆ. ಬರುತ್ತಿರುವ ಪದಗಳ ಶಬ್ದಗಳು ನಿಚ್ಚಳವಾಗಿ ಹಾಗೂ ಸ್ಪಷ್ಟವಾಗಿ ಹೊರಬರುತ್ತವೆ. ಅಂತೆಯೇ ಆಲಿಸುವ ಮನಸ್ಸು ಸಹ ಒಂದು ರೇಡಿಯೋ ಇದ್ದ ಹಾಗೆ.

ಮತ್ತೊಂದು ಸನ್ನಿವೇಶವನ್ನು ಪರಿಗಣಿಸೋಣ. ರಾತ್ರಿ 10 ಗಂಟೆ. ಎಲ್ಲೆಲ್ಲೂ ಮೌನ. ರೂಮಿನಲ್ಲಿ ಯಾವುದೋ ಸುಮಧುರ ಗಝಲ್ ಕೇಳುತ್ತಿರುತ್ತೇವೆ. ತಿಳಿ ದನಿ, ಒಳ್ಳೆಯ ಸಂಗೀತ, ಮಧುರ ವಾತಾವರಣ. ಈ ನೀರವ ಹಾಗೂ ಪ್ರಶಾಂತ ವಾತಾವರಣದಲ್ಲಿ ದೇಹಕ್ಕೆ ವಿಶ್ರಾಂತಿ ಇತ್ತು, ಇಂದ್ರಿಯಗಳಲ್ಲಿ ಕಿವಿಗೆ ಮಾತ್ರ ಕಾರ್ಯ ನಿರ್ವಹಿಸಿ ಸುಮ್ಮನೆ ಮಲಗಿ ಮಧುರತೆಯಲ್ಲಿ ತಲ್ಲೀನನಾಗಿ ಆಲಿಸುತ್ತಿರುವ ವ್ಯಕ್ತಿ, ಮೊದಲು ಸಂಗೀತದ ಧ್ವನಿ ತನ್ನ ಪಕ್ಕದಲ್ಲಿ ಬರುತ್ತಿದೆ ಎಂದು ತಿಳಿದಿರುತ್ತಾನೆ. ಕ್ರಮೇಣ ಆಲಿಸುತ್ತಾ ಸಂಗೀತದ ಇಂಪಿನಲ್ಲಿ ತಲ್ಲೀನನಾದಾಗ, ಧ್ವನಿ ಎಲ್ಲೋ ದೂರದಿಂದ ಬರುತ್ತಿದೆಯೋ ಎಂಬ ಭ್ರಮೆಯಲ್ಲಿ ಬೀಳುತ್ತಾನೆ. ಮನಸ್ಸು ಸಂಗೀತದ ಇಂಪಿನೊಂದಿಗೇ ಹರಿಯುತ್ತಿರುತ್ತದೆ. ಆಲಿಸುತ್ತಿರುವ ಧ್ವನಿಯಲ್ಲಿ ಆತ ಮುಳುಗಿ ಹೋದಾಗ ಧ್ವನಿಯ ಮಾಧುರ್ಯ ಮಾತ್ರ ಉಳಿದಿರುತ್ತದೆ. ಹೀಗೆ ನಿಜವಾದ ಆಲಿಸುವಿಕೆಯಲ್ಲಿ ಆಲಿಸುವವನು ಮತ್ತು ಇಂಪಿನ ಧ್ವನಿ ಒಂದೇ ಕಡೆ ಸೇರಬಲ್ಲವು. ಸಂಗೀತದ ಇಂಪು ಮನಸ್ಸನ್ನು ಹಿಡಿದಿಟ್ಟಿರುತ್ತದೆ.

ಆದರೆ, ಈ ಅನುಭವ ಅಥವಾ ಯತ್ನ ಎಷ್ಟು ಮಂದಿಗೆ ಸಾಧ್ಯವಿದೆ? ಆದುದರಿಂದ ಕೇಳುವವರೆಲ್ಲಾ ಆಲಿಸುವಿಕೆಯ ಸಂಪೂರ್ಣ ಕ್ರಿಯಾಶಕ್ತಿ ಪಡೆಯುತ್ತಾರೆಂದು ಹೇಳಲಾಗದು. ಆದರೆ ಆಲಿಸುವ ಪರಿಪಾಠವಿಟ್ಟುಕೊಂಡಿರುವವರು ಸತತ attention ಸ್ಥಿತಿಯನ್ನು ಪಡೆಯಲು ಅಭ್ಯಾಸ ಮಾಡಿದಲ್ಲಿ, ನಿಧಾನವಾಗಿಯಾದರೂ, ಆಲಿಸುವಿಕೆಯ ನಿಜವಾದ ಅನುಭವವನ್ನು ಪಡೆಯಬಹುದು. ಇಂಥ ಶಕ್ತಿಯನ್ನು ಪಡೆದಾತನಿಗೆ ಒಳ್ಳೆಯ 'grasping power' ಇದೆ ಎಂದು ಹೊಗಳುತ್ತೇವೆ.

'ಮನಸ್ಸು' ಎಂಬುದರಲ್ಲಿ ಎರಡು ಮುಖ್ಯ ಅಂಗಗಳು ವೇದಗಳಲ್ಲಿ ತಿಳಿಸಿದಂತೆ ಕಂಡುಬಂದಿವೆ 1) ಮನಸ್ ಮತ್ತು 2) ಬುದ್ಧಿ. 'ಮನಸ್' ಮನಸ್ಸಿನ ಕ್ರಿಯಾಶಕ್ತಿ. ಅದು ಸದಾಕಾಲವೂ ಚಲಿಸುತ್ತಿರುತ್ತದೆ. ಯೋಚನೆಗಳ ತರಂಗಗಳನ್ನೇ ಎಬ್ಬಿಸುತ್ತಿರುತ್ತದೆ. ಬುದ್ಧಿ ಈ ಚಲಿಸುತ್ತಿರುವ ಯೋಚನೆಗಳಿಗೆ ನಿರ್ದೇಶನ ನೀಡುತ್ತದೆ. ಇದರ ಮೂಲಾಧಾರ ಮಿದುಳು. ಹೀಗೆ ಹೊರಳಾಡುತ್ತಿರುವ ಚಿಂತನೆಗಳಿಗೆ ಸರಿಯಾದ ನಿರ್ದೇಶನ ಕಂಡು ಬಂದಾಗ ನಮಗೆ ಬೇಕಾದ ಸ್ಥಿತಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಬಹುದು. ಇವೆರಡಕ್ಕೂ ಮಿಗಿಲಾದುದು ಮನಸ್ಸಿನ 'Will' ಎನ್ನುತ್ತಾರೆ. ಈ ಮನಸ್ಸಿನ ಶಕ್ತಿ ಈ ಎರಡನ್ನೂ ನಿರ್ದೇಶಿಸುತ್ತದೆ. ಆಲಿಸುವಾಗ ಮನಸ್ ಬುದ್ಧಿ ಮತ್ತೆ Will ಇವುಗಳು ಒಂದೇ ಕಡೆ ಕೇಂದ್ರೀಕರಿಸಿದಾಗ ಆಲಿಸುವಿಕೆಯಲ್ಲಿ ತಲ್ಲೀನರಾಗಬಲ್ಲೆವು.

ಆಲಿಸುವಿಕೆ ಒಂದು ಭಾವ ಸ್ಥಿತಿ ಅಥವಾ ಸಮಾಧಿ ಸ್ಥಿತಿ. ಇದನ್ನು ಪಡೆಯುವ ಯತ್ನ ಸ್ವಲ್ಪ ಕಠಿಣವೆನಿಸಬಹುದು. ಆದರೆ, ಯೋಗಾಭ್ಯಾಸದ ಮುಖ್ಯ ಅಂಗಗಳಾದ ಪ್ರಾಣಾಯಾಮ ಮತ್ತು ಧ್ಯಾನ ಭಾವಗಳ ಅಭ್ಯಾಸ ಈ ಭಾವಸ್ಥಿತಿಯನ್ನು ತಲುಪಲು ಪೂರಕವಾಗಬಲ್ಲವು. ಈ ಸ್ವಭಾವ ಸುಮ್ಮನೆ ಬರುವುದಿಲ್ಲ. ಅದನ್ನು ಕೃಷಿ ಮಾಡಬೇಕಾಗುತ್ತದೆ. ಆಲಿಸುವುದು ಸಹ ಒಂದು ಸುಸ್ವಭಾವವೆ. ಮನಸ್ಸಿನ ಸೌಂದರ್ಯವೆ ನಮ್ಮ ಸುಸ್ವಭಾವ ಎನ್ನಬಹುದು.

ಮುಖ ಸೌಂದರ್ಯಕ್ಕಿಂತಲೂ ಈ ತೆರನಾದ ಸುಸ್ವಭಾವ ಹೆಚ್ಚು ಚೇತೋಹಾರಿ. ಬದುಕಿನ ನಿಜವಾದ ರುಚಿ ಇಂಥ ಸುಸ್ವಭಾವಗಳಲ್ಲಿದೆ. ●

# ನಿಮ್ಮ ಶಬ್ದ ಭಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಬಕ್ಷಿ
   (ಅ) ಹೊಟ್ಟೆ ಬಾಕ
   (ಆ) ಸುದ್ದೈವಿ
   (ಇ) ವಕೀಲನ ಗುಮಾಸ್ತ
   (ಈ) ಸಂಬಳ ಕೊಡುವ ಅಧಿಕಾರಿ
2. ಗದರು
   (ಅ) ತೋಫು ಹಾರಿಸು
   (ಆ) ಗದರಿಸು
   (ಇ) ಕಿಡಿ ಹಾರಿಸು
   (ಈ) ದಂಗೆ
3. ವಲ್ಕಲ
   (ಅ) ನಾರುಮಡಿ
   (ಆ) ಧಾರಾಳ
   (ಇ) ಸುಂಕ
   (ಈ) ಮಂಗ
4. ವಿಷಪರೀಕ್ಷೆ
   (ಅ) ಕಠಿನ ಪರೀಕ್ಷೆ
   (ಆ) ವಿಷ ತೆಗೆದುಕೊಂಡು ಸತ್ತವನ ಪರೀಕ್ಷೆ
   (ಇ) ವಿಷದ ನಿಜತ್ವವನ್ನು ಪರೀಕ್ಷಿಸುವುದು
   (ಈ) ಹಾವುಗಳಿಂದ ವಿಷ ತೆಗೆದು ಔಷಧ ಮಾಡುವುದು
5. ವೈಷಮ್ಯ
   (ಅ) ಜೋಡಾಗುವುದು
   (ಆ) ಮೋಸದ ವೇಷ
   (ಇ) ಬೆಸ ಸಂಖ್ಯೆ
   (ಈ) ವಿರೋಧ ಭಾವನೆ
6. ಸಾಧ್ವಸ
   (ಅ) ಪೂರ್ತಿ ನಾಶ
   (ಆ) ಒಳ್ಳೆಯವರ ಸ್ನೇಹ
   (ಇ) ಸಂನ್ಯಾಸಿಗಳ ಸಂಘ
   (ಈ) ಸಂಭ್ರಮ
7. ಸೊಗಸುಗಾರ
   (ಅ) ರಸಿಕ
   (ಆ) ಹಟ ಸಾಧಿಸುವವ
   (ಇ) ವ್ಯಭಿಚಾರಿ
   (ಈ) ಸುಂದರ
8. ಸರಿತ್ತು
   (ಅ) ನದಿ
   (ಆ) ಹಸಿರು
   (ಇ) ಹಳದಿ
   (ಈ) ಕಾರಂಜಿ
9. ಹೆಬ್ಬಯಕೆ
   (ಅ) ಮಹತ್ತಾದ ಹಂಬಲ
   (ಆ) ದೊಡ್ಡ ದಡ್ಡತನ
   (ಇ) ಮುಚ್ಚಿಡುವುದು
   (ಈ) ಅಗ್ರಹಾರ
10. ಸಂಬಾಳಿಸು
    (ಅ) ಸಂಬಳ ಕೊಡು
    (ಆ) ನಿರ್ವಹಿಸು
    (ಇ) ಬಾಡಿಗೆಯಿಂದ ಒತ್ತು
    (ಈ) ಗಲಿಬಿಲಿ ಮಾಡು
11. ನಿಯಾಮಕ
    (ಅ) ದಾರಿ ತೋರುವವ
    (ಆ) ಗಂಟೆ ಬಾರಿಸುವವ
    (ಇ) ನಿಷ್ಠುರ
    (ಈ) ಕ್ರಮಗೊಳಿಸುವ
12. ನಿರಸ್ತ
    (ಅ) ಆಯುಧವಿಲ್ಲದವ
    (ಆ) ಸೋಲಿಸಲ್ಪಟ್ಟ
    (ಇ) ನಿಶ್ಚಿಂತ
    (ಈ) ಹೊಣೆ ಹೊತ್ತ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

1. ಬಕ್ಷಿ

(ಈ) ಅರಮನೆಯಲ್ಲಿ ಸಂಬಳ ವಿತರಿಸುವ ಅಧಿಕಾರಿ; ಖಜಾನೆಯ ವೇತನಾಧಿಕಾರಿ. ಉದಾ: ಮಂಜೂರಾದ ಸಂಬಳಕ್ಕೂ ಬಕ್ಷಿಯವರ ಆಶ್ರಯ ಬೇಕು (ಪಾರಸೀಕ-ಬಖ್‌ಶೀ)

2. ಗಜರು

(ಅ) ಗದರಿಸು, ಬೆದರಿಸು; ಗರ್ಜನೆ ಮಾಡು, ಆರ್ಭಟಿಸು, ಅಬ್ಬರಿಸು. ಉದಾ: ಗಜರಿದನು ಕಲಿ ಭೀಮ. (ದೇಶ್ಯ)

3. ವಲ್ಕಲ

(ಅ) ನಾರುಮಡಿ, ಮರದ ತೊಗಟೆಯಿಂದ ತೆಗೆದ ನಾರಿನಿಂದ ನೇಯ್ದ ಬಟ್ಟೆ. ಉದಾ: ವಲ್ಕಲಧಾರಿಗಳಾದ ಋಷಿಗಳು (ಸಂ.)

4. ವಿಷ ಪರೀಕ್ಷೆ

(ಇ) ತಾನೇ ತಿಂದು ವಿಷವನ್ನು ಪರೀಕ್ಷಿಸುವ ಹುಚ್ಚುತನ; ಪರಿಣಾಮ ನೋಡಲು ಅಪಾಯಕರ ಕೆಲಸ ಮಾಡುವುದು. ಉದಾ: ಅವನೊಡನೆ ಜಗಳಕ್ಕಿಳಿದು ವಿಷಪರೀಕ್ಷೆ ಮಾಡಬೇಡ. (ಸಂ.)

5. ವೈಷಮ್ಯ

(ಈ) ಸಮವಾಗಿಲ್ಲದಿರುವುದು; ಹೊಂದಿಕೆಗೆಡುವುದು; ವಿರೋಧ, ದ್ವೇಷ. ಉದಾ: ಗಂಡಹೆಂಡಿರಲ್ಲಿ ವೈಷಮ್ಯ. (ಸಂ.)

6. ಸಾಧ್ವಸ

(ಈ) ಸಡಗರ, ಸಂಭ್ರಮ; ಗಲಿಬಿಲಿ, ಗಾಬರಿ. ಉದಾ: ಅಕಸ್ಮಾತ್ತಾಗಿ ಬಂದ ಗಂಡನನ್ನು ಸಾಧ್ವಸದಿಂದ ಉಪಚರಿಸಿದಳು. (ಸಂ.)

7. ಸೊಗಸುಗಾರ

(ಅ) ರಸಿಕ; ಒನಪುಗಾರ; ಸುಖಕರ ವಿಷಯಗಳಲ್ಲಿ ಆಸಕ್ತ. ಉದಾ: ಸೊಗಸುಗಾರ ಗಂಡ ಸಿಕ್ಕಿದ. (ದೇಶ್ಯ-ಸಂ.'ಸುಖ'ದಿಂದ ಪ್ರಭಾವಿತ+ಕಾರ)

8. ಸರಿತ್ತು

(ಅ) ನದಿ, ಹೊಳೆ. ಉದಾ: ಸರಿತ್ತು ಸರೋವರಗಳು ತುಂಬಿದ್ದುವು. (ಸಂ-ಸರಿತ್)

9. ಹೆಬ್ಬಯಕೆ

(ಅ) ಮಹತ್ತಾದ ಆಸೆ, ದೊಡ್ಡ ಹಂಬಲ, ಮಹದಾಕಾಂಕ್ಷೆ. ಉದಾ: ಹೆಬ್ಬಯಕೆಯೊಡನೆ ಪಟ್ಟಣಕ್ಕೆ ಬಂದ. (ದೇಶ್ಯ, ಹಿರಿದು+ಬಯಕೆ)

10. ಸಂಬಾಳಿಸು

(ಅ) ನಿರ್ವಹಿಸು, ನಿಭಾಯಿಸು; ಹತೋಟಿಯಲ್ಲಿಡು. ಉದಾ: ಮಕ್ಕಳನ್ನು ಸಂಬಾಳಿಸಿಕೊಳ್ಳಬೇಕು. (ಹಿಂದಿ-ಸಮ್ಭಾಲನಾ)

11. ನಿಯಾಮಕ

(ಈ) ಕ್ರಮಗೊಳಿಸುವ, ಅಪ್ಪಣೆಕೊಡುವ, ನಿಯಂತ್ರಿಸುವ. ಉದಾ: ಜಗತ್ತಿನ ಹಿಂದೆ ನಿಯಾಮಕ ಶಕ್ತಿಯೊಂದಿದೆಯೆ? (ಸಂ.)

12. ನಿರಸ್ತ

(ಅ) ಸೋಲಿಸಿದ, ವ್ಯರ್ಥಗೊಳಿಸಲಾದ; ಇಲ್ಲವೆನಿಸಿದ. ಉದಾ: ಅವನ ತಂತ್ರಗಳನ್ನು ನಿರಸ್ತಗೊಳಿಸಿದ. (ಸಂ.)

## ನಿಮ್ಮ ಶಬ್ದಶಕ್ತಿ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6-8 ಸರಿಯಿದ್ದರೆ ... ಸಾಧಾರಣ

9-10 ಸರಿಯಿದ್ದರೆ ... ಉತ್ತಮ

11-12 ಸರಿಯಿದ್ದರೆ ... ಅತ್ಯುತ್ತಮ



ಬಾಪೂ ಜೀವನ ಪ್ರಸಂಗ

# ಕಲ್ಲು ಕಲಿಸಿದ ಪಾಠ

• ಗೌರೀಶ ಕಾಯ್ಕಿಣಿ

ಗಾಂಧೀಜಿಯ ಸಮಗ್ರ ಜೀವನದ ಜೀವನಾಡಿ ಶಿಸ್ತು. ನಿಯಮ ನಿಗ್ರಹಗಳ ಆ ಶಿಸ್ತು ಅತ್ಯಂತ ನಿಷ್ಠುರವಾಗಿತ್ತು, ಕಠೋರವಾಗಿತ್ತು. ಅದರ ಕಟು ಅನುಭವದಿಂದ ಘಾಸಿಯಾಗಿ ಆ ಕುರಿತು ದೇವದಾಸ ಗಾಂಧಿಯವರೇ ಬರೆದದ್ದುಂಟು. ಅವರ ಆ ಉಗ್ರ ಶಿಸ್ತಿನ ಉಪಟಳ ಅಸಹ್ಯವಾಗಿಯೇ ಬಂಡೆದ್ದು ಸಿಡಿದೆದ್ದು ಹೋದರು ಅವರ ಹಿರಿಯ ಮಗ ಹೀರಾಲಾಲ. ಮುಂದೆ ತಂದೆಯನ್ನು ಅಣಕಿಸಲೋ ಎಂಬಂತೆ ಆತ ಮುಸ್ಲಿಂ ಧರ್ಮ ಸೇರಿ ಅಬ್ದುಲ್ಲಾ ಗಾಂಧಿಯೂ ಆದನು!

ಗಾಂಧೀಜಿಯ ಈ ಶಿಸ್ತು ಕೇವಲ ತಮ್ಮ ಮಟ್ಟಿಗೇ ಇದ್ದಿಲ್ಲ. ತಮ್ಮ ಬದುಕಿಗೆ ಅಂಟಿಕೊಂಡ ಇತರರನ್ನು ಅದು ಪೀಡಿಸದೇ ಬಿಡುತ್ತಿದ್ದಿಲ್ಲ. ಆ ದೃಷ್ಟಿಯಿಂದ ಅವರು ಒಂದು ರೀತಿ ಪೀಡಾಭೋಗಿ (Sadist) ಆಗಿರಬೇಕು. Masochist ರೂ ಆಗಿರಬಹುದು. ಇದು ಮನೋವೈಜ್ಞಾನಿಕರಿಗೆ ಒಪ್ಪಿತ ತೀರ್ಮಾನ. ಅನೇಕ ಸಲ ಒಂದು ತತ್ವಾಚರಣೆ ನಿಮಿತ್ತವಿಟ್ಟುಕೊಂಡು ಇಂಥ ತೀವ್ರ ವಿಕೃತ ವರ್ತನೆ ನಡೆಯವುದುಂಟು. ಅಂಥ ಒಂದು ಹಿಂಸಾಚಾರದ ಮಾದರಿ ಇಲ್ಲಿದೆ.

ಮನು ಬೆನ್ ಗಾಂಧೀ ಬಾಪೂಜಿಯ ಹತ್ಯೆಯಾಗುವವರೆಗೂ ಅವರ ಅನುಗೋಲಾಗಿದ್ದಳು. ತಾನೇ ಅವಳ ತಾಯಿ ಎಂದು ಬಾಪೂಜಿ ಭಾವಿಸಿ ಅವಳ ಪೂರ್ಣ ಹೊಣೆ ಹೊತ್ತುಕೊಂಡಿದ್ದರು. ಮನು ಬೆನ್ 12 ವರ್ಷದವಳಿದ್ದಾಗಲೇ ತಾಯಿಯನ್ನು ಕಳೆದುಕೊಂಡಳು. ಅಂದಿನಿಂದಲೇ ಅವಳು ಗಾಂಧೀಜಿಯ ಆಶ್ರಮದಲ್ಲಿ ಬೆಳೆದಳು - ಕರಾಚಿಯಲ್ಲಿ ಇದ್ದ ತಂದೆಯ ಅನುಮತಿಯಿಂದ. 1942ರಲ್ಲಿ ಗಾಂಧೀಜಿ ಪರಿವಾರದೊಂದಿಗೆ ಸರಕಾರದ ಅತಿಥಿಯಾಗಿ ಆಗಾಖಾನ ಅರಮನೆಯಲ್ಲಿ ಸ್ಥಾನಬದ್ಧರಾದರು. ಆಗ ಮನು ಬೆನ್ ನಾಗಪುರ ಜೇಲಿನಲ್ಲಿ ಇದ್ದಳು. (ಆಗ ಅವಳ ವಯಸ್ಸು 17) ಗಾಂಧೀಜಿ ಸ್ಥಾನಬದ್ಧತೆಯಲ್ಲಿದ್ದಾಗ ಉಪವಾಸ ಕೈಗೊಂಡರು. ಅವರ ಚಿಂತೆಯಿಂದ ಉಪವಾಸ ಮುಗಿದೊಡನೆ ಕಸ್ತೂರಬಾರಿಗೆ ಹೃದಯವಿಕಾರ ಕಾಣಿಸಿಕೊಂಡಿತು. ಆಗಾಗ್ಗೆ ಆಘಾತಗಳಾಗ ಹತ್ತಿದವು. ತನ್ನ ಹತ್ತಿರ ಮನು ಬೆನ್ ಬೇಕೆಂದರು. ಆಗ ಬಾಪೂಜಿಯರ ವೈದ್ಯಕೀಯ ಆರೈಕೆ ಹೊತ್ತ ಡಾ. ಗಿಲ್ಡರ ಮತ್ತು ಡಾ. ಸುಶೀಲಾ ನಾಯರ್ ಮನುವನ್ನು ನಾಗಪುರ ಜೇಲಿನಿಂದ ಆಗಾಖಾನ ಅರಮನೆಗೆ ತರಿಸಿಕೊಳ್ಳಲು ಯತ್ನಿಸಿದರು. ಅದಕ್ಕೆ ಸರಕಾರ ಒಪ್ಪಲಿಲ್ಲ.

ಆದರೆ ಮುಂದೆ ರಾಜಾಜೀ ಮತ್ತು ದೇವದಾಸ ಗಾಂಧಿ ಲಾರ್ಡ್ ಲಿನ್‌ಲಿಥ್‌ಗೋ ಹಾಗೂ ಸರ್ ಟೋಟನ್‌ಹ್ಯಾಮ್‌ವರ್‌ರೊಂದಿಗೆ ಚರ್ಚಿಸಿ ಅವರ ಮನ ಒಲಿಸಿದರು. ಬಾ-ಬಾಪೂಜಿ ಇಬ್ಬರ ಆರೈಕೆಗೆ ಮನು ಬೆನ್ ಅಗತ್ಯವೆಂದು ಅವಳನ್ನು ಆಗಾಖಾನ್ ಅರಮನೆಗೆ ಸ್ಥಳಾಂತರಿಸಲಾಯಿತು. ಅಂದಿನಿಂದ ಗಾಂಧೀಜಿಯ ಹತ್ಯೆಯ ತನಕವೂ ಮನು ಬೆನ್ ಬಾಪೂಜಿಯ ನಿರಂತರ ನೆರಳಾಗಿ ನೆರವಾಗಿ ನಿಂತಳು. ತಾನೇ ಅವಳ ತಾಯಿ ಎನ್ನುತ್ತಿದ್ದರು ಬಾಪು. ಅವಳ ಶಿಕ್ಷಣ, ಗೀತಾಪಾಠದ ಹೊಣೆ ಅವರೇ ವಹಿಸಿಕೊಂಡರು. ಅವರ ಸೇವೆ



ಶುಶ್ರೂಷೆ, ಕಸ್ತೂರಬಾ ತೀರಿಕೊಂಡ ಮೇಲೆ ಮನು ಬೆನ್‌ಳ ಹೊಣೆಯಾಯಿತು. ಅವಳಿಗೆ ಬಾಪೂಜಿಯೆ ತಾಯಿ ಆದರು!

1946ರ ಕೊನೆಗೆ ಗಾಂಧೀಜಿಯ ನೌಖಾಲಿಯ ಪಾದ ಯಾತ್ರೆ ಆರಂಭವಾಯಿತು. ಆಗ ಮನು ಬೆನ್ ಅವರ ಅನುಗೋಲೇ ಆದಳು. ಆಗಲೇ ಅವಳು ತನ್ನ ದಿನಚರಿಯನ್ನು ಬರೆಯಲಾರಂಭಿಸಿದ್ದು. ಅದರೊಳಗಿನ ಒಂದು ಪ್ರಸಂಗವನ್ನು ಇಲ್ಲಿ ಕೊಡಲಾಗಿದೆ. ಅದರಿಂದ ಗಾಂಧೀಜಿಯವರ ನಿಖರ ಹಾಗೂ ಪ್ರಖರ ಶಿಸ್ತಿನ ಒಂದು ಮಾದರಿ ನಮಗೆ ಕಾಣುತ್ತದೆ.

ನೌಖಾಲಿಯಲ್ಲಿ ನಾರಾಯಣಪುರ ಒಂದು ಹಳ್ಳಿ. ಅಲ್ಲಿಗೆ ನಿತ್ಯದಂತೆ ಗಾಂಧೀಜಿ ಏಳು ಘಂಟೆಗೆ ತಲುಪಿದರು. ಒಬ್ಬ ಬಡ ನೇಕಾರನ ಮನೆಯಲ್ಲಿ ಅವರು ಬೀಡು ಬಿಟ್ಟರು. ಯಾವದೇ ಊರು ತಲುಪಿದೊಡನೆ ಗಾಂಧೀಜಿ ಬಿಸಿ ನೀರಿನಿಂದ ಕಾಲು (ಪಾದ) ತೊಳೆದುಕೊಳ್ಳುತ್ತಿದ್ದರು. ಆಮೇಲೆ ಹೆಚ್ಚು ಕಡಿಮೆ ಓದುವ ಬರೆಯುವ ತಮ್ಮ ಕೆಲಸ ಮಾಡುತ್ತಿದ್ದರು. ಅಷ್ಟು ವೇಳೆಯೊಳಗೆ ಮನು ಅವರ ಮಾಲೀಸು (ಮೈ ತಿಕ್ಕುವುದು) ಜಳಕಗಳ ವ್ಯವಸ್ಥೆ ಮಾಡುತ್ತಿದ್ದಳು. ಅದೆಲ್ಲವನ್ನು ಅಂದು ಆಕೆ ಕ್ರಮವಾಗಿ ಮಾಡಿದಳು.

ಗಾಂಧೀಜಿ ಮೀಯುವಾಗ ಸಾಬೂನಿನ ಬದಲು ಒಂದು ಹುರುಬುರುಕು ಕಲ್ಲು ಬಳಸುತ್ತಿದ್ದರು. ಈ ಕಲ್ಲನ್ನು ಮೀರಾ ಬೆನ್ ಅವರಿಗೆ ಹಲವಾರು ವರ್ಷಗಳ ಹಿಂದೆ ಕೊಟ್ಟಿದ್ದರು. ಆದರೆ ಈಗ ಆ ಗುಂಡುಕಲ್ಲು ಮೀಯುವಾಗ ಇದ್ದಿಲ್ಲ. ಮನು ಹಿಂದಿನ ದಿನ ಹಳ್ಳಿಯಲ್ಲಿಯೇ ಅದನ್ನು ಮರೆತು ಬಂದಿದ್ದಳು! ಮೀಯುವ ಕೋಣೆಯಲ್ಲಿ ಎಲ್ಲ ವಸ್ತುಗಳನ್ನು ಹಚ್ಚಿ ಇಡುವಾಗ ಆಕೆಯ ಗಮನಕ್ಕೆ ಇದು ಬಂತು.

ಆಗ ಮನು ಗಾಂಧಿಯವರಿಗೆ ಹೇಳಿದಳು. ''ಬಾಪೂಜೀ, ಮೈಯುಜ್ಜುವ ಕಲ್ಲನ್ನು ನಾನು ಎಲ್ಲೋ ಕೈ ತಪ್ಪಿ ಮರೆತು ಬಂದೆ. ಬಹುಶಃ ನಿನ್ನೆ ನಾವು ತಂಗಿದ ನೇಕಾರನ ಮನೆಯಲ್ಲಿಯೇ ಇರಲು ಸಾಕು ಈಗ ಏನು ಮಾಡಲಿ?''



ಕಸ್ತೂರಿ

ಗಾಂಧಿಜೀಯವರು ಸ್ವಲ್ಪ ಹೊತ್ತು ಆಲೋಚಿಸಿದರು. ಆಮೇಲೆ ಅಂದರು, ''ತಪ್ಪನ್ನಂತೂ ನೀನು ಮಾಡಿದ್ದೀಯೇ. ನೀನೇ ತಿರುಗಿ ಹೋಗಿ ಕಲ್ಲನ್ನು ಹುಡುಕಿ ತರಬೇಕು ಎಂದು ನನ್ನ ಇಚ್ಛೆ. ನನಗಾಗಿ ತಿಂಡಿ ತಯಾರಿಸಿರಿ - ಎಂದು ನಿರ್ಮಲ ಬಾಬೂರಿಗೆ ಹೇಳು. ಆದರೆ ಆ ಕಲ್ಲು ಹುಡುಕಲು ನೀನೇ ಹೋಗಬೇಕು. ಈಗ ಒಮ್ಮೆ ಹಾಗೆ ಮಾಡಿದರೆ ನಿನಗೆ ಇನ್ನೊಂದು ಸಲ ಇದು ನೆನಪಿನಲ್ಲಿ ಉಳಿಯುವುದು''

ಆಗ ಮನು ಅಂಜುತ್ತಾ ಹೇಳಿದಳು, ''ಈ ಊರಲ್ಲಿ ಇಷ್ಟೆಲ್ಲ ಸ್ವಯಂ ಸೇವಕರಿದ್ದಾರೆ. ಅವರಲ್ಲಿ ಒಬ್ಬನನ್ನು ಸಂಗಡ ಒಯ್ಯಲೇ?''

''ಏಕೆ?'' ಬಾಪೂಜಿ ಕೇಳಿದರು.

ಪಾಪ, ಅದಕ್ಕೆ ಉತ್ತರ ಕೊಡದಾದಳು ಮನು. ನೌಖಾಲಿಯಲ್ಲಿ ತೆಂಗು- ಅಡಿಕೆಗಳ ಬನಗಳು ಭಾರಿ ದಟ್ಟ ಬೆಳೆದಿರುತ್ತವೆ. ಅವುಗಳಲ್ಲಿ ಹೊಸಬರು ಹೊಕ್ಕರೆ ಹಾದಿ ತಪ್ಪುವುದು ಸಲೀಸು. ಅಲ್ಲದೆ ಆಗ ಜಾತೀಯ ದೊಂಬಿಗಳ ಕಾಲ. ಆ

## ಇನ್ನೊ ಒಂದು ಧೋತಿ ....

*ಮಹಾತ್ಮಾಜಿಯ ಮೊಮ್ಮಗ ಕಾಂತಿಲಾಲ್ ಆಗ ಮೈಸೂರಿನ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿ. ರಜಾ ದಿನಗಳಲ್ಲಿ ಒಮ್ಮೆ ಸೇವಾಗ್ರಾಮಕ್ಕೆ ಬಂದರು.*

*ಒಂದು ದಿನ ನಾನು ಬಾಪುವನ್ನು ಕಾಣಲೆಂದು ಅಲ್ಲಿಗೆ ಹೋದಾಗ ಅಜ್ಜ-ಮೊಮ್ಮಗನ ಮಧ್ಯೆ ವಾಗ್ಯುದ್ಧ ನಡೆದಿತ್ತು. ಕಾಂತಿಭಾಯಿ ತನಗೆ ಇನ್ನೂ ಒಂದು ಧೋತಿ ಬೇಕು ಎನ್ನುತ್ತಿದ್ದರೆ, ಮಹಾತ್ಮಾ 'ಅದು ಅನವಶ್ಯ' ಎನ್ನುತ್ತಿದ್ದರು.*

*ನಾನಲ್ಲಿಗೆ ಹೋಗುವ ಮೊದಲು ಎಷ್ಟು ಹೊತ್ತಿನಿಂದ ಆ ವಾದ ನಡೆದಿತ್ತೋ ಅರಿಯೆ; ಆದರೆ ಮುಂದೆ ಹದಿನೈದು ನಿಮಿಷಗಳವರೆಗೂ ಅದು ಮುಂದುವರಿಯಿತು. ಬಾಪು ಪಟ್ಟು ಬಿಡಲಿಲ್ಲ.*

*ಕಾಂತಿಭಾಯಿ ಅಲ್ಲಿಂದ ಹೊರಟುಹೋದರು. ನನಗೆ ಏನು ಹೇಳಬೇಕೆಂದು ತಿಳಿಯದಾಯಿತಾದರೂ, ''ಬಾಪು, ನಿಮಗೆ ಸಮಯ ತುಂಬ ಮಹತ್ವದ್ದು. ಆದರೂ ಇಂಥ ನಗಣ್ಯ ವಿಷಯದ ಕುರಿತು ...''*

*ಮಹಾತ್ಮಾ ನಡುವೆಯೆ ನನ್ನ ಮಾತು ಕತ್ತರಿಸುತ್ತ, ''ನೀನು ಹೇಳಬೇಕೆಂದಿರುವುದೇನೆಂದು ತಿಳಿಯಿತು. ವಿಷಯ ಮಹತ್ವದ್ದೋ ಅಲ್ಲವೋ ಎಂಬುದಿಲ್ಲಿ ಮುಖ್ಯವಲ್ಲ, ಅದರಲ್ಲಿ ಅಡಗಿರುವ ತತ್ವ ಮಹತ್ವದ್ದು. ನಾವು ದೀನರ ದೇವರನ್ನು ಪೂಜಿಸಬೇಕು. ಆದ್ದರಿಂದ ಜನರಿಂದ ಕಡಿಮೆ ಪಡೆದು ಪ್ರತಿಯಾಗಿ ಹೆಚ್ಚು ಕೊಡಬೇಕು. ಅನವಶ್ಯ ಕಾರಣಗಳಿಗಾಗಿ ಒಂದೇ ಒಂದು ಪೈಯನ್ನೂ ಖರ್ಚು ಮಾಡಲು ನನ್ನ ಮನಸ್ಸಿಗೆ ನೋವಾಗುತ್ತದೆ. ನಿಜವಾದ ಅವಶ್ಯಕತೆಯಿದ್ದರೆ ಸಾವಿರ ರೂಪಾಯಿಗಳನ್ನು ಖರ್ಚು ಮಾಡು, ಬೇಕಾದರೆ. ಮನುಷ್ಯನ ಮೂಲ 'ಬೇಕು'ಗಳಿಗೆ ಹೋಲಿಸಿದಾಗ ಹಣ ಏನೂ ಅಲ್ಲ ನಿಜ. ಬಾಲ್ಕೊಬಾನ ಶುಶ್ರೂಷೆಗೆ ನೀರಿನಂತೆ ನಾನು ಹಣ ವ್ಯಯಿಸುವುದು ನಿನಗೆ ಗೊತ್ತೇ ಇದೆ. ಅದಕ್ಕಾಗಿ ನಾನು ಒಂದಿನಿತೂ ಹಿಂದೆ ಮುಂದೆ ನೋಡುವುದಿಲ್ಲ. ಆದರೆ, ಕಾಂತೀಗೆ ಇನ್ನೊಂದು ಧೋತಿ ಅನವಶ್ಯ ಎಂಬುದು ಅರಿವಾಗಿಯೂ ನಾನು ಅದು ಹೇಗೆ ಅವನಿಗೆ ಕೊಳ್ಳಲು ಒಪ್ಪಿಗೆ ಕೊಡಲಿ?''*

*ಅಕ್ಷರಶಃ ಗಾಂಧೀಜಿ ಸಾರ್ವಜನಿಕ ಹಣದ ರಕ್ಷಕರಾಗಿದ್ದರು. ಈ ವಿಷಯದಲ್ಲಿ ಅವರು ತುಂಬ ನಿಷ್ಠುರತೆಯನ್ನು ಪಾಲಿಸಿಕೊಂಡು ಬಂದಿದ್ದರು.* ●

● *ರಾಮನಾರಾಯಣ ಚೌಧರಿ*

*('ಬಾಪು-ನಾನು ನೋಡಿದಂತೆ'ದಿಂದ)*

## ಸಾವು

**ಹಗಲೆಲ್ಲ ಧಗಧಗ ಉರಿಯುವ ಸೂರ್ಯ ಮುಳುಗುವಾಗ**
**ಸಾಯುವ ಮುದುಕನಾಗುವನು ಕೈಕಾಲು**
**ಸಣ್ಣಾಗಿ ಗಲ್ಲ ಅವಚೊತ್ತಿ ತೊಗಲು ಇಳಿಬಿದ್ದು**
**ಗೊರ್ಡಲ್ತ ಬೊಗಸೆ ಬೊಗಸೆ ರಕ್ತ ಕಾರುತ್ತಾ ಕೆಮ್ಮುತ್ತಾ**
**ಸಾಯುವನು**

*ಚೆನ್ನಣ್ಣ ವಾಲೀಕಾರ*

---

ದಾರಿಯಲ್ಲಿ ಮುಸ್ಲಿಮರದೇ ಮನೆಗಳು. ದಾರಿಯೂ ಶೂನ್ಯ ಭೀಕರ. ಆಕೆ ಒಬ್ಬಂಟಿಯಾಗಿ ಹೇಗೆ ಹೋದಾಳು? ಆದರೆ ತಪ್ಪು ಮಾಡಿಬಿಟ್ಟಿದ್ದಾಳೆ. ಅಂದಾಗ ಹೋದ ಹೊರತು ವಿಧಿ ಇಲ್ಲ. ಅದಕ್ಕೆ ಮನು 'ಏಕೆ?' ಎಂಬ ಪ್ರಶ್ನೆಗೆ ಉತ್ತರ ಕೊಡದೆ ತುಸು ಮುನಿಸಿನಿಂದಲೇ ನಡೆಯುತ್ತಿದಳು. ಎಲ್ಲಿಂದಾದರೂ ಒಬ್ಬ ಪುಂಡ ಬಂದರೆ ತನಗೆ ಪೀಡೆ ಕೊಡುತ್ತಿದರೆ? ಎಂಬ ಶಂಕೆ ಮನಸ್ಸಿನಲ್ಲಿ ಮಿಂಚಿ ಹೋಯಿತು. ಆದರೆ ರಾಮನಾಮವನ್ನು ನೆನೆಯುತ್ತ ಹೋಗತೊಡಗಿದಳು. ಯಾವ ಹಾದಿಯಿಂದ ಬಂದಿದ್ದರೋ ಆ ಹಾದಿಯಲ್ಲಿಯ ಹೆಜ್ಜೆ ಗುರುತುಗಳನ್ನೂ ನೋಡುತ್ತಾ ಮುಂದರಿದಳು.

ಕೊನೆಗೂ ಆ ನೇಕಾರನ ಮನೆಯೇನೋ ಸಿಕ್ಕಿತು. ಅಲ್ಲಿ ಒಬ್ಬಳೇ ಮುದುಕಿ ಇರುತ್ತಿದ್ದಳು. ಆ ಮುದುಕಿಗೇನು ಗೊತ್ತು - ಆ ಕಲ್ಲು ಇಷ್ಟು ಬೆಲೆ ಬಾಳುವಂಥದೆಂದು? ಆಕೆ ಅದನ್ನೆತ್ತಿ ಎಸೆದು ಬಿಟ್ಟಿದ್ದಳು! ಆದರೆ ಅದನ್ನು ಅತ್ತಿತ್ತ ಹುಡುಕಾಡಿ, ಕಲ್ಲು ಸಿಕ್ಕಿದಾಗ ಮನುವಿನ ಆನಂದಕ್ಕೆ ಮಿತಿಯೇ ಇರಲಿಲ್ಲ. ಅದನ್ನು ಅಮಚಿಕೊಂಡು ಮನು ಲಗುಬಗೆಯಿಂದ ಹೆಜ್ಜೆ ಇಡುತ್ತ ನಾರಾಯಣಪುರಕ್ಕೆ ಮರಳಿ ಹೊರಟಳು. ಮುಂಜಾನೆ ಒಂಬತ್ತೂವರೆಗೆ ಅಲ್ಲಿಂದ ಹೊರಟವಳು ಮಧ್ಯಾಹ್ನ ಒಂದು ಗಂಟೆಗೆ ಬೀಡಿಗೆ ಬಂದು ಮುಟ್ಟಿದಳು. ವಿಪರೀತ ಹಸಿವೆ. ಆದರೂ ಈ ಒಂದು ಸಣ್ಣ ತಪ್ಪಿನಿಂದ ಬಾಪೂಜಿಯ ಇಷ್ಟು ಹೊತ್ತಿನ ಸೇವೆಗೆ ಎರವಾಗಬೇಕಾಯಿತಲ್ಲ! ಈ ದುಃಖವೇ ಮನುಬೆನ್‌ಳಿಗೆ ಅಸಹನೀಯವಾಯಿತು.

ಆ ಕಲ್ಲನ್ನು ಬಾಪೂಜಿಯ ಮುಂದೆ ಇಟ್ಟು ಮನು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಬಾಪೂಜಿ ಅಂದರು, ''ಇಂದು ನಿನ್ನ ಪರೀಕ್ಷೆ ಆಯಿತು, ಮನೂ. ಈಶ್ವರನು ಮಾಡುವುದೆಲ್ಲ ಶುಭಕ್ಕೇ, ನೀನು ಮೊದಲನೆಯ ದಿನ ಬಂದಾಗಲೇ ಹೇಳಿದ್ದೇನಲ್ಲ - ನನ್ನ ಯಜ್ಞದಲ್ಲಿ ಬರುವುದೆಂದರೆ ಭಾರಿ ಸಾಹಸದ ಕೆಲಸ. ಎದೆಗಾರಿಕೆ ಸ್ವಲ್ಪವೂ ಕಡಿಮೆ ಬಿದ್ದರೆ ನಾನು ನಿನ್ನನ್ನು ವಾಪಸು ಮಾಡುವೆನು. ಆದ್ದರಿಂದ ಮರಳಿ ತಂದೆ ಇದ್ದಲ್ಲಿಗೆ ಹೋಗುವಿಯಾದರೆ ಹೋಗು. ಆದರೆ ನನ್ನ ಪಾದಯಾತ್ರೆ ಶುರುವಾದ ಮೇಲೆ ಮಾತ್ರ ನೀನು ಎಲ್ಲೂ ಹೋಗುವುದು ಸಾಧ್ಯವಿಲ್ಲ. ಆದ್ದರಿಂದಲೇ ಈ ಪುಟ್ಟ ಕಲ್ಲಿನ ನೆವದಿಂದ ನಿನ್ನ ಪರೀಕ್ಷೆ ಆಯಿತು. ನೀನು ಅದರಲ್ಲಿ ಉತ್ತೀರ್ಣಳಾದಿ. ಇದರಿಂದ ನನಗೆಷ್ಟು ಆನಂದ! ಈ ಕಲ್ಲು ನಾನು 25 ವರ್ಷ ಜತೆಗೆ ಕಾದಿಟ್ಟುಕೊಂಡ ಗೆಳೆಯ. ಸೆರೆಮನೆ ಸೇರಲಿ, ಅರಮನೆ ಸೇರಲಿ ಈ ಕಲ್ಲು ನನ್ನೊಂದಿಗೇ ತಿರುಗಿದೆ. ಅದು ಈಗ ಸಿಗದಿದ್ದರೆ, ನನಗೂ ಮೀರಾ ಬೆನ್‌ಳಿಗೂ ಭಾರಿ ದುಃಖವಾಗುತ್ತಿತ್ತು. ಇದೂ ಅಲ್ಲದೆ ನಿನಗೂ ಒಂದು ಪಾಠ ಕಲಿತಂತೆ ಆಯಿತು. 'ಕಲ್ಲೇನು? ಇಂಥವು ಎಷ್ಟೋ ಸಿಗಬಹುದು. ಬೇರೊಂದು ಕಲ್ಲು ಹುಡುಕೋಣ' ಎಂದು ಹಗುರಾಗಿ ಪರಿವೆಗೆಟ್ಟು ಭಾವಿಸಕೂಡದು. ಪ್ರತಿಯೊಂದು ಉಪಯೋಗದ ಒಡವೆಯನ್ನು ಕಾಳಜಿಯಿಂದ ಕಾದಿಡಲು ಕಲಿಯಬೇಕು.''

ಆಗ ಮನು ಅಂದಳು. ''ಆದರೆ, ಬಾಪೂಜೀ ಮನಃಪೂರ್ವಕವಾಗಿ ನಾನು ರಾಮನಾಮವನ್ನು ಜಪಿಸಿದ್ದೆಂದರೆ ಇಂದೇ! ಆ ಭಣಗುಡುವ ಹಾದಿಯಲ್ಲಿ ಹೋಗುವಾಗ ಎದೆ ಡವಡವ ಬಡಿಯುತ್ತಿತ್ತು!''

ಗಾಂಧಿ ನಗುತ್ತಾ ಅಂದರು. ''ಸರಿ ಸಂಕಟ ಬಂದು ಇದುರು ನಿಂತಾಗಲೇ ಈಶ್ವರನ ನೆನಪು ಆಗುತ್ತದೆ!''

# ಕರ್ಫ್ಯೂ

● ಮುರಲೀಧರ ಕುಲಕರ್ಣಿ

ಕರ್ಫ್ಯೂ ಎಂಬ ಪದ ಇಂದು ಮನೆ ಮಾತಾಗಿದೆ. ದಿನಬೆಳಗಾದರೆ ಒಂದಿಲ್ಲೊಂದು ನಗರದಲ್ಲಿ ಕರ್ಫ್ಯೂ ವಿಧಿಸಿದ ಬಗ್ಗೆ ನಾವು ಪತ್ರಿಕೆಗಳಲ್ಲಿ ಓದುತ್ತೇವೆ. ಪಂಜಾಬ್, ಜಮ್ಮು-ಕಾಶ್ಮೀರದಂತಹ ರಾಜ್ಯಗಳಲ್ಲಿ ಕರ್ಫ್ಯೂ ಜನಜೀವನದ ಒಂದು ಅಂಗವೇ ಆಗಿದೆ. ಕರ್ಫ್ಯೂ ಪದಕ್ಕೆ ಈಗಿರುವ ಅರ್ಥ ಜನರು ತಮ್ಮ ಮನೆಗಳಿಂದ ಹೊರಬರದಂತೆ ಸರ್ಕಾರ ವಿಧಿಸುವ ನಿಷೇಧಾಜ್ಞೆ ಎಂದಾಗುತ್ತದೆ. ಆದರೆ ಕರ್ಫ್ಯೂ ಪದದ ನಿಜವಾದ ಅರ್ಥ ಅದಲ್ಲ. ಕರ್ಫ್ಯೂ ಪದ ಜನ್ಮತಾಳಿದಾಗ ಅದಕ್ಕಿದ್ದ ಅರ್ಥ ದೀಪಗಳನ್ನು ಅಥವಾ ಬೆಂಕಿಯನ್ನು ನಂದಿಸಲು ನೀಡುವ ಸೂಚನೆ ಎಂಬುದು. ಕರ್ಫ್ಯೂ ಪದದ ಹಿಂದೆ ಒಂದು ಸ್ವಾರಸ್ಯಕರವಾದ ಇತಿಹಾಸವೇ ಇದೆ. ಮೊಟ್ಟಮೊದಲು ಈ ಪದ ಬಳಕೆಗೆ ಬಂದದ್ದು ಹದಿನಾರನೆಯ ಶತಮಾನದಲ್ಲಿ. ಆಗ ಯೂರೋಪಿನಲ್ಲಿ ಚಳಿಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಜನರು ತಮ್ಮ ತಮ್ಮ ಮನೆಗಳಲ್ಲಿ ಬೆಂಕಿಯನ್ನು ಉರಿಸುತ್ತಿದ್ದರು. ಆದರೆ ಕೆಲವು ವೇಳೆ ಜನರು ಆಲಸ್ಯದಿಂದಾಗ ಬೆಂಕಿ ಆರಿಸುವುದನ್ನು ಮರೆತುಬಿಡುತ್ತಿದ್ದರು. ಇದರಿಂದ ಭೀಕರವಾದ ಅಗ್ನಿ ಆಕಸ್ಮಿಕಗಳು ಸಂಭವಿಸುತ್ತಿದ್ದವು. ಆದುದರಿಂದ ಈ ಅಗ್ನಿ ದುರಂತಗಳಿಂದ ಜನರ ವಿತ್ತ ಹಾಗೂ ಪ್ರಾಣಗಳನ್ನು ರಕ್ಷಿಸಲು ಒಂದು ನಿಶ್ಚಿತ ವೇಳೆಗೆ ಚರ್ಚಿನಲ್ಲಿ ಗಂಟೆಯನ್ನು ಬಾರಿಸಿ ಜನರು ತಮ್ಮ ಮನೆಗಳಲ್ಲಿ ಬೆಂಕಿ ಆರಿಸುವಂತೆ ಸೂಚನೆ ನೀಡಲಾಗುತ್ತಿತ್ತು. ಚರ್ಚಿನಲ್ಲಿ ಬಾರಿಸಲ್ಪಡುವ ಆ ಗಂಟೆಯ ಧ್ವನಿಗೆ ಆಗ ಕರ್ಫ್ಯೂ ಎಂದು ಕರೆಯುತ್ತಿದ್ದರು. ಗಂಟೆ ಬಾರಿಸುವುದಕ್ಕೆ ಮೊದಲೇ ಜನರು ತಮ್ಮ ಊಟ ತಿಂಡಿಗಳನ್ನು ಮುಗಿಸಿಕೊಂಡು ಮಲಗುವದಕ್ಕೆ ಸಿದ್ಧರಾಗಿರುತ್ತಿದ್ದರು. ಗಂಟೆ ಬಾರಿಸಿದೊಡನೆಯೇ ದೀಪವನ್ನು, ಬೆಂಕಿಯನ್ನು ಆರಿಸಿ ಮಲಗಿಕೊಂಡುಬಿಡುತ್ತಿದ್ದರು.

ಮಧ್ಯಯುಗದಲ್ಲಿ (Feudal Lords)ಜಮೀನುದಾರರೇ ಆಡಳಿತಗಾರರಾಗಿದ್ದರು. ತಮ್ಮ ಅಧೀನದಲ್ಲಿರುವ ಪ್ರಜೆಗಳ ವಿತ್ತ ಹಾಗೂ ಪ್ರಾಣಗಳ ರಕ್ಷಣೆಯ ಜವಾಬ್ದಾರಿ ಅವರದಾಗಿತ್ತು. ಆದುದರಿಂದ 'ಕರ್ಫ್ಯೂ' ಪದಕ್ಕೆ ಅವರು ಧಾರ್ಮಿಕ ರೂಪವನ್ನು ನೀಡಿದರು. ಅಂದಿನ ಕಾಲದಲ್ಲಿ ಜನರು ಧರ್ಮಭೀರುಗಳಾಗಿದ್ದುದರಿಂದ ಧಾರ್ಮಿಕ ಆದೇಶಗಳನ್ನು ದೇವರ ಆದೇಶಗಳೆಂದು ತಿಳಿದು ಪಾಲಿಸುತ್ತಿದ್ದರು. ಜನರ ಆಸ್ತಿಪಾಸ್ತಿಯ ರಕ್ಷಣೆ ಅವಶ್ಯಕತೆ ಹೆಚ್ಚಾಗಿ ರಾತ್ರಿಯೇ ಇರುತ್ತಿದ್ದುದರಿಂದ ರಾತ್ರಿ ಒಂದು ನಿಶ್ಚಿತ ಸಮಯಕ್ಕೆ ಎಲ್ಲಾ ಚರ್ಚುಗಳಲ್ಲಿ ಗಂಟೆಗಳು ಮೊಳಗಲು ಆರಂಭವಾಗುತ್ತಿದ್ದವು. ಅದನ್ನು ದೈವಿ ಆದೇಶವೆಂದು ಭಾವಿಸಿದ ಜನ ತಮ್ಮ ತಮ್ಮ ಮನೆಗಳಲ್ಲಿಯ ದೀಪ ಹಾಗೂ ಬೆಂಕಿಯನ್ನು ಆರಿಸಿಬಿಡುತ್ತಿದ್ದರು. ಹೀಗೆ ಬೆಂಕಿಯನ್ನು ಆರಿಸು ಎಂಬ ಅರ್ಥದಲ್ಲಿ ಕರ್ಫ್ಯೂ ಪದ ಹುಟ್ಟಿತು. ಈಗ ಈ ಬಗೆಯ ಸೂಚನೆ ನೀಡುವ ಅವಶ್ಯಕತೆ ಇಲ್ಲವಾದರೂ ಯುರೋಪಿನ ಕೆಲವು ನಗರಗಳಲ್ಲಿ ರಾತ್ರಿಯ ವೇಳೆಗೆ ಚರ್ಚುಗಳಲ್ಲಿ ಗಂಟೆಯನ್ನು ಬಾರಿಸುವ ಪದ್ಧತಿ ಹಾಗೆಯೇ ಉಳಿದುಕೊಂಡಿದೆ. ●

# ಕೆಂಡ

ಸರಸು ಬಾಜರ ಹಲಗೆಯಲ್ಲಿ ಕೂತು ಪದ್ಯ ಬಾಯಿಪಾಠ ಮಾಡಿಕೊಳ್ಳುತ್ತಿದ್ದಳು. 'ಧರಣಿ ಮಂಡಲ ಮಧ್ಯದೊಳಗೆ' ಹೇಳುತ್ತ ಹೋದಾಗ ಸರಾಗವಾಗಿ ಇಡೀ ಪದ್ಯ ಬರುವುದು ತಿಳಿದು ತನ್ನ ಬಗ್ಗೆ ಹೆಮ್ಮೆಯಾಯಿತು. ಜತೆಗೇ ಮೊನ್ನೆ ಮೇಸ್ಟ್ರು ಹೇಳಿದ್ದು ನೆನಪಾಗಿ ಮತ್ತೂ ಖುಷಿಯೆನ್ನಿಸಿತು. 'ನಮ್ಮ ಶಾಲೆಯಲ್ಲಿಯೇ ಒಳ್ಳೆ ಕಂಠದ ಹುಡುಗಿ ಇವಳು. ಎಷ್ಟು ಚಂದ ಹಾಡುತ್ತಾಳೆ, ನೀವೊಮ್ಮೆ ಕೇಳಬೇಕು ಸರ್' ಎಂದಿದ್ದರಲ್ಲಾ ಹೆಡ್‌ಮೇಸ್ಟ್ರ ಹತ್ತಿರ? ಆದರೇನಂತೆ ಅದೆಲ್ಲ ಶಾಲೆಯಲ್ಲಿ ಮಾತ್ರ. ಮನೆ ಒಳಗೆ ತನ್ನ ಬಗ್ಗೆ ಇಂಥ ಯಾವ ಪಂಚಾತಿಕೆಯೂ ನಡೆಯುವುದೇ ಇಲ್ಲ. ಇರುವುದೆಲ್ಲ ಕಿಟ್ಟಿ, ರಾಧಿ, ಮಾಲತ್ತಿಗೆ, ಪ್ರದೀಪ ಭಾವಂದಿರಷ್ಟೇ. 'ನಮ್ಮ ರಾಧಿ ಹಾಗೇ, ತುಂಬ ಜಾಣೆ' ಎಂದು ಸಣ್ಣತ್ತೆ ರಾಗ ಎಳೆದು ಹೇಳಿದರೆ ಪುಟ್ಟತ್ತೆ ತಕ್ಷಣ ಕಿಟ್ಟಿಯ ಪರಾಕ್ರಮಗಳ ಬಣ್ಣನೆಗೆ ತೊಡಗುತ್ತಾಳೆ. ಅವರಿಬ್ಬರೂ ಹಾಗೆ ಕೊಚ್ಚುವಾಗ ದೊಡ್ಡತ್ತೆಗೆ ಸುಮ್ಮನೆ ಇರಲಾಗುತ್ತದೆಯೇ? ಸರಿ, ಅವರೂ ಪ್ರದೀಪ ಭಾವನ ಬಗ್ಗೆ ಕೊಂಡಾಡಲು ಶುರು ಮಾಡುತ್ತಾರೆ. ಈ ಮೂವರೆಡೆಯಲ್ಲಿ ತಾನು? ತನ್ನ ಸುದ್ದಿ ಯಾರಿಗೂ ಬೇಡ. ಆದರೂ ಈ ವರೆಗೆ ಇದ್ದುದರಲ್ಲಿ ದೊಡ್ಡತ್ತೆಯೇ ವಾಸಿಯಪ್ಪ. ಒಮ್ಮೊಮ್ಮೆ ಅವರೂ 'ಸರಸಿಯು ಬುದ್ಧಿ ಚುರುಕಪ್ಪ' ಎನ್ನುತ್ತಿದ್ದರು. ಆದರೆ ಇತ್ತೀಚೆಗೆ, ಅಂದರೆ ಪಾಲಿನ ಗಲಾಟೆ ಆರಂಭಿಸಿದ ನಂತರ ಅವರೂ ಒಂದು ನಮೂನೆ ಆಗಿಬಿಟ್ಟಿದ್ದಾರೆ. ದೊಡ್ಡ ಮಾವ, ಸಣ್ಣ



ಮಾವ, ಪುಟ್ಟ ಮಾವ ಮೂವರೂ ಪಾಲಾಗಿ ಬೇರೆ ಬೇರೆ ಇರುತ್ತಾರಂತೆ ಇನ್ನು. ಆಗ ತಾನು? ತಾನೆಲ್ಲಿರುವುದು? ಪದ್ಯದಿಂದ ಶುರುವಾದ ಯೋಚನೆ ಪಾಲಿನವರೆಗೂ ಹರಿದಾಗ ಮಾತ್ರ ಸರಸಿ ಖಿನ್ನಳಾದಳು. ಬೆಳಿಗ್ಗೇ ಮನಸ್ಸೆಲ್ಲ ಒಂದು ರೀತಿಯಾಗಿ ಮಂಕಾಗಿ ಬಿಟ್ಟಳು.

ಇಂದು ಮಾತ್ರವಲ್ಲ, ಪಾಲಿನ ಗಲಾಟೆ ಆರಂಭವಾದಾಗಿನಿಂದಲೂ ಅವಳು ಪೆಚ್ಚಾಗಿ ಬಿಟ್ಟಿದ್ದಾಳೆ. ಅದಕ್ಕೆ ಕಾರಣ ಆ ಚರ್ಚೆಯಲ್ಲಿ ಕೆಲವೊಮ್ಮೆ ಅವಳ ವಿಚಾರವೂ ಬರುತ್ತಿದ್ದುದು. 'ಸರಸಿಯ ಹೊಣೆ ಯಾರಿಗೆ? ನನಗೋ ಪ್ರಾಯ ವಾಯಿತು, ಇನ್ನಿನ್ನೂ ಹೊಸ ಜವಾಬ್ದಾರಿ ಹೆಗಲಿಗೆ ಏರಿಸಿಕೊಂಡರೆ ಹೇಗೆ?' ಎಂದೆಲ್ಲ ದೊಡ್ಡ

● 'ಗಂಗಾ' ಪಾದೇಕಲ್

ಬರುವುದೇ ಕಡಿಮೆ. ಕಳೆದ ವರ್ಷ ಕಿಟ್ಟಿಯ ಉಪನಯನಕ್ಕೇ ಬಂದದ್ದಲ್ಲವೆ? ಆಮೇಲೆ ತಾನು ನೋಡಲೇ ಇಲ್ಲ ಅವರನ್ನು. ಅಲ್ಲ, ಯಾಕೆ ತನ್ನನ್ನು ಅವರು ಕರಕೊಂಡು ಹೋಗುವುದಿಲ್ಲ? ಮೊದಲು, ತನ್ನಮ್ಮ ಸತ್ತಾಗ ತಾನಿನ್ನೂ ಸಣ್ಣ ಶಿಶುವಂತೆ. 'ಆ ಹಿಳ್ಳೆಯನ್ನು ಹೇಗೆ ನೋಡಿಕೊಳ್ಳಲಿ, ಅತ್ತೆ? ಈಗ ಇವಳು ಇಲ್ಲಿಯೇ ಇರಲಿ ಆಗದೆ?' ಎಂದಿದ್ದನಂತೆ ಅಪ್ಪ, ಅಜ್ಜಿ ಹತ್ತಿರ. ಆದರೆ ಆಮೇಲೆ ಮಾತ್ರ ಅಪ್ಪ ಬಂದದ್ದೇ ಕಡಿಮೆ ಅಂತೆ. ಅಜ್ಜಿ ಹೇಳುತ್ತಿರಲಿಲ್ಲವೆ? 'ಗಂಡಸರ

# ನಿನ್ನವರೆಂದು ಕಾಣಿರಿ

ಮಾವ ಹೇಳಿದರೆ ಸಣ್ಣ ಮಾವ, ಪುಟ್ಟ ಮಾವ ಬೇರೆನಾದರೂ ವಾದ ಹೂಡುತ್ತಾರೆ. ಅಂತೂ ತನಗೆ ಎಲ್ಲಿ ಮನೆ ಎಂದಿನ್ನೂ ನಿಶ್ಚಯವಾಗಲಿಲ್ಲ. ಓ ಮೊನ್ನೆ ಹೀಗೇ ಚರ್ಚೆ ನಡೆಯುತ್ತಿದ್ದಾಗ ರಾಧಿ ಹೇಳಿದ್ದಳು, 'ಅಲ್ಲ, ಸರಸಿ ಅವಳ ಮನೆಯಲ್ಲೇ ಇರಬಾರದೆ? ಯಾವಾಗಲೂ ನಮ್ಮ ಜತೆಗೇ ಇರಬೇಕೆಂದೇನು?' ಆ ಮಾತಿಗೆ ಎಲ್ಲರೂ ಮೌನವಾಗಿದ್ದಾಗ ಸಣ್ಣತ್ತೆ ತನ್ನ ಎಂದಿನ ರಾಗದಲ್ಲಿ 'ಇರಬಹುದೂ .... ಅವಳಪ್ಪ ಕರಕೊಂಡು ಹೋದರೆ' ಎಂದಿದ್ದಳು. ಅದೇನೋ ತಮಾಷೆ ಎಂಬಂತೆ ಎಲ್ಲರೂ ನಕ್ಕು ಬಿಟ್ಟರೆ, ದೊಡ್ಡ ಮಾವ ಮಾತ್ರ ಗಂಭೀರವಾಗಿ 'ಹಾಗೆ ಆದರೆ ಒಳ್ಳೇದೇ ಆಯಿತಲ್ಲ!' ಎಂದಿದ್ದರು. ಅವರು ಹಾಗೆ ಹೇಳಿದಲಾಗಾಯಿತು ಸರಸಿಗೂ ಆ ಗೀಳು ಹಿಡಿದಿತ್ತು. ಹೌದು, ತನ್ನನ್ನು ಅಪ್ಪ ಕರಕೊಂಡು ಹೋದರೆ ಎಷ್ಟು ಚೆಂದ? ಇಲ್ಲಿ ರಾಧಿ ಇರುವಂತೆ, ಅಲ್ಲಿ ತನ್ನ ಮನೆಯಲ್ಲಿ ತಾನು. ಆದರೆ ಹಾಗಾದೀತೆ? ಅಪ್ಪ ಇಲ್ಲಿಗೆ

ಬುದ್ಧಿಯೇ ಹಾಗೆ. ಇಷ್ಟಕ್ಕೂ ಕಾಲಬುಡದಲ್ಲಿದ್ದರೇ ಮಕ್ಕಳಲ್ಲಿ ಪ್ರೀತಿ ಹುಟ್ಟುವುದು. ಅದಾಗದಂತೆ ಆ ತಾಟಕಿ ಮಾಡಿದ್ದಾಳಲ್ಲ? 'ಪಾಪ, ಸಣ್ಣ ಪ್ರಾಯದವನು ಬೇರೆ ಲಗ್ನ ಮಾಡಿಕೊಳ್ಳಲಿ, ಒಬ್ಬನೇ ಎಷ್ಟು ದಿನವೆಂದು ಇದ್ದಾನು?' ಅಂತ ಯೋಚಿಸಿ ನಮ್ಮ ಸಂಬಂಧದವಳನ್ನೇ ತಂದರೆ, ಅರೆದಳಲ್ಲ ತಲೆಗೆ ಖಾರ?' ಎಂದು. ಅಜ್ಜಿ ಹೇಳುತ್ತಿದ್ದ ಆ ಚಿಕ್ಕಮ್ಮ ಯಾರೋ? ತನಗಂತೂ ನೋಡಿದ ನೆನಪೇ ಇಲ್ಲ ದೇವರೇ, ಅವಳಾದರೂ ಅಪ್ಪನಲ್ಲಿ 'ನಮ್ಮ ಸರಸಿಯನ್ನು ಕರೆ ತನ್ನಿ ಎನ್ನುವಂತೆ ಮಾಡಪ್ಪ' ಸರಸಿ ಒಳಗೇ ಪ್ರಾರ್ಥಿಸುತ್ತಿದ್ದಾಗ ಕಾಫಿಗೆ ಕರೆ ಬಂತು.

ಅಡಿಗೆ ಮನೆ ಒಳಗೆ ಸಾಲಿನ ಕೊನೆಯಲ್ಲಿ ಕೂತು ದೋಸೆ ತಿನ್ನುತ್ತಿದ್ದಾಗ ದೊಡ್ಡ ಮಾವ ಹೇಳಿದರು. ಮಧ್ಯಾಹ್ನಕ್ಕೆ ಏನಾದರೊಂದು ಸಿಹಿ ಮಾಡು. ಸರಸಿಯ ಅಪ್ಪ ಬಂದಾನು' 'ಓ' ಸಣ್ಣತ್ತೆ ರಾಗ ಎಳೆದಾಗ ಸರಸಿ ಗಲಿಬಿಲಿಗೊಂಡಿದ್ದಳು. 'ದೇವರಿಗೆ ಇಷ್ಟು ಬೇಗ ತನ್ನ ಬೇಡಿಕೆ

ಕೇಳಿತೆ? ಅಥವಾ?' ಅವಳು ತರ್ಕಿಸುತ್ತಿದ್ದಾಗ ದೊಡ್ಡತ್ತೆ 'ಅದೇನಿಂದು ವಿಶೇಷ?' ಎನ್ನುವುದೂ, 'ವಿಶೇಷವೆ? ನಾವು ಪಾಲಾಗುವುದೆ ವಿಶೇಷ. ಅದಕ್ಕೆ ಅವನಿಗೆ ಹೇಳಿ ಕಳಿಸಿದ್ದೆ ಕಳೆದ ವಾರ' ಎಂದು ಮಾವ ಉತ್ತರಿಸಿದ್ದೂ ಕೇಳಿತು. 'ಓ, ಹಾಗಿದ್ದರೆ ಚಿಕ್ಕಮ್ಮ ಹೇಳಿ ಅಪ್ಪ ಬರುವುದಲ್ಲ' ಸರಸಿಗೆ ತುಸು ನಿರಾಸೆಯಾದರೂ, 'ಹೇಗೆ ಆಗಲಿ, ಅಪ್ಪ ಬರುವುದಂತೂ ನಿಜ ತಾನೆ?' ಎಂಬ ಸಮಾಧಾನವೂ ಜತೆಗೇ ಉಂಟಾಯಿತು. ಆ ಸಮಾಧಾನದಲ್ಲಿಯೆ ಎದ್ದು ಹೋಗಿ ತೊಂಡೆ ಚಪ್ಪರದಡಿಯಲ್ಲಿ ಕೈ ತೊಳೆವಾಗ, ಅನತಿ ದೂರದಲ್ಲಿ ಕಟ್ಟಿದ್ದ ಬೆಳ್ಳಿ ಕರು ಕಂಡಿತು. ಇವಳನ್ನು ನೋಡಿದೊಡನೆ 'ಅಂಬಾ' ಎಂದ ಕರುವಿನತ್ತ ಓಡಿ ಅದರ ಕೊರಳು ಕಟ್ಟಿಕೊಂಡು ಮುದ್ದು ಮಾಡುವಾಗ ಎಂದಿಗಿಂತ ಹೆಚ್ಚಾಗಿ ಕರುವಿನ ಮೇಲೆ ಪ್ರೀತಿ ಉಕ್ಕಿತು. ತನ್ನ ಹಾಗೇ ಬೆಳ್ಳಿ ಕರುವಿಗೂ ಅಮ್ಮನಿಲ್ಲ ಎಂಬ ಕಾರಣಕ್ಕೆ ಅದನ್ನು ಅತಿಯಾಗಿ ಹಚ್ಚಿಕೊಂಡಿದ್ದ ಅವಳು, ಇದೀಗ ಅದಕ್ಕೆ ಒಂದಿಷ್ಟು ಬೈಹುಲ್ಲು ಹಾಕುತ್ತ ಹೇಳಿದಳು. 'ಬೆಳ್ಳೀ ನನ್ನಪ್ಪ ಬರುತ್ತಾರಂತೆ ಮಧ್ಯಾಹ್ನ. ಆಮೇಲೆ ನಾನವರ ಜತೆಗೆ ಹೋಗುವುದೆ ಗೊತ್ತೇ ನಿನಗೆ?' ಹಾಗನ್ನುತ್ತಿದ್ದಾಗಲೆ ಮತ್ತೊಂದು ಯೋಚನೆ ಹುಟ್ಟಿತು, 'ಪಾಪ, ತನ್ನಂತೇ. ಬೆಳ್ಳಿಗೂ ಅಮ್ಮನಿಲ್ಲ. ಆದರೆ ಕೊಂಗಾಟ ಮಾಡಲು ತಾನಾದರೂ ಇದ್ದೆ. ಇನ್ನು ತಾನಿಲ್ಲಿಂದ ಹೋದ ಮೇಲೆ ಬೆಳ್ಳಿಗೆ ತೋಟದಿಂದ ಎಳೆ ಹುಲ್ಲು ಆಮೇಲೆ ಕೊಸರಿಗೆ ಬೈಹುಲ್ಲು ಮತ್ತೆ ಹಿಂಡಿಗಟ್ಟೆ ಎಲ್ಲ ಯಾರು ಕೊಟ್ಟಾರು? ಛೆ ಹೀಗಾಯಿತಲ್ಲ?' ಒಂದಿಷ್ಟು ವ್ಯಥೆಯಿಂದ ಚಿಂತಿಸುತ್ತಿದ್ದಾಗ ರಾಧಿ ಬಂದವಳು ಬೇಡಿದಳು. 'ಸರಸೀ, ನನಗೆ ಆ ಪದ್ಯ ಹೇಳಿಕೊಡುತ್ತೀಯ ಸ್ವಲ್ಪ ನಾಳೆಗೆ ಕಲಿತಾಗದಿದ್ದರೆ ನಮ್ಮ ಟೀಚರ್ ಪೆಟ್ಟೇ ಕೊಡುತ್ತೇನೆಂದಿದ್ದಾರೆ. ಓ, ನನಗೆ ನಿನ್ನ ಕ್ಲಾಸಿನಲ್ಲೇ ಸರೀ ಬಂದಿತ್ತು.' ವಾಸ್ತವವಾಗಿ ಅಲ್ಪಸ್ವಲ್ಪ ತಪ್ಪಿದ್ದರೂ ಬುರುಡೆ ಹೊಡೆದ ಸರಸಿ, 'ಬಾ, ಇಲ್ಲೀ ಕೂರೋಣ' ಎನ್ನುತ್ತ ಅಲ್ಲೆ ಜಗಲಿಯಲ್ಲಿ ಆಸೀನಳಾದಳು.

'ಹೂಂ, ಹೇಳು ನಿನಗೆ ಬರುವಷ್ಟು, ತಪ್ಪಾದರೆ ನಾ ತಿದ್ದುತ್ತೇನೆ.' ಸರಸಿ ಅಭಯ ನೀಡಿದ ಮೇಲೆ ರಾಧಿ ಆರಂಭಿಸಿದಳು. 'ಧರಣಿ ಮಂಡಲ' ಹೇಳು ಹೇಳುತ್ತ ಮಧ್ಯ ತಪ್ಪಿದಾಗ ತಿದ್ದಿದಳು ಸರಸಿ. 'ಹಾಗಲ್ಲವೇ, ಮುಂದೆ ಬಂದರೆ ಹಾಯಬೇಡಿ, ಹಿಂದೆ ಬಂದರೆ ಒದೆಯಬೇಡಿ, ಕಂದ ನಿಮ್ಮವಳೆಂದು ಕಾಣಿರಿ' ಅವಳು ಹಾಡುತ್ತಿದ್ದಂತೆ ರಾಧಿ ಪ್ರತಿಭಟಿಸಿದಳು. 'ನಿಮ್ಮವಳೆಂದು' ಅಲ್ಲ ಸರಸೀ, 'ನಿಮ್ಮವನೆಂದು' ಆಗಬೇಕು. 'ಉಹ್ಞುಂ, ಅದು ಹೆಣ್ಣು ಕರು, ಅದಕ್ಕೇ ಹಾಗನ್ನಬೇಕು. ಹೇಳು ನಿಮ್ಮವಳೆಂದು ಕಾಣಿರಿ' 'ನಾನು ಹೇಳುವುದಿಲ್ಲ', ರಾಧಿ ವಿರೋಧಿಸುತ್ತ ಎದ್ದವಳು ಹಟದಿಂದ ಪ್ರಶ್ನಿಸಿದಳು. 'ಅದು ಹೆಣ್ಣು ಕರುವೇ ಎಂದಾರು ಹೇಳಿದ್ದು ನಿನಗೆ? ನಮ್ಮ ಟೀಚರ್' 'ನಿನ್ನ ಟೀಚರೋ. ನೀನೋ, ನಾನು ಹೇಳುವುದು ಹಾಗೇ ಬೇಕಾದರೆ ಕಲಿತುಕೋ' ಸರಸಿ ತಾನೂ ಪಟ್ಟು ಬಿಡದೇ ವಾದಿಸಿದಾಗ ರಾಧಿಗೆ ತೀರ ರೇಗಿ 'ತಪ್ಪು ತಪ್ಪು ಹೇಳಿ ಕೊಟ್ಟರೆ ಯಾರಿಗೆ ಬೇಕು? ಸರಿಯಾಗಿ ಹೇಳುವುದಾದರೆ ಹೇಳಿಕೊಡು. ಇಲ್ಲವಾದರೆ ನನಗೆ ನಿನ್ನ ಪಾಠ ಬೇಡ' ಎಂದವಳೆ ಅಲ್ಲಿಂದ ಹೊರಟಳು. ಆದರೆ ಸರಸಿ ಸೋಲುವಳೇ? ಬೇಡವಾದರೆ ಬೇಡ. ನನಗೇನಂತೆ? ನೀನೇ ಅಲ್ಲವೆ ಹೇಳಿಕೊಡೆಂದು ಬಂದದ್ದು? ಇಷ್ಟಕ್ಕೂ ಅದು ಹೆಣ್ಣು ಕರುವೇ. ನೋಡಿಲ್ಲೀ ಬೆಳ್ಳಿಯೂ ಹೆಣ್ಣು ಕರುವಲ್ಲವೆ? ಮತ್ತೆ ನಾನೂ ಹೆಣ್ಣೇ' ಜೋರಿನಿಂದ ಹೇಳುತ್ತಿದ್ದ ಸರಸಿಯ ದನಿ ಕೊನೆಗಾಣುವಾಗ ನಡುಗಿದ್ದನ್ನೂ, ಮೋರೆ ದಪ್ಪ ಆಗಿದ್ದನ್ನೂ ನೋಡಿದ ರಾಧಿ ಅದೇಕೋ ತಾನೂ ಸಪ್ಪೆಯಾಗಿ ಬಿಟ್ಟಳು. ಎಂದೇ ಸರಸಿಯ ವಿಚಿತ್ರ ವಾದವನ್ನು ಒಪ್ಪಲಾಗದೇ ಇದ್ದರೂ, ವಿರೋಧಿಸಲೂ ಮನಸ್ಸಾಗದೇ 'ನಾನು ಹೋಗುತ್ತೇನೆ' ಎನ್ನುತ್ತ ಓಟ ಕಿತ್ತಳು. ಅವಳತ್ತ ಹೋದ ನಂತರವೂ ಸರಸಿ ಖಿನ್ನಳಾಗಿ ಅಲ್ಲಿಯೇ ಕೂತಳು. ಹಾಗೇ ಇನ್ನೆಷ್ಟು ಹೊತ್ತಿರುತ್ತಿದ್ದಳೋ? ಆಗ ಕೇಳಿತು ಅತ್ತೆಯ ಪ್ರಶ್ನೆ. 'ಸ



ರೀ ದೇವರಿಗೆ ಹೂ ಕೊಯ್ದೆಯಾ?' 'ಹೂಂ, ಇಲ್ಲತ್ತೆ, ಈಗ ಕೊಯ್ಯುತ್ತೇನೆ' ತಟ್ಟನೆ ಉತ್ತರಿಸಿ, ಒಳಗೋಡಿ ಹೂ ಬುಟ್ಟಿ ಹಿಡಿದು ಹೂತೋಟಕ್ಕೆ ಓಡಿದಳು ಸರಸಿ. ತೋಟದಲ್ಲಿ ರಾಶಿ ರಾಶಿ ನಂದಿಬಟ್ಟಲು, ದಾಸವಾಳ, ಅಬ್ಬಲಿಗೆ, ಗೋರಟೆ ಎಲ್ಲ ಅರಳಿದ್ದವು. ಹೂ ಕಂಡೊಡನೇ ಎಂದಿನಂತೇ ಅಜ್ಜಿ ಹೇಳುತ್ತಿದ್ದುದು ನೆನಪಾಯಿತು. 'ನಿನ್ನಮ್ಮನಿಗೆ ಹೂವಿನಮೊಂದು ಮರುಳು. ಎಷ್ಟೆಂದರೆ ಕೊನೆಗೆ ಕೆಂಪು ದಾಸವಾಳವಾದರೂ ಆದೀತು. ಮುಡಿದೇ ಸಿದ್ಧ' ಎನ್ನುತ್ತಿದ್ದರಲ್ಲವೆ? ರಾಶಿ ರಾಶಿ ಹೂ ಮುಡಿಯುತ್ತಿದ್ದ, ಅರಸಿನ ಬಿಳಿ ಮೈ ಬಣ್ಣವಿದ್ದ ತನ್ನಮ್ಮ ತಾನು ಹಿಳ್ಳೆಯಾಗಿದ್ದಾಗಲೆ ಸತ್ತಳಂತೆ. ಆಮೇಲೆ ಅಜ್ಜಿಯೇ ತನ್ನನ್ನು ಬೆಳೆಸಿದ್ದಂತೆ. ತನಗೆ ಅಮ್ಮ ಮೊದಲೇ ಇಲ್ಲ, ಅಜ್ಜಿಯೂ ಈಗ ಇಲ್ಲ. ಒಂದು ವೇಳೆ ಅವಳಿದ್ದಿದ್ದರೆ 'ಸರಸಿ ಇಲ್ಲಿಯೇ ಇರಲಿ ಮಕ್ಕಳೇ' ಎನ್ನುತ್ತಿದ್ದಳೋ ಏನೋ. ಏನೋ ಎಂತದ್ದು, ಖಂಡಿತ ಹೇಳುತ್ತಿದ್ದಳು. ಆದರೆ ಅವಳೇ ಇಲ್ಲವಲ್ಲ? ಅಳಿದ ಅಜ್ಜಿಯ ನೆನಪಿನಿಂದ ತುಸು ಖಿನ್ನಳಾಗುತ್ತಲೆ ಅವಳು ಹೂ ಕೊಯ್ದು ಮುಗಿಸಿ ಒಳಗೆ ಹೋದಳು. ಆಗ ಕೇಳಿತು ದಣಪೆ ಸದ್ದು. 'ಹೋ, ನನ್ನ ಸ್ನಾನವೇ ಆಗಿಲ್ಲ, ಆಗಲೇ ಅಪ್ಪ ಬಂದರೋ ಹೇಗೆ?' ಅವಳು ತುಸು ಗಲಿಬಿಲಿಯಿಂದಲೆ ಇಣಿಕಿದರೆ ಬಂದದ್ದು ಅಪ್ಪನೇ 'ಏ ಸರಸೀ, ಇಲ್ಲಿ ನೋಡು ಯಾರು ಬಂದದ್ದೆಂದು?' ದೊಡ್ಡತ್ತೆ ಕೂಗಿದರಾದರೂ ಅವಳಾಗಲೇ ಸ್ನಾನಕ್ಕೆ ಓಡಿ ಆಗಿತ್ತು.

ಮಧ್ಯಾಹ್ನ ಒಂದು ತಾಸು ಕಳೆದಾಗ ಗಂಡಸರೆಲ್ಲರ ಊಟವೂ ಆಗಿ ಒಳಗೆ ಹೆಂಗಸರ ಪಂಕ್ತಿಗೆ ಆರಂಭವಾಗಿತ್ತು. ವಿಶೇಷವೆಂದರೆ ಮಾಲತ್ತಿಗೆ, ರಾಧಿ ಸರಸು ಕೂಡ ಈ ಪಂಕ್ತಿಗೇ ಕೂತಿದ್ದುದು. ಅನ್ನ, ಸಾರು, ಸಾಂಬಾರುಗಳಾಗಿ ಅವಲಕ್ಕಿ ಪಾಯಸ ಎದುರಾದಾಗ ಮಾತ್ರ ರಾಧಿ ಸಿಡುಕಿದಳು. 'ಓ, ಈ ಪಾಯಸವೇ? ಅಮ್ಮಾ ಇದನ್ನೇಕೆ ಮಾಡಿದ್ದು? ಶ್ಯಾವಿಗೆ ಕೀರು ಮಾಡಬೇಕಿತ್ತು ಇದು ನನಗೆ ಇಷ್ಟವೇ ಇಲ್ಲವೆಂದು ನಿನಗೆ ಗೊತ್ತಿಲ್ಲವೆ?' ಆ ಮಾತಿಗೆ ಅವಳಮ್ಮ ಏನು ಹೇಳಬೇಕಿದ್ದರೂ ನಡುವೇ ಮಾಲತ್ತಿಗೆ ರಾಗವೆಳೆದಳು. 'ನನಗೆಂತ ಮಾಡಿದ್ದೇ ಅಲ್ಲ ಅದು. ಸರಸಿಗೆ ಅವಲಕ್ಕಿ ಪಾಯಸ ಇಷ್ಟವೆಂದು ಮಾಡಿದ್ದು. ತಿಳಿಯಿತೆ?' ಅಷ್ಟು ಕೇಳಿದೊಡನೆ ರಾಧಿಗೆ ಕೋಪ ನೆತ್ತಿಗೇರಿತು. 'ಹೌದೇ ಅಮ್ಮ? ಹಾಗಿದ್ದರೆ ನನಗೆ ಬೇಡವೇ ಬೇಡ ತಿಂದುಕೊಳ್ಳಲಿ ಅವಳೇ' ಅವಳು ದನಿ ಏರಿಸಿ ಕಿರುಚಿದಾಗ ದೊಡ್ಡತ್ತೆ ಸ್ವಾಂತನದ ದನಿ ಎತ್ತಿದರು. 'ನೋಡು ರಾಧೀ, ಹಾಗೆಲ್ಲ ಮಾಡಬಾರದು. ಸರಸಿ ಇನ್ನು ಇಲ್ಲಿರುವುದಿಲ್ಲ. ಅವಳ ಮನೆಗೇ ಹೋಗುತ್ತಾಳೆ. ಅದಕ್ಕೇ ಆ ಪಾಯಸ ಮಾಡಿದ್ದು ನೀನು ಜಾಣೆಯಂತೆ ಸೇರಿದಷ್ಟು ತಿನ್ನು ನೋಡುವ' ಈಗ ರಾಧಿ ಬೆರಗಾಗಿ, ಸಿಟ್ಟೆಲ್ಲ ಇಳಿದೇ ಹೋಗಿ ಕೇಳಿದಳು. 'ನಿಜವಾಗಿಯೂ?' 'ಮತ್ತೆ? ನಾನೆಂತಕ್ಕೆ ಸುಳ್ಳಾಡಬೇಕು? ಇಷ್ಟಕ್ಕೂ ಅವಳಪ್ಪ ಬಂದದ್ದೇಕೆ ಮತ್ತೆ?' ದೊಡ್ಡತ್ತೆ ಹೇಳಿದಾಗ ರಾಧಿ, ಇನ್ನೂ ನಂಬದೆ 'ಹೌದೇ ಸರಸೀ? ಹಾಗಿದ್ದರೆ ನೀನು ಇನ್ನು ಎಲ್ಲಿ ಶಾಲೆಗೆ ಹೋಗುವುದು?' ಎಂದಳು. ಆ ಮಾತಿಗೆ ಸರಸಿ ಉತ್ತರಿಸಲು ಬಾಯ್ತೆರೆಯಬೇಕಿದ್ದರೇ ಹೊರಗಿಂದ ದೊಡ್ಡ ಮಾವನ ಏರಿದ ದನಿ ಕೇಳಿತು. 'ಯಾಕೆ ಭಾವಾ ಹೀಗೆಲ್ಲ ಮಾತಾಡುತ್ತೀರಿ? ನಾವು ಅಂತಹ ತಪ್ಪು ಏನು ಹೇಳಿದೆವೀಗ?'

ಮಾವನ ಆ ದನಿ ಕೇಳುತ್ತಲೂ ಸರಸಿಗೆ ಹೆದ

ರಿಕೆ ಎನ್ನಿಸಿತು. ಏಕೆಂದರೆ ದೊಡ್ಡ ಮಾವ ದನಿ ಏರಿಸುತ್ತಿದ್ದುದೇ ಕಡಿಮೆ. ಹೀಗಾಗಿಯೂ, ಆ ಮಾತು ತನಗೇ ಸಂಬಂಧಿಸಿದ್ದು ಎಂದು ಹೇಗೋ ಅವಳ ಅರಿವಿಗೆ ಬಂದದ್ದರಿಂದಲೂ ಹಾಗೇ ಊಟ ಬಿಟ್ಟೆದ್ದು ಓಡಿ ಬಂದು ಬಾಗಿಲ ಮರೆಗೆ ನಿಂತಳು. ಆ ವೇಳೆಗೆ ದೊಡ್ಡ ಮಾವ ಮತ್ತೆ ಹೇಳಿದರು. ಲಲಿತೆ ಸತ್ತೊಡನೆ ಆ ಹೊಡಿಬಾಲೆಯನ್ನು ನಮ್ಮ ಕೈಗೊಪ್ಪಿಸಿ ಹೋದವರು, ನಂತರ ಇಷ್ಟು ವರ್ಷಗಳಲ್ಲೂ ಆ ಮಗುವಿನ ಬಗ್ಗೆ ಯೋಚಿಸಲಿಲ್ಲ. ಆದರೆ ನೀವು ಹಾಗೆ ಮಾಡಿದಿರಿ ಎಂದು ನಮಗೆ ಬಿಡಲಿಕ್ಕಾದೀತೆ? ಹಾಗೆಂದೇ ಸಾಕಿ, ಸಲಹಿ ಇಷ್ಟು ದೊಡ್ಡವಳನ್ನಾಗಿ ಮಾಡಿದೆವು. ಆದರೆ ಇನ್ನು ಮಾತ್ರ ನಮ್ಮಿಂದಾಗದು. ಏಕೆಂದರೆ ನಾವು ಪಾಲಾಗುತ್ತಿದ್ದೇವೆ. ನಮ್ಮ ತಾಪತ್ರಯಗಳೂ ಬೇಕಾದಷ್ಟಿವೆ. ಇಷ್ಟಕ್ಕೂ ಅವಳೇನೂ ಕೈ ಬಾಯಿಗೆ ಹೋಗದ ಹಸುಗೂಸಲ್ಲವಲ್ಲ ಈಗ?' 'ಅದೇ ನಾನೂ ಹೇಳುವುದು' ಸರಸಿ ಅಪ್ಪನ ಏರಿದ ದನಿಯನ್ನೇ ಕಾತರದಿಂದ ಆಲಿಸುತ್ತಿದ್ದಾಗ ಆತ ಮತ್ತೆ ಹೇಳಿದರು. 'ಅವಳೇನೂ ಚಿಕ್ಕವಳಲ್ಲ, ಇನ್ನೊಂದಾರೇಳು ವರ್ಷಗಳಲ್ಲಿ ಲಗ್ನಕ್ಕಾಗುತ್ತಾಳೆ. ಆಗ ನಿಮಗೆಲ್ಲ ಕಷ್ಟವೆಂದೇ ನೀವು ಹೀಗನ್ನುತ್ತಿದ್ದೀರಿ, ನನಗೂ ಅದು ಗೊತ್ತು. ಎಂದೇ ನಾನೂ ಯೋಚಿಸದೇ ಮೂರ್ಖನಂತೆ ಅವಳನ್ನು ಕರೆದೊಯ್ಯಲಾರೆ. ಹಾಗೆ ನಿಂತ ಕಾಲ ಮೇಲೆ ತೀರ್ಮಾನಿಸಲು ಇದೇನೂ ಮಕ್ಕಳಾಟವಲ್ಲ' 'ಮಕ್ಕಳಾಟ?' ಪುಟ್ಟು ಮಾವ ಈಗ ದನಿ ಎತ್ತಿದರು. 'ಈವರೆಗೂ ನೀವಾಡಿದ್ದು ಅದೇ ಭಾವ. ಈ ಶಿಶುವನ್ನು ಹೇಗೆ ಸಾಕಲಿ? ತುಸು ದೊಡ್ಡದಾಗುವ ತನಕ ಇಲ್ಲಿರಲಿ ಎಂದು ಇಲ್ಲಿ ಬಿಟ್ಟು ಹೋದವರು, ನಂತರ ಸುದ್ದಿ ಕೂಡ ಕೊಡದೇ ಮತ್ತೆ ಲಗ್ನವಾದಿರಿ. ಆಗಲಿ, ಚಿಂತೆ ಇಲ್ಲ, ಇನ್ನೂ ಸಣ್ಣ ಪ್ರಾಯ ಭಾವನಿಗೆ ಎಂದುಕೊಂಡೆವು ನಾವು. ಅಷ್ಟೇಯೇ ಇನ್ನಾದರೂ ಸರಸಿ ತನ್ನ ಮನೆಗೇ ಹೋದಾಳು ಎಂದೂ ಆಸೆ ಪಟ್ಟೆವು. ಆದರೆ ಭಾವ, ನೀವು ಮಾಡಿದ್ದೇನು? ಅವಳ ಬಗ್ಗೆ ನಿಮ್ಮ ಅನಾಸಕ್ತಿ ಎಷ್ಟೆಂದರೆ ವರ್ಷಕ್ಕೊಮ್ಮೆ ಕೂಡ ಅವಳನ್ನು ನೋಡಲೂ ಬರಬೇಕೆನ್ನಿಸುವುದಿಲ್ಲ ನಿಮಗೆ, ಅಲ್ಲವೆ?' ಪುಟ್ಟು ಮಾವ ಅಷ್ಟೆಂದು ಮತ್ತೆ ಮುಂದುವರೆದರು.

'ಅದಕ್ಕೇ ಭಾವ ನಾವೀ ನಿರ್ಣಯಕ್ಕೆ ಬಂದದ್ದು ನಿಮ್ಮ ಜವಾಬ್ದಾರಿ ಏನೆಂದು ನಿಮಗೆ ಗೊತ್ತಿಲ್ಲವಾದರೆ ನಾವಾದರೂ ಹೇಳಬೇಕಲ್ಲ?' ಅವರ ದನಿ ಅಡಗಿದ ಮೇಲೂ ಅಪ್ಪ ಮೌನವಾಗಿಯೇ ಇದ್ದಾಗ ಸರಸಿಯ ತಳಮಳ ಹೆಚ್ಚಿತು. ಏನಂದಾರು ಅಪ್ಪ? ತನ್ನನ್ನು ಕರೆದೊಯ್ದಾರೆ? ಯೋಚಿಸುತ್ತಿದ್ದಾಗ ತಟ್ಟನೆ ಶಂಕರಿ ದೊಡ್ಡಮ್ಮನ ನೆನಪುಕ್ಕಿತು. ಕಳೆದ ತಿಂಗಳಲ್ಲವೆ ಅವರು ಬಂದದ್ದು? ಕಾವೇರಿ ದೊಡ್ಡಮ್ಮ, ಸರೋಜ ಚಿಕ್ಕಿ ತನಗೆ ಇಷ್ಟವೇ. ಆದರೆ ಈ ಶಂಕರಿ ದೊಡ್ಡಮ್ಮನನ್ನು ಕಂಡರೇ ತನಗಾಗದು ಇಲ್ಲವಾದರೆ ಅವರಿಗೇಕೆ ಅದೆಲ್ಲ? 'ಏನೇ ಸರಸಿ? ನಿನ್ನಪ್ಪ ಬಂದಿದ್ದನೋ?' ಎಂದೋ 'ಈಗ ನಿನ್ನ ಚಿಕ್ಕಮ್ಮನಿಗೆ ಎಷ್ಟು ಮಕ್ಕಳಂತೆ? ಎಂದೋ ಕೇಳಿ ಒಂದು ರೀತಿಯಾಗಿ ನಗದೇ ಇದ್ದರೆ ಅವರಿಗೆ ಸಮಾಧಾನವೇ ಇಲ್ಲ. ಅಂತಹ ದೊಡ್ಡಮ್ಮ ಮೊನ್ನೆ ಬಂದಿದ್ದಾಗ ದೊಡ್ಡತ್ತೆಯಲ್ಲಿ 'ಏನು ಗೌರೀ? ಪಾಲಿನ ಗಲಾಟೆ ಜೋರಂತೆ? ಇನ್ನು ನೀವೆಲ್ಲ ಪಾಲಾಗಿ ಬೇರೆ ಬೇರೆ ಇರುವವರು ಹಾಗಿದ್ದರೆ? ಅಲ್ಲ, ಅದೇನೋ ಸಮವೇ. ಯಾವಾಗಲೂ ಎಲ್ಲರೂ ಒಟ್ಟಿಗೇ ಇರಲಿಕ್ಕಾದೀತೇ? ವಿಷಯ ಅದಲ್ಲ, ಸರಸಿಯನ್ನಾರು ನೋಡಿಕೊಳ್ಳುವಂದಾಜು?' ಎಂದು ರಾಗ ಎಳೆದಿದ್ದರಲ್ಲವೆ? ಅದಕ್ಕೆ ದೊಡ್ಡತ್ತೆಯೋ? ಅವರೂ ಸುಮ್ಮನೇ ಬಿಟ್ಟಿರಲಿಲ್ಲ. ತಟ್ಟಂತ ಹೇಳಿಯೇ ಬಿಟ್ಟಿದ್ದರು. 'ಅಂದಾಜೇನೂ ಮಾಡಿಲ್ಲ ಇನ್ನೂ. ಆದರೆ ದಾರಿಯಲ್ಲಂತೂ ಬಿಡುವುದಿಲ್ಲ ಖಂಡಿತವೆ' ದೊಡ್ಡಮ್ಮನಿಗೆ ಸಿಟ್ಟು ಬಂದಿರಬೇಕು ಆ ಮಾತು ಕೇಳಿ. ಎಂದೇ ತಕ್ಷಣ 'ಅಲ್ಲ ನನಗೆ ಅಗತ್ಯವಿರಲಿಲ್ಲ ಎನ್ನುವ. ಆದರೂ ತಂಗಿ ಮಗಳಲ್ಲವೆ ಎಂದು ಕೇಳಿ ಬಿಟ್ಟೆ. ಇಷ್ಟಕ್ಕೂ ನಮ್ಮಂತೇ ಅವಳೂ ಇದ್ದಿದ್ದರೆ ಹೀಗೆ ಹೇಳಲಿಕ್ಕೇ ಇರುತ್ತಿರಲಿಲ್ಲ' ಎಂದವರು ಜತೆಗೇ ' ಆ ಭಾವ

ನಾದರೂ ಎಂಥವನಪ್ಪ? ಹಡೆದ ಮಗಳ ಮೇಲೆ ಒಂಚೂರೂ ಪ್ರೀತಿ ಬೇಡವೇ?' ಎಂದೂ ಕೇಳಿ ಒಂದು ತರಹ ನಕ್ಕಿರಲಿಲ್ಲವೆ? ಸರಸಿಗೆ ಅದನ್ನು ನೆನೆಸಿ ಮತ್ತಷ್ಟು ಕಳವಳವಾಯಿತು. 'ದೇವರೆ, ಅಪ್ಪ ನನ್ನನ್ನು ಕರೆದೊಯ್ಯಲಿ, ಇಲ್ಲವಾದರೆ ಮತ್ತೆ ಆ ದೊಡ್ಡಮ್ಮ ಹಂಗಿಸಿಯಾರು ಖಂಡಿತವಾಗಿ,' ಅವಳು ದೀನಳಾಗಿ ಒಳಗೇ ಪ್ರಾರ್ಥಿಸುತ್ತಿದ್ದಾಗ ಕೇಳಿತು ಅವಳಪ್ಪನ ಸ್ವರ.

'ಸರಿ, ನಾನೇನೋ ಅವಳನ್ನು ಇದ್ದಂತೇ ಕರಕೊಂಡು ಹೋದೇನೆಂದೇ ಇಟ್ಟುಕೊಳ್ಳೋಣ. ಆದರೆ ನಾಳೆ ಬರುತ್ತಾನಲ್ಲ? ಅವಳ ಗಂಡನಾಗುವವ? ಅವನೂ ಹೀಗೆ ಬಿಚ್ಚೋಲೆ ಗೌರಮ್ಮನಂತಿರುವಾಗಲೇ ಕರೆದೊಯ್ಯಾನೇ?' 'ಅಂದರೆ? ಏನು ವಿಚಾರ ಭಾವ?' ಸಣ್ಣ ಮಾವ ಕೇಳಿದಾಗ ಅಪ್ಪ ವ್ಯಂಗ್ಯವಾಗಿ ಹೇಳಿದರು. 'ಅಷ್ಟೂ ಅರ್ಥವಾಗುವುದಿಲ್ಲವೆ? ಅಥವಾ ಹಾಗೆ ನಟಿಸುತ್ತೀರೊ ಇರಲಿ, ನಾನೇ ಹೇಳಿಬಿಡುತ್ತೇನೆ. ಲಲಿತೆಯ ಮೈಯಲ್ಲಿ ಅಷ್ಟು ಬಂಗಾರ ಇತ್ತಲ್ಲ, ಅದೇನಾಯಿತು? ಅದೆಲ್ಲವನ್ನು ಕೊಟ್ಟರೆ' ಅವರಿನ್ನೂ ಹೇಳಿ ಮುಗಿಸಬೇಕಿದ್ದರೆ ಪುಟ್ಟು ಮಾವ ಕೆರಳಿ ಅಬ್ಬರಿಸಿದರು. 'ಓಹೋ? ಹೀಗೋ? ಮನುಷ್ಯ ಇಷ್ಟು ಕೆಳಮಟ್ಟಕ್ಕಿಳಿಯಬಾರದು. ಇಷ್ಟಕ್ಕೂ ಅದರಲ್ಲಿ ನಾವು ಹಾಕಿದ ಚಿನ್ನವೇ ಜಾಸ್ತಿ ಇರುವುದು' 'ಓಹೋ? ಹಾಗೋ' ಅಪ್ಪ ಇನ್ನಷ್ಟು ಸ್ವರವೇರಿಸಿ ಹೇಳಿದರು. 'ತಾಯಿಯ ಚಿನ್ನವೇ ಮಗಳಿಗಿಲ್ಲವೆಂದು ನಿಮ್ಮಂದಾಜಾದರೆ, ಇಗೋ ನಾನು ಹೊರಟೆ. ಆ ಚಿನ್ನವೂ, ಸರಸಿಯೂ ನಿಮ್ಮಲ್ಲೇ ಇರಲಿ' ಹೇಳುತ್ತಲೇ ಅವರೆದ್ದು ಅಂಗಿಗೆ ಕೈ ಹಾಕಿದಾಗ, ಈವರೆಗೆ ಸುಮ್ಮನೇ ಇದ್ದ ದೊಡ್ಡತ್ತೆ ಮುಂದಾಗಿ ಅನುನಯದಿಂದ ಕೇಳಿಕೊಂಡರು. 'ರೇಗಬೇಡಿ ಅಣ್ಣಾ ಎಷ್ಟೆಂದರೂ ಇದವಳಿಗೆ ಅಜ್ಜನ ಮನೆಯಲ್ಲದೆ ಸ್ವಂತ ಮನೆ ಆದೀತೆ. ಆಗಲು ಸಾಧ್ಯವೇ ಅದಕ್ಕೇ ಕರೆದೊಯ್ಯಿರಿ. ಇರಲಿ, ನಿಮ್ಮ ಆ ಮಕ್ಕಳ ಜತೆಗೆ





ಆಡಿಕೊಂಡು. ಮತ್ತೆ ಚಿನ್ನದ ಬಗ್ಗೆ ನೀವೇನೂ ಚಿಂತಿಸಬೇಡಿ. ಸರಸಿಯ ಲಗ್ನಕ್ಕಾಗುವಾಗ' ಆಕೆ ಹೇಳುತ್ತಿದ್ದಂತೇ ಅಪ್ಪ ಖಚಿತ ದನಿಯಲ್ಲಿ ಘೋಷಿಸಿದರು. 'ನನ್ನ ಮಕ್ಕಳಿಗೆ ಆಟವಾಡಲು ಇವಳೇ ಆಗಬೇಕೆಂದಿಲ್ಲ. ಹಾಗೇ ಮಗಳಾಗಿ ನನಗೆ ಇವಳೊಬ್ಬಳೇ ಇರುವುದೂ ಅಲ್ಲ. ಏನೋ ಇರುವ ಆ ಒಬ್ಬಳ ಜತೆಗೆ ಇವಳೂ ಇರಲಿ ಎಂದು ಬಂದರೆ, ಇಲ್ಲಿ ಅವಳ ಹಕ್ಕಿನದನ್ನೂ ಕೊಡುವಂದಾಜಿಲ್ಲ ಅಲ್ಲವೆ? ಸರಿ, ಇಂದಿಗೆ ನನ್ನ ನಿಮ್ಮ ಸಂಬಂಧ ಕಡಿಯಿತು' ಆತ ಹೇಳುತ್ತ ಚಾವಡಿ ಇಳಿಯತೊಡಗಿದಾಗ ಸರಸು ದಿಗ್ಭ್ರಾಂತಳಾಗಿ ಬಿಕ್ಕಿದರೆ, ದೊಡ್ಡ ಮಾವ 'ಇಲ್ಲಿ ಕೇಳಿ ಭಾವ ಸ್ವಲ್ಪ, ಸಮಾಧಾನದಿಂದ ಮಾತಾಡೋಣ, ಬನ್ನಿ' ಎನ್ನುತ್ತ ಎದ್ದರು. ಆದರೆ ಆ ವೇಳೆಗಾಗಲೇ ಅಪ್ಪ ಅಂಗಳಕ್ಕಿಳಿದ ದಾಪುಗಾಲಿಕ್ಕತೊಡಗಿದ್ದರು. ಅವರು ತನ್ನನ್ನು ಬಿಟ್ಟು ಹೋಗಿಯೇ ಬಿಡುತ್ತಾರೆಂಬ ಅಂಶ, ಆ ದುಃಖದೆಡೆಯಲ್ಲೂ ಹೊಳೆದಾಗ ಬಿಕ್ಕುತ್ತಿದ್ದ ಸರಸಿ ತಟ್ಟನೆದ್ದು ಓಡಿ ಹೋಗಿ ಅವರ ಕೈ ಹಿಡಿದು ಗೋಗರೆದಳು. 'ಅಪ್ಪ ನಾನೂ ಬರುತ್ತೇನಪ್ಪ, ನನ್ನನ್ನೂ ಕರಕೊಂಡು ಹೋಗಪ್ಪ' ಬೇಡಿಕೆಯೇ ಸಾಕಾರವಾದಂತಿದ್ದ ಅವಳನ್ನತ್ತ ನಿರ್ದಾಕ್ಷಿಣ್ಯವಾಗಿ ನೂಕಿ, ದಣಪೆ ಬಾಗಿಲು ತೆರೆದು ಅವರು ಹೊರಟೇ ಹೋದರು.

ಅಪ್ಪ ತನ್ನನ್ನು ತಳ್ಳಿ ಬಿಟ್ಟು ಹೋದೊಡನೆ ಮೇರೆ ಮೀರಿದ ನೋವು ವ್ಯಥೆಗಳಿಂದ ಹುಚ್ಚಿಯಂತಾದ ಸರಸಿ, ಜೋರಾಗಿ ಕ್ರಂದಿಸುತ್ತ ಮರಳಿದಾಗ ಅಲ್ಲೆ ಬದಿಯಲ್ಲಿ ಕಟ್ಟಿದ್ದ ಬೆಳ್ಳಿ ಕರು ಕಾಣಿಸಿತು. 'ಬೆಳ್ಳಿ, ನನ್ನಪ್ಪ ನನ್ನ ಬಿಟ್ಟೇ ಹೋದಾ' ಎನ್ನುತ್ತ ಅದರ ಬಳಿ ಕುಸಿದು ಮತ್ತೆ ಮತ್ತೆ ಅಳುವಾಗ ತುಸುವೆ ದೂರದಿ ಕೋಣೆಯಿಂದ ರಾಧಿ ಪದ್ಯ ಗಟ್ಟಿ ಮಾಡುತ್ತಿದ್ದುದು ಕೇಳಿಸಿತು. 'ಮುಂದೆ ಬಂದರೆ ಹಾಯಬೇಡಿ, ಹಿಂದೆ ಬಂದರೆ ಒದೆಯಬೇಡಿ ಕಂದ ನಿಮ್ಮವನೆಂದು ಕಾಣಿರಿ, ತಬ್ಬಲಿಯು ನೀ ಕರುವನು.....'

●

## ಆಶ್ಚರ್ಯಜನಕ ಸತ್ಯ

ಎಲೆ ತಿನ್ನುವ ಇರುವೆ ತನ್ನ ಆಕಾರದ ಗಾತ್ರಕ್ಕಿಂತ ಎಷ್ಟು ವನಸ್ಪತಿಯನ್ನು ಹೊರಬಲ್ಲದೆಂದರೆ ಒಂದು ಚಿಕ್ಕ ಹುಡುಗಿ ಹತ್ತು ಟನ್ ಭಾರದ ಲಾರಿಯನ್ನು ತನ್ನ ತಲೆಯ ಮೇಲೆ ಹೊತ್ತಷ್ಟು!

ಆನೆ ದಿನವಿಡಿ ಸುಮಾರು 500 ಕಿ. ಗ್ರಾಂ. ನಷ್ಟು ಭೋಜನವನ್ನು ಮಾಡುತ್ತದೆ. 90 ಲೀಟರ್ ನೀರು ಕುಡಿಯುತ್ತದೆ.

ಹೆಣ್ಣು ಸೊಳ್ಳೆ ನಿಮ್ಮನ್ನು ಒಮ್ಮೆ ಕಚ್ಚಿದಾಗ ತನ್ನ ಶರೀರದ ತೂಕದಷ್ಟು ರಕ್ತವನ್ನು ಹೀರಿ ಹಾರಿ ಹೋಗುತ್ತದೆ.

**ಟೇಕಲ್ ಗೋಪಾಲಕೃಷ್ಣ**



ಕೆಲವು ವರ್ಷಗಳ ಹಿಂದಿನ ಮಾತು. ಪೇಟೆಯಿಂದ ದೂರವಿರುವ ಒಂದು ಹಳ್ಳಿ. ಅನಿರೀಕ್ಷಿತವಾಗಿ ಮನೆಗೆ ಅತಿಥಿಗಳು ಬಂದಲ್ಲಿ, ಆಪದ್ಬಾಂಧವನಾಗಿ ಸಹಾಯಕ್ಕೆ ಬರುವುದು ನಾವು ಮಾಡಿ ಕೂಡಿಟ್ಟ ಹಪ್ಪಳ, ಸಂಡಿಗೆ, ಶ್ಯಾವಿಗೆ ಇತ್ಯಾದಿಗಳೇ.

ಹೀಗೊಂದು ಬೇಸಗೆ ಮಧ್ಯಾಹ್ನ. ಹಪ್ಪಳ ಒತ್ತಲು ಅಂಗಳದಲ್ಲಿ ಕೂತಿದ್ದೆ. ಹೊತ್ತೇರಿದಂತೆ ತಲೆಯ ಮೇಲೆ ಬಿಸಿಲೂ ಬಿದ್ದು, ತಲೆ ನೋಯುತ್ತಿತ್ತು. ಒಳಗೆ ಅರ್ಧಂಬರ್ಧವಾಗಿ ಉಳಿದ ಕೆಲಸಗಳನ್ನು ಯೋಚಿಸುತ್ತ ಮನಸ್ಸು ರೋಸಿಹೋಗಿತ್ತು.

'ಅಮ್ಮಾ ... ಒಂದಿಷ್ಟು ಗಂಜಿ ತಿಳಿ ಕೊಡಿ ತಾಯೀ ....' ಎಂಬ ಕರೆ ಕೇಳಿದಾಗ, ತಲೆ ಎತ್ತದೇ ರೇಗಿದೆ. 'ನಿಮಗೆ ದುಡಿದು ತಿನ್ನಲೇನು ಧಾಡಿ? ನಾನೇನು ಸುಮ್ಮನೇ ಕೂತಿದ್ದೇನೆಯೇ? ಮಕ್ಕಳು ಶಾಲೆಯಿಂದ ಬರುವ ಹೊತ್ತಾಯ್ತು. ಅಡಿಗೆ ಇನ್ನೂ ಆಗಿಲ್ಲ ...' ಇನ್ನೂ ಏನೇನು ಹೇಳುತ್ತಿದ್ದೆನೋ ..... 'ಅನ್ನ ಬೇಡಮ್ಮ. ಒಂದಿಷ್ಟು ಬಿಸೀ ಗಂಜಿ ತಿಳಿ ಕೊಡಿ. ನಾಲ್ಕು ದಿನಗಳಿಂದ ಜ್ವರ' ಎಂಬ ದೀನ ಸ್ವರಕ್ಕೆ ತಲೆ ಎತ್ತಿದೆ.

ಹೌದು. ಆಗಾಗ್ಗೆ ಬರುವ ಭಿಕ್ಷುಕನೇ. ಅದು ಬೇಕು ಇದು ಬೇಕು ಎಂದು ಕಾಡದೇ ಕೊಟ್ಟುದನ್ನು ತೆಗೆದುಕೊಂಡು ಹೋಗುತ್ತಿದ್ದವನೇ. ಕುಳಿತುಕೊಳ್ಳಲಾಗದೇ ಅಲ್ಲೇ ಇದ್ದ ಪಾರಿಜಾತ ಮರಕ್ಕೆ ಕಣ್ಣು ಮುಚ್ಚಿ ಒರಗಿದ್ದಾನೆ. ತಟ್ಟನೇ ಎದ್ದು ನಿಂಬೆ ಉಪ್ಪಿನಕಾಯಿಯೊಂದಿಗೆ ಬಿಸೀ ಗಂಜಿಯನ್ನೊಯ್ದು ಅವನ ತಟ್ಟೆಗೆ ಸುರಿದೆ. ವರ್ಷದಿಂದ ಅನ್ನ ಕಾಣದವನಂತೆ ಜ್ವರದ ತಾಪದಲ್ಲಿ ನಡುಗುವ ಕೈಗಳಿಂದ ಉಂಡದ್ದನ್ನು ಕಾಣುವಾಗ ಮನಸ್ಸು ಚುರ್ ಎಂದಿತು. 'ಇನ್ನೂ ಬೇಕೇನು?' ಎಂದು ಕೇಳಿದಾಗ, 'ಬೇಡಮ್ಮ ಇವೇ ಹೆಚ್ಚಾಯ್ತು. ನಾಲ್ಕು ದಿನಗಳಿಂದ ಜ್ವರ, ಇನ್ನೂ ಬಿಟ್ಟಿಲ್ಲ. ನಿಮ್ಮ ಈ ಗಂಜಿಯಿಂದ ಅಮೃತ ಸಿಕ್ಕಂತಾಯ್ತು. ತುಂಬ ಉಪಕಾರವಾಯ್ತಮ್ಮ' ಎನ್ನುತ್ತ ಮೆಲ್ಲನೇ ಎದ್ದು ಹೋದ.

ಬಡತನ. ಜತೆಗೆ ವೃದ್ಧಾಪ್ಯ ಕಾಡಿದರೆ ಮನುಷ್ಯ ಎಷ್ಟು ಘಾಸಿಗೊಳ್ಳುತ್ತಾನೆ? ಎಂದು ಗ್ರಹಿಸಿ ತುಂಬ ಬೇಸರವಾಯ್ತು. ಕೆಲವು ದಿನಗಳವರೆಗೂ ಕಾಡಿದ ಈ ನೆನಪನ್ನು ಕ್ರಮೇಣ ಮರತೆ.

ಒಂದು ದಿನ ಬಸ್ ಸ್ಟ್ಯಾಂಡಿನಲ್ಲಿ ಬಸ್ಸಿಗಾಗಿ ಕಾಯುತ್ತಿದ್ದೆ. ಮಳೆ ಸುರಿದೇ ಬಿಟ್ಟಿತೇನೋ ಎಂಬಷ್ಟು ಮೋಡ ಮುಚ್ಚಿದೆ. ಕೈಯಲ್ಲಿ ಎರಡು ಚೀಲಗಳು ಬೇರೆ. ಯೋಚಿಸುತ್ತಿದ್ದಂತೆ ಬಸ್ಸು ಬಂದಿತು. ಎಲ್ಲರೂ ಬಸ್ಸನ್ನೇರಲು ಓಡುವವರೇ. ನಾನೂ ಚೀಲಗಳೊಂದಿಗೆ ಆ ನೂಕುನುಗ್ಗಲಿನಲ್ಲಿ ಬಸ್ಸನ್ನೇರಲು ಪ್ರಯಾಸಪಡುತ್ತಿದ್ದಾಗ, ಒಬ್ಬ ಹತ್ತಿರ ಬಂದು 'ಚೀಲ ಇತ್ತ ಕೊಡೀಮ್ಮ' ಎಂದವನೇ ಕಸಿದುಕೊಂಡವನಂತೆ ಬಂದು ಚೀಲವನ್ನೆತ್ತಿ ಬಸ್ಸನ್ನೇರಿದ.

ಕಳ್ಳನಿರಬಹುದೇ ಎಂಬ ದಿಗಿಲಿನೊಂದಿಗೆ ಬಸ್ಸನ್ನೇರಿ ಚೀಲಕ್ಕಾಗಿ ಕಣ್ಣಾಡಿಸಿದಾಗ 'ಇಲ್ಲಿ ಬನ್ನೀಮ್ಮ, ಈ ಚೀಲ ಕೆಳಗಿಟ್ಟು ಕುಳಿತುಕೊಳ್ಳಿ' ಎಂದಾಗ, ಪರಿಸ್ಥಿತಿಯ ಅರಿವಾಯ್ತು.

ದುಗುಡ ದೂರವಾಗಿ ಹೃದಯ ತುಂಬಿ ಬಂತು. 'ತುಂಬ ಉಪಕಾರವಾಯ್ತಪ್ಪ. ನೀನು ಈ ಸೀಟು ಹಿಡಿಯದಿರುತ್ತಿದ್ದರೆ, ಒಂದು ಒಂದೂವರೆ ಗಂಟೆ ಹೊತ್ತು ನಾನು ನಿಂತುಕೊಂಡೇ ಪಯಣಿಸಬೇಕಿತ್ತು' ಎಂದವಳೇ ಪರ್ಸಿನ ಜಿಪ್ ಎಳೆದೆ. 'ನಾನು ದುಡ್ಡಿಗಾಗಿ ಬಂದವನಲ್ಲಮ್ಮ. ಆವತ್ತು ಜ್ವರದಿಂದ ಕಂಗಾಲಾದ ನನಗೆ ಗಂಜಿ ನೀಡಿ ಬದುಕುವಂತೆ ಮಾಡಿದ ನಿಮ್ಮ ಉಪಕಾರದ ಮುಂದೆ ಇದೇನು ಮಹಾ?' ಎಂದವನೇ ಬಸ್ಸಿನಿಂದ ಇಳಿದು ಹೋದ. ಮಾನವೀಯತೆ ಮರೆಯದ ಇಂತಹ ಭಿಕ್ಷುಕರೂ ಇದ್ದಾರೆಯೇ? ಎನಿಸಿತು.

● ಕಸ್ತೂರಿ.ಪಿ. ಮಲ್ಯ

ಟ್ರೈನಿನಲ್ಲಿ ನನ್ನ ಸ್ನೇಹಿತರೊಂದಿಗೆ ಪ್ರಯಾಣಿಸುತ್ತಿದ್ದೆ. ಲೋಕಾಭಿರಾಮವಾಗಿ ಮಾತನಾಡುತ್ತಿದ್ದೆವು. ಮಾತಿಗೆ ಮಾತು ಬೆಳೆಯುತ್ತಾ ಮಕ್ಕಳ ಬೋಧನೆ ಬಗ್ಗೆ, ವಿದ್ಯಾಭ್ಯಾಸದ ಬಗ್ಗೆ ಚರ್ಚೆ ಹರಿಯಿತು. ಮಕ್ಕಳಿಗೆ ಸರಿಯಾಗಿ ಓದಲು ಬರೆಯಲು ಬರುವುದಿಲ್ಲ. ಕಾಗುಣಿತ ಕೇಳುವ ಹಾಗಿಲ್ಲ. ಇನ್ನು ಗಣಿತವಂತೂ ದೇವರಿಗೇ ಪ್ರೀತಿ ಎಂದು ಮಾತು ಮುಗಿಸುವುದರೊಳಗಾಗಿ ಪಕ್ಕದಲ್ಲಿದ್ದ ಸಹ ಪ್ರಯಾಣಿಕರೊಬ್ಬರು (ಶಿಕ್ಷಕರಿರಬಹುದು) ಏನು ಮಾಡೋದಕ್ಕೆ ಆಗುತ್ತೆ? ಒಂದರಿಂದ ಏಳರವರೆಗೆ ಒಬ್ಬರೋ, ಇಬ್ಬರೋ ಉಪಾಧ್ಯಾಯರಿರುತ್ತಾರೆ, ಎಂದರು. ಅವಾಕ್ಕಾದ ನಾನು, ತೋರ್ಪಡಿಸದೆ, ಅಷ್ಟಿಯಿಲ್ಲ. ಮುಖ್ಯವಾದ ವಿಷಯಗಳನ್ನಾದರೂ ಕಲಿಸಬಹುದಲ್ಲಾ ಎಂದೆ. ವಿಷಯವನ್ನು ಸರಿಯಾಗಿ ಗ್ರಹಿಸದ ಅವರು 'ಅದ್ಹೇಗೆ ಸಾಧ್ಯ?' ಎಂದರು. ಬಡವರ ಮನೆಯಲ್ಲಿ ಔತಣ ದೊರೆಯದಿದ್ದರೂ ಒಂದು ಲೋಟ ನೀರಿಗೆ ಕೊರತೆಯಿಲ್ಲವಲ್ಲವೇ? ಎಂದೆ.

ಸ್ವಲ್ಪ ಯೋಚಿಸಿ ಸಮಂಜಸವಾದ ಮಾತಿಗಿಳಿಯದ ಅವರು 1/12ರಲ್ಲಿ ಎಷ್ಟು 1/3ಗಳಿರುತ್ತವೆ? ಎಂದರು. ಇರಲು ಸಾಧ್ಯವಿಲ್ಲ, ಎಂದೆ. (ಏಕೆಂದರೆ 1/12ಕ್ಕಿಂತ 1/3 ಜಾಸ್ತಿಯಲ್ಲವೆ?) ಏಕೆ ಸಾಧ್ಯವಿಲ್ಲ, 1/3+1/3+1/3+1/3=1/12 ಆಗಲ್ವ? ಎಂದರು. (4/3 ಬರುವುದೆಂಬ ಪರಿವೇ ಇದ್ದಂತಿರಲಿಲ್ಲ) ನಗು ತಡೆಯಲಾರದೆ ಬಹಳ ಪ್ರಯತ್ನಿಸಿ 510ನ್ನು 5ರಿಂದ ಭಾಗಿಸಿದರೆ ಭಾಗಲಬ್ಧ ಎಷ್ಟು? ಎಂದೆ. ಅದೇನು ಮಹಾ ಸಿಂಪಲ್ ಅಂತ, ಐದೊನ್ಲ, ಐದೆರಡ್ಲ, ಅಂದದ್ದೆ ತಡ, 12 ಎಂದರು. ನನ್ನ ಸ್ನೇಹಿತರು ಅವೆರಡನ್ನೂ (ಮತ್ತೆ) ಗುಣಿಸಿದರೆ 60 ಬರುತ್ತೆ, 510 ಬರಬೇಕಲ್ವ ಎಂದರೆ, ಬಂದರೆ ಬರಲಿ ಎಂದರು. ಅಷ್ಟರಲ್ಲಿ ನಾವು ಇಳಿಯಬೇಕಾದ ಸ್ಥಳ ಬಂದಿತು. ಇಲ್ಲದಿದ್ದರೆ ಇನ್ನಷ್ಟು (ಅ)ಜ್ಞಾನ ಭಾಂಡಾರವನ್ನು ತೆಗೆಯಬಹುದಾಗಿತ್ತು.

● ಕೆ.ಹೊನ್ನಪ್ಪ

ನಾನು ಶಾಖಾ ವ್ಯವಸ್ಥಾಪಕನಾಗಿದ್ದ ಕಾಲ. ರಾಮದುರ್ಗದಿಂದ ಬೆಳಗಾವಿಗೆ ಬ್ಯಾಂಕ್ ಸಂಬಂಧ ಕೋರ್ಟ್ ಕೇಸಿಗಾಗಿ ಹೊರಟಿದ್ದೆ. ದಾರಿಯ ಮಧ್ಯೆ ನಿಲ್ದಾಣವೊಂದರಲ್ಲಿ ಬಸ್ಸಿಳಿದು ಕಾಫಿ ಕುಡಿದು ಪುನಃ ಬಸ್ ಹತ್ತಿದೆ. ಆದರೆ ನನ್ನ ಜಾಗದಲ್ಲಿ ಮುದುಕಿಯೊಂದು ಗಂಟು ಮೂಟೆಗಳನ್ನು ಪೇರಿಸಿ ಕುಳಿತಿದೆ. ನನ್ನನ್ನು ನೋಡಿದ್ದೇ ಮುದುಕಿ ''ಯಪ್ಪಾ, ನಾ ಮುದ್ಕಿ, ಜಪ್ಪಾಗೇತಿ, ನಿಂದ್ರವಲ್ಲೆಪಾ, ಮುಂದಿನ ಸ್ಟ್ಯಾಂಡದಾಗ ಇಳಿಯೂವಾಕಿ. ಅಲ್ಲೀವರ್ಗೂ ಇಲ್ಲೇ ಕೂತ್ತೀನಪಾ ತಮ್ಮಾ'' ಎಂದು ಅಂಗಲಾಚಿತು. ಮುದುಕಿಯನ್ನು ಎಬ್ಬಿಸಲು ಮನಬಾರದೆ ಹಿಂದೆ ಹೋಗಿ ಬಸ್ಸಿನ ಕಂಬಿ ಹಿಡಿದು ನಿಂತೆ.

ಧಪ್ಪೆಂದು ತಲೆ ಕಂಬಿಗೆ ಹೊಡೆದಾಗ ನನ್ನ ಯೋಚನೆಗಳಿಂದ ಹೊರಬಂದೆ. ಬಸ್ಸು ಎದುರಿನಿಂದ ಬರುತ್ತಿದ್ದ ವ್ಯಾನೊಂದಕ್ಕೆ ಡಿಕ್ಕಿ ಹೊಡೆದು ನಿಂತಿತ್ತು. ಅಪಘಾತದ ರಭಸಕ್ಕೆ ಮುದುಕಿ ಎದುರಿನ ಸೀಟಿಗೆ ಬಡಿದು ಆಕೆಯ ತೊಡೆ ಮುರಿಯಿತು. ಅಜ್ಜಿಯ ಸ್ಥಿತಿ ಮನಸ್ಸನ್ನು ಪ್ರಕ್ಷುಬ್ಧಗೊಳಿಸಿತ್ತು. ನನ್ನ ಜಾಗದಲ್ಲಿ ನನ್ನನ್ನು ಉಳಿಸಲೆಂದೇ ಬಂದು ಕುಳಿತಿತ್ತೆ ಮುದುಕಿ?

● ಹೆಚ್.ಆರ್.ಸುಂದರೇಶನ್

# ಸಾಕ್ಷರತೆಯ ಹರಿಕಾರ ಜಿಮ್ಮಿ ಯೆನ್

● ಸೊಂದಲಗೆರೆ ಲಕ್ಷ್ಮೀಪತಿ



ತೃತೀಯ ಜಗತ್ತಿನ ಅನಕ್ಷರಸ್ಥ ರೈತ ಸಮುದಾಯಕ್ಕೆ ಸಾಕ್ಷರತೆ ಎಂಬ ಕ್ರಾಂತಿಕಾರಿ ಯೋಜನೆಯೊಂದನ್ನು ಈತ ಅರ್ಪಿಸಿದ. 'ಜನ ಶಿಕ್ಷಣ ನಿಲಯ'ಗಳ ಜನಕನಾದ ಜಿಮ್ಮಿ ಯೆನ್ ಎಪ್ಪತ್ತು ವರ್ಷಗಳ ಹಿಂದೆಯೇ ಸಾಕ್ಷರತೆಯ ಚಳುವಳಿಗೆ ಹೊಸ ಸೂತ್ರವೊಂದನ್ನು ಬೆಳಕಿಗೆ ತಂದ. ಸರಕಾರ, ಸಂಘ ಸಂಸ್ಥೆಗಳು ಹಾಗೂ ಕೋಟ್ಯಾಂತರ ರೂಪಾಯಿಗಳ ವೆಚ್ಚದಿಂದ ಸಾಧಿಸಲಾಗದ ಸಾಕ್ಷರತಾಂದೋಲನವನ್ನು ಸಮರ್ಥವಾಗಿ ರೂಪಿಸಿದ ಈ ವಯೋವೃದ್ಧನಿಗೆ ಇದೇ ತಿಂಗಳು ತೊಂಬತ್ತೆಂಟು ತುಂಬುತ್ತದೆ.

ಮಧ್ಯ ಚೀನಾದ ಸಿಚುವಾನ್ ಪ್ರಾಂತ್ಯದಲ್ಲಿ ಜಿಮ್ಮಿ ಯೆನ್ 1893ರ ಅಕ್ಟೋಬರ್ 23ರಂದು ಜನಿಸಿದ. ಇವನ ತಂದೆ ತಾಯಿ ನಿರ್ಗತಿಕರು. ಅವರ ಅಷ್ಟೈಶ್ವರ್ಯವೆಂದರೆ ಕೇವಲ ಪಾಂಡಿತ್ಯ. ಚೀನಿ ಶ್ರೇಷ್ಠ ಸಾಹಿತ್ಯದ ದಿಗ್ಗಜರೆಂಬ ಹಣೆಪಟ್ಟಿ ಅವರ ಹೆಗ್ಗಳಿಕೆ. ಹತ್ತು ವರ್ಷದ ಬಾಲಕ ಯೆನ್ ಶ್ರೇಷ್ಠ ಚೀನಿ ಕೃತಿಗಳ ಕಂಠಪಾಠ ಮಾಡಿದ್ದ. ಮಗನ ಶಿಕ್ಷಣ ಕಂದಾಚಾರದ್ದೆಂದೂ, ವೃಥಾ ದೇಹ ದಂಡನೆ ಎಂದೂ ಅವರು ಗ್ರಹಿಸಿದ್ದರು. ತನ್ನ ಕುವರ ಪಾಶ್ಚಾತ್ಯ ಶಿಕ್ಷಣ ಗಳಿಸಬೇಕೆಂದೂ, ವಿಜ್ಞಾನ ಕಲಿಯಬೇಕೆಂದೂ, ಬೃಹತ್ತಾದದ್ದೇನನ್ನಾದರೂ ಸಾಧಿಸಬೇಕೆಂದೂ ಅವರು ಬಯಸಿದರು.

ತಂದೆಯ ಬಯಕೆಯಂತೆ ಉಚ್ಚ ಶಿಕ್ಷಣ ಗಳಿಸಿದ ಜಿಮ್ಮಿ ಮುಂದೆ ಏಲ್ ನಗರದಲ್ಲಿ ಒಂದು ಹಾಸ್ಟೆಲ್ ಪರಿಚಾರಕನಾಗಿ ಸೇರಿಕೊಂಡು ವಿದ್ಯಾಭ್ಯಾಸ ಮುಂದುವರಿಸಿದ. ಇಲ್ಲಿ ವಿದ್ಯಾರ್ಜನೆ ಮಾಡುತ್ತಿದ್ದಾಗ ಮೂಡಿದ ಪ್ರಜಾಪ್ರಭುತ್ವದ ಪರಿಕಲ್ಪನೆ ಅವನೊಂದಿಗೆ ಶಾಶ್ವತವಾಗಿ ಉಳಿದು ಬಂದಿತು.

1914-18, ಜಗತ್ತು ತುಮುಲದಲ್ಲಿ ಮುಳುಗಿತ್ತು. 1917ರ ವಸಂತ ಋತುವಿನಲ್ಲಿ ಅಮೆರಿಕ ಜರ್ಮನಿಯ ಮೇಲೆ ಯುದ್ಧ ಘೋಷಿಸಿತು. ಅದ್ದೇಗೋ ಜಿಮ್ಮಿ ಈ ಮಾರಕ ಯುದ್ಧ ಭೂಮಿಗೆ ಸೆಳೆಯಲ್ಪಟ್ಟ. ಈ ಸಮರ ಅವನ ಭವಿಷ್ಯದ ದಿಕ್ಕನ್ನೇ ಬದಲಾಯಿಸಿತು.

ಒಕ್ಕೂಟದವರಿಗೆ ಜನ ಶಕ್ತಿಯ ಕೊರತೆ ಇತ್ತು. ಆ ಸಮಯದಲ್ಲಿ ಬ್ರಿಟಿಷರು ಚೀನಿ ಸರಕಾರದ ಅನುಮತಿ ಪಡೆದು ಉತ್ತರ ಚೀನಾದಿಂದ

ಕೂಲಿಗಾರರನ್ನು ಭರ್ತಿ ಮಾಡಿಕೊಳ್ಳುತ್ತಿದ್ದರು. ಅವರಿಗೆ ಆಕರ್ಷಕ ಕೂಲಿ ಆಸೆ ತೋರಿಸಿ ಕರೆತಂದರು. ದಿನಕ್ಕೆ ಒಂದು ಫ್ರಾಂಕ್ ದುಡ್ಡಿನ ಆಸೆ ತೋರಿಸಲಾಗಿತ್ತು. ಈ ಕೂಲಿಗಾರರಿಗೆ ಫ್ರಾಂಕ್ ಎಂದರೆ ಎಷ್ಟು, ಫ್ರಾನ್ಸ್ ಎಲ್ಲಿದೆ, ಅಲ್ಲಿಗೆ ಹೋಗಿ ತಾವೇನು ಮಾಡಬೇಕು, ಯುದ್ಧ ಎಂದರೆ ಏನು ಎಂಬುದರ ಅರಿವು ಎಳ್ಳಷ್ಟೂ ಇರಲಿಲ್ಲ. ಇವರೆಲ್ಲರ ವಾಸ ಅಸಹ್ಯಕರ ವಾತಾವರಣದಲ್ಲಿ. ಜತೆಗೆ ಮೈ ಕೊರೆವ ಚಳಿಗಾಲ. ಡಬ್ಬಿಗಳಲ್ಲಿ ತುಂಬಿ ಕೊಡುತ್ತಿದ್ದ ದನದ ಮಾಂಸ, ಬೇಯಿಸಿದ ಹುರಳೀಕಾಯಿ ಏತಕ್ಕೂ ಸಾಲದು. ಕೂಲಿಗಾರರನ್ನು ಯುದ್ಧ ಭೂಮಿಗೆ ಕಳುಹಿಸುವುದಿಲ್ಲವೆಂಬ ಭರವಸೆಯನ್ನು ಬ್ರಿಟಿಷರು ಗಾಳಿಗೆ ತೂರಿದರು. ತಾತ್ಕಾಲಿಕವಾಗಿ ಹೂತಿಟ್ಟಿದ್ದ ಸೈನಿಕರ ದೇಹಗಳನ್ನು ಹೊರ ತೆಗೆದು ಪುನಃ ಹೂಳುವ ಅಸಹ್ಯಕರ ಕೆಲಸಕ್ಕೂ ಅವರನ್ನು ತೊಡಗಿಸಲಾಯಿತು.

ಒಂದು ದಿನ YMCA ಯ ರಾಷ್ಟ್ರೀಯ ಯುದ್ಧ ಕಾರ್ಯದ ಪರಿಷತ್ ಜಿಮ್ಮಿ ಯೆನ್‌ನನ್ನು "ಫ್ರಾನ್ಸಿನಲ್ಲಿ ಚೀನಿ ಕೂಲಿಗಳ ಬವಣೆಯನ್ನು ನೀಗಿಸಲು ಹೋಗುವಿರೇನು?" ಎಂದು ಕೇಳಿತು. ಬಾಲ್ಯದಲ್ಲಿ ಕಂಡಿದ್ದ ಚಿಂದಿ ಬಟ್ಟೆಯುಟ್ಟ ಭರವಸೆ ಕಾಣದ ಆರ್ತರು ಈಗ ಜಿಮ್ಮಿಯ ನೆನಪಿಗೆ ಬಂದರು. ಕೂಡಲೇ ಅವನು ಚೀನಿ ಕೂಲಿಗಾರರ ವಸತಿ ತಾಣದಲ್ಲಿ ಮೊಕ್ಕಾಂ ಮಾಡಲು ಒಪ್ಪಿದ.

**ಅಕ್ಷರ ಯಾತ್ರೆಯ ಆರಂಭ :**

YMCA ಯೋಧರಿಗೆ ಫಲಾಹಾರ ಮಂದಿರಗಳನ್ನು ನಡೆಸುತ್ತಿತ್ತು. ಇಲ್ಲಿ ಜಿಮ್ಮಿ ಬೀಡಿ, ಸಿಗರೇಟು, ಸಿಹಿ ತಿಂಡಿ ಮಾರುತ್ತಿದ್ದ. ಕೂಲಿಗಾರರ ದುಸ್ತರ ಜೀವನದ ಹಲವು ಮಜಲುಗಳನ್ನು ತೀರ ಹತ್ತಿರದಿಂದ ಕಂಡ. ಯೆನ್ ಈ ಜನರ ಜೀವನ ಗತಿಯನ್ನು ಬದಲಾಯಿಸುವ ತೀವ್ರ ಆಲೋಚನೆಯಲ್ಲಿ ಮುಳುಗಿದ್ದ. ಒಂದು ರಾತ್ರಿ ಅವನ ಗುಡಿಸಲಿಗೆ ಜೋಲು ಮೋರೆ ಹಾಕಿಕೊಂಡು ಮೂವರು ಚೀನಿ ಕೂಲಿಗಳು ಬಂದರು.

"ನಮ್ಮ ಮನೆಗೆ ಪತ್ರ ಬರೆದು ಕೊಡಿ. ಮಾಸ್ಟರೇ" ಎಂದರು. ಸಂತೋಷದಿಂದ ಬರೆದು ಕೊಟ್ಟ. ಮಾರನೆಯ ರಾತ್ರಿ, ಒಂದು ಡಜನ್ ಮಂದಿ ಬಂದರು. ಅವರಿಗೂ ಪತ್ರ ಬರೆದು ಕೊಟ್ಟ. ಅದರ ಮರು ರಾತ್ರಿ 50 ಜನ ಬಂದರು. ಆ ಬಳಿಕ ರಾತ್ರಿಯಿಂದ ರಾತ್ರಿಗೆ ನಿತ್ಯ ಒಂದು ದೊಡ್ಡ ಸಾಲು ಅವನ ಗುಡಿಸಲಿನ ಮುಂಭಾಗದಲ್ಲಿ ನಿಲ್ಲಲು ಪ್ರಾರಂಭಿಸಿತು. ಅವನಿದ್ದ ಬೋಲೋಗ್ನೆ ಕ್ಯಾಂಪಿನಲ್ಲಿ 5,000 ಮಂದಿ ಕೂಲಿಗಾರರಿದ್ದರು. 'ಇದಕ್ಕೆ ಕೊನೆ ಎಂದು?' ಎಂದಿತು ಅವನ ಅಂತರಾತ್ಮ.

ಕೂಡಲೇ ಅವನೊಳಗೊಂದು ಅಪೂರ್ವ ಉಪಾಯ ಅಂಕುರಿಸಿತು!

ಪ್ರತಿದಿನ ಮುಂಜಾನೆ ಇಡೀ ಕ್ಯಾಂಪಿನ ಕೂಲಿಗಾರರು ಒಂದೆಡೆ ಜಮಾಯಿಸುತ್ತಿದ್ದರು. ಈ ಸಂದರ್ಭ ಬಳಸಿಕೊಂಡ ಜಿಮ್ಮಿ "ಮಹನೀಯರೇ, ತಮ್ಮಲ್ಲಿ ಅನೇಕರಿಗೆ ನಾನು ಪತ್ರ ಬರೆದು ಕೊಡುತ್ತಿರುವುದು ತಿಳಿದಿದೆ. ಈ ರಾತ್ರಿಯಿಂದ ಅದನ್ನು ನಿಲ್ಲಿಸಿದ್ದೇನೆ. ಇನ್ನು ಮುಂದೆ ನಿಮ್ಮ ಮನೆಗೆ ನೀವೇ ಪತ್ರಗಳನ್ನು ಬರೆಯಬೇಕು. ನಿಮಗೆ ಅಕ್ಷರಾಭ್ಯಾಸವನ್ನು ನಾನು ಮಾಡಿಸುವೆ. ಅಕ್ಷರಸ್ಥರಾಗ ಬಯಸುವವರು ಕೈ ಮೇಲೆತ್ತಿ" ಎಂದ. ಬಹಳ ಹೊತ್ತು ಒಂದು ಕೈಯೂ ಮೇಲೇಳಲಿಲ್ಲ. ಸ್ವಲ್ಪ ಸಮಯದ ಬಳಿಕ ಒಂದೇ ಒಂದು ಕೈ ಮೇಲೆದ್ದಿತು. ತರುವಾಯ ಮತ್ತೊಂದು. ಅದನ್ನು ನೋಡಿ ಮಗದೊಂದು. ಹೀಗೆ 40 ಕೈಗಳು ಮೇಲೆದ್ದವು.

**ಅಕ್ಷರದ ದೀಕ್ಷೆ :**

ಜಿಮ್ಮಿ ತನ್ನ ಗುರಿಯನ್ನು ಕಂಡುಕೊಂಡಿದ್ದ - ಅದನ್ನು ಅರಿಯುದೆಯೇ! ಪ್ರತಿ ರಾತ್ರಿ ಈ 40 ಮಂದಿ ಕೂಲಿಗಾರರು ಅವನ ಗುಡಿಸಲಿನಲ್ಲಿ ಒಂದೊಂದು ಗಂಟೆ ಅಕ್ಷರಾಭ್ಯಾಸ ನಿರತರಾದರು. ಇವರಿಗೆಲ್ಲ ಪತ್ರ ಬರೆಯುವಷ್ಟು, ವಾರ್ತೆ ಓದುವಷ್ಟು ತರಬೇತಿ ನೀಡಿದ.

40 ಮಂದಿಗೆ ಅಕ್ಷರಾಭ್ಯಾಸ ಮಾಡಿಸಿದ ಜಿಮ್ಮಿ ಒಂದು ದಿನ ಅವರೆಲ್ಲರಿಗೂ ಪದವಿ ವಿತರಣಾ

**ಜಿಮ್ಮಿ ಯೆನ್ ಹಳ್ಳಿಯ ಅಶಿಕ್ಷಿತ ಜನ ತಮಗೆ ತಾವೇ ಹೇಗೆ ಕಲಿಯುವುದು, ಹೇಗೆ ಸಮೃದ್ಧ ಬಾಳ್ವೆಯನ್ನು ಸಾಗಿಸುವುದು ಎನ್ನುವ ಸೂತ್ರವೊಂದರ ಹಂಚಿಕೆಗೆ ಎಣಿಕೆ ಹಾಕಿದ.**

ಸಮಾರಂಭ ಇಟ್ಟುಕೊಂಡ. ಈ ವರ್ಣರಂಜಿತ ಸಮಾರಂಭ ಉಳಿದ ಅನಕ್ಷರಸ್ಥ ಕೂಲಿಗಳನ್ನು, ಸೂಜಿಗಲ್ಲಿನಂತೆ ಆಕರ್ಷಿಸಿತು, ಸಾಕ್ಷರತೆಯೆಡೆಗೆ. ಮರುದಿನವೇ 2000ಕ್ಕಿಂತಲೂ ಹೆಚ್ಚು ಮಂದಿ ಇವನ ಚಾರಿತ್ರಿಕ ತರಗತಿಗೆ ದಾಖಲಾದರು!

1918ರ ನವೆಂಬರ್‌ನಲ್ಲಿ ಮಹಾಸಮರಕ್ಕೆ ತೆರೆ ಬಿದ್ದರೂ ಚೀನಿ ಕೂಲಿಗಳು ಮಾತ್ರ ಅಲ್ಲೇ ನಿಂತರು. ಕಂದಕಗಳನ್ನು ಮುಚ್ಚುವ, ಯೋಧರ ರಕ್ಷಣಾ ತಾಣಗಳನ್ನು ಧ್ವಂಸ ಮಾಡುವ, ತಂತಿ ಬೇಲಿಯನ್ನು ಕೀಳುವ, ಆಸ್ಫೋಟಗೊಳ್ಳದ ಮದ್ದು ಗುಂಡುಗಳನ್ನು ಹೆಕ್ಕುವ ಹೊಣೆ ಅವರದಾಯಿತು.

ಜಿಮ್ಮಿ ತಾನು ತಯಾರು ಮಾಡಿದ ಸಾಕ್ಷರತಾ ಕೂಲಿಗಳನ್ನೇ ಶಿಕ್ಷಕರಾಗಿ ನೇಮಕ ಮಾಡಿದ. ಮುಂದೆ ಕಾರ್ನೆಲ್, ಹಾರ್ವರ್ಡ್, ಏಲ್ ಹಾಗೂ ಇತರ ಅಮೆರಿಕನ್ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ಚೀನಿ ವಿದ್ಯಾರ್ಥಿಗಳನ್ನು ಕೂಲಿಗಾರರಿಗೆ ವಿದ್ಯಾಭ್ಯಾಸ ಮಾಡಿಸಲು ಕರೆ ತಂದ. ಪುಸ್ತಕಗಳ ಕೊರತೆ ನೀಗಲು ಅವನು ತಾನೇ ಸರಳ ಭಾಷೆಯ 'ಚೀನಿ ಕಾರ್ಮಿಕರ ಸಾಪ್ತಾಹಿಕ' ಎಂಬ ವಾರ್ತಾ ಪತ್ರಿಕೆಯನ್ನು ಬರೆದು ಪ್ರಕಟಿಸಿದ.

ಚೀನಿ ರೈತಾಪಿ ಜನರಲ್ಲಿ ಸಾಕ್ಷರತೆಯ ಪವಾಡ ಬೇರು ಬಿಟ್ಟಿತ್ತು. ಇವರೆಲ್ಲರಿಗೂ ತಮ್ಮ ಮೇಲೆ ಒಂದು ಬೆಳಕಿನ ಪ್ರಭೆ ಹಾಯ್ದಂತೆ ಭಾಸವಾಯಿತು. ಅವರ ಮೇಲೆ ಆವರಿಸಿದ್ದ ಅಜ್ಞಾನವೆಂಬ ಕಾರ್ಮೋಡದ ತೆರೆ ಸರಿದಿತ್ತು.

**ಸಾಕ್ಷರತೆಯ ಸಮರ :**

1920ರಲ್ಲಿ ಚೀನಿ ಕೂಲಿಗಾರರ ದಳವನ್ನು ವಿಸರ್ಜಿಸಲಾಯಿತು. ಹುನಾನ್ ಪ್ರಾಂತ್ಯದ ರಾಜಧಾನಿ ಚಾಂಗ್‌ಷಾಗೆ ಬಂದ ಜಿಮ್ಮಿ ಮತ್ತೆ ಕಾರ್ಯಶೀಲನಾದ. ಪ್ರಮುಖ ಗಣ್ಯರನ್ನೊಳಗೊಂಡ ಒಂದು ಬೃಹತ್ ಸಮಿತಿ ರಚಿಸಿದ. 1500 ಭಿತ್ತಿಪತ್ರಗಳನ್ನು ಅಚ್ಚು ಹಾಕಿಸಿದ. -"ಅಶಿಕ್ಷಿತ ಮನುಷ್ಯ - ಕುರುಡು ಮನುಷ್ಯ" ಎಂಬ ಘೋಷಣೆ ಹೊತ್ತ ಪತಾಕೆಗಳನ್ನಿಡಿದು ನಗರದ ಬೀದಿ ಬೀದಿಗಳಲ್ಲಿ ಸಾಗುವ ಬೃಹತ್ ಮೆರವಣಿಗೆಯೊಂದನ್ನು ಏರ್ಪಡಿಸಿದ. ಸ್ಥಳೀಯ ವಿದ್ಯಾರ್ಥಿಗಳನ್ನು ನೇಮಕಾತಿ ಮಾಡಿಕೊಂಡು ಸಾಕ್ಷರತೆಯನ್ನು ಪ್ರಚಾರ ಮಾಡತೊಡಗಿದ. ಇವರು ಅಕ್ಷರ ಜ್ಞಾನಿಗಳಾಗಬಯಸುವ ಕೂಲಿಕಾರರು, ರಿಕ್ಷಾವಾಲಾಗಳು, ಚಮ್ಮಾರರು, ನೇಕಾರರು, ಜಾಡಮಾಲಿಗಳು, ಅಳಲೇಕಾಯಿ ಪಂಡಿತರು, ಭಿಕ್ಷುಕರು ಮುಂತಾದವರನ್ನು ಪಟ್ಟಿ ಮಾಡುತ್ತಾ ಹೋದರು. ರಾತ್ರಿ ಶಾಲೆಗೆ ಸೇರಿಸಿಕೊಳ್ಳಲು ಸೂಕ್ತ ವ್ಯವಸ್ಥೆ ಮಾಡಲಾಯಿತು.

ಸರಕಾರ, ಧರ್ಮಪ್ರಚಾರಕ ಸಂಸ್ಥೆ ಹಾಗೂ ಖಾಸಗಿ ಶಾಲಾಕಾಲೇಜುಗಳಿಂದ ಜನರನ್ನು ಮನ ಒಲಿಸಿ ಕರೆ ತಂದು, ಅವರೆಲ್ಲರೂ ಪ್ರತಿ ನಿತ್ಯ ಸಂಜೆ ಒಂದರಿಂದ ಒಂದೂವರೆ ಗಂಟೆ ವೇತನವಿಲ್ಲದೆ ಪಾಠ ಹೇಳಿಕೊಟ್ಟರು. ಚರ್ಚು, ದೇವಾಲಯ, ಶಾಲೆ ಹಾಗೂ ಖಾಸಗಿ ಮನೆಗಳನ್ನು ಶಾಲೆ ನಡೆಸಲು ಬಿಡಿಸಿಕೊಂಡ.

ಈತನ ಮತ್ತೊಂದು ಕ್ರಾಂತಿಕಾರಿ ಯೋಜನೆಯೆಂದರೆ ಸ್ತ್ರೀ ಶಿಕ್ಷಣ. ಜಿಮ್ಮಿಯ ಪರಿಶ್ರಮದಿಂದಾಗಿ 633 ಬಾಲಕಿಯರು ಹಾಗೂ ಸ್ತ್ರೀಯರು ಅಕ್ಷರಾಭ್ಯಾಸ ಕಲಿಯಲು ಮುಂದಾದರು. ಸಣ್ಣ ಪ್ರಮಾಣದಲ್ಲಿ ಪ್ರಾರಂಭಗೊಂಡ ಈ ಸಾಕ್ಷರತಾ ಕಾರ್ಯಕ್ರಮ ಮುಂದೆ ಎರಡು ದಶಕಗಳಲ್ಲಿ ಚೀನಾದ ಲಕ್ಷೋಪಲಕ್ಷ ಬಡ ಸ್ತ್ರೀ ಪುರುಷರನ್ನು ಅಕ್ಷರಸ್ಥರನ್ನಾಗಿಸಿತು.

**ಹಳ್ಳಿಗಳಿಗೂ ಹೆಜ್ಜೆ ಇಟ್ಟ ಅಕ್ಷರ :**

ಜಿಮ್ಮಿಗೆ ತಾನು ನಗರಗಳಲ್ಲಿ ಹಮ್ಮಿಕೊಳ್ಳುವ ಕಾರ್ಯಕ್ಕಿಂತಲೂ ಭಿನ್ನ ಮತ್ತು ಮಹತ್ತರವಾದ ಕಾರ್ಯ ತನ್ನ ಮುಂದಿದೆ ಎಂಬ ಭಾವನೆ ಮೂಡಿಸಲು ನೆರವಾದಳು 10 ವರ್ಷದ ಓರ್ವ ಪುಟ್ಟ

ಬಾಲೆ. ಆಕೆ ಅಕ್ಷರ ಕಲಿಯಲು ಹಳ್ಳಿಯಿಂದ ನಿತ್ಯ ನಗರಕ್ಕೆ ಬರುತ್ತಿದ್ದಳು. ಅವಳ ಆಸಕ್ತಿ ಮತ್ತು ತೊಂದರೆ ಜಿಮ್ಮಿಯನ್ನು ಹಳ್ಳಿಯೆಡೆ ಹೆಜ್ಜೆ ಹಾಕಲು ಪ್ರೇರೇಪಿಸಿದವು.

ವಿದ್ಯಾವಂತರ ತಂಡದೊಂದಿಗೆ ಹಳ್ಳಿಗಳಿಗೆ ಹೋಗಿ ವಾಸಿಸಲು ತೊಡಗಿದ. ಸಂಪ್ರದಾಯ ಶರಣತೆ, ಮೂಢನಂಬಿಕೆ, ಓಬಿರಾಯನ ಕಾಲದ ಕೃಷಿ ಪದ್ಧತಿಯ ವಿರುದ್ಧ ಹೋರಾಡಲು ಭೂಮಿಕೆಯನ್ನು ಸಿದ್ಧಪಡಿಸಿದ. ಬದಲಾವಣೆಯನ್ನು ಬಲವಂತವಾಗಿ ಹೇರದೆ ಹಳ್ಳಿಗರ ಮನದಿಂಗಿತವನ್ನು ಅರಿತು ಬದಲಾವಣೆಯನ್ನು ಉಂಟು ಮಾಡಲು ಪ್ರಯತ್ನಿಸಿದ.

ಹಸಿವು, ರೋಗ, ದುರಾಡಳಿತಗಳನ್ನು ಸರಿಪಡಿಸದೆ ಸಾಕ್ಷರತೆಯನ್ನು ಹೆಚ್ಚಿಸುವುದರಲ್ಲಿ ಸಾರ್ಥಕತೆ ಏನೂ ಇಲ್ಲವೆಂದು ಜಿಮ್ಮಿಗೆ ಹೊಳೆಯಿತು. ಇವನ ತಂಡ ಶಿಕ್ಷಣ, ಜೀವನೋಪಾಯ, ಆರೋಗ್ಯ ಹಾಗೂ ಸ್ವಯಂ ಆಡಳಿತ ಎಂಬ ನಾಲ್ಕು ಹಂತದ ಕಾರ್ಯಕ್ರಮ ಹಾಕಿಕೊಂಡಿತು. ತತ್ಪರಿಣಾಮ ಸಾಕ್ಷರತೆ, ಆರೋಗ್ಯ, ನೈರ್ಮಲ್ಯ, ಕೃಷಿ, ಮಾರಾಟ, ಸ್ವಯಂ ಆಡಳಿತ, ಕಲೆ ಹಾಗೂ ಸಂಸ್ಕೃತಿ ಅಭಿವೃದ್ಧಿಗೊಂಡಿತು. ಎಲ್ಲರೂ ಒಗ್ಗೂಡಿ ಸಾಮೂಹಿಕವಾಗಿ ದುಡಿಯುವಂತೆ ರೈತರಿಗೆ ಪ್ರೇರಣೆ ನೀಡಿದ. ರಸ್ತೆಯುದ್ದಕ್ಕೂ ಸಾಲು ಮರಗಳನ್ನು ನೆಡಿಸಿದ. ಸ್ವಯಂ ಸೇವಕರುಗಳಿಗೆ ಪ್ರಾಥಮಿಕ ಆರೋಗ್ಯ ಶಿಕ್ಷಣವನ್ನು ಕೊಡಿಸಿ, ಅಗ್ಗದ ವೈದ್ಯಕೀಯ ಪೆಟ್ಟಿಗೆಯೊಂದನ್ನು ನೀಡಿ, ಹಳ್ಳಿಹಳ್ಳಿಗಳಿಗೆ ಕಳುಹಿಸಿ ಕೊಟ್ಟ.

ಜನ ಶಿಕ್ಷಣ ನಿಲಯಗಳನ್ನು ಹೇಗೆ ನಡೆಸಬೇಕೆಂಬುದನ್ನು ಅರಿತ ರೈತರು ಈಗ ತಮ್ಮದೇ ಆದ ಸರಕಾರವನ್ನು ನಡೆಸಲು ಸಿದ್ಧರಾದರು. ಪ್ರತಿ ಹಳ್ಳಿಯಲ್ಲೂ ತಮ್ಮವರೇ ಆದ ಪರಿಷತ್ ಸದಸ್ಯರನ್ನು ಆಯ್ಕೆ ಮಾಡಲು ಹಾಗೂ ಭ್ರಷ್ಟಾಚಾರಿ ಅಧಿಕಾರಿಗಳನ್ನು ಓಡಿಸಲು ವ್ಯವಸ್ಥೆ ಮಾಡಲಾಯಿತು. ''ದೇವರ ಸೃಷ್ಟಿಯಲ್ಲಿ ನಾವೆಲ್ಲರೂ ಒಂದೇ'' ಎನ್ನುವ ಪ್ರಾಚೀನ ಚೀನದ ಆದರ್ಶ ತತ್ವ ಈಗ ಹೊಸ ರೂಪದಲ್ಲಿ ಕಾರ್ಯರೂಪಕ್ಕೆ ಬಂದಿತು.

> **ಅಮೇಯ**
>
> ಕೆಂಪು ಗುಲಾಬಿಯ
> ಕೋಮಲ ಕಾಯವ ಬಿಡಿಸ
> ಹೊರಟು, ಕಡ್ಡಿ, ಕಾಂಡ, ಬೇರು
> ಮಣ್ಣು, ನೀರು, ಗಾಳಿ, ರಶ್ಮಿ
> ಎಲ್ಲಾ ದುತ್ತೆಂದು ನುಗ್ಗಿ
> ಕುಂಚ, ಬಣ್ಣ ಕಣ್ಮರೆಯಾಯಿತು!
>
> ● *ಯು. ಆರ್. ಲಲಿತಾ*

1946ರಲ್ಲಿ ಜಿಮ್ಮಿ ಇಡೀ ದೇಶಕ್ಕೆ ಯೋಜನೆಯೊಂದನ್ನು ರೂಪಿಸಿದ. ತನ್ನ ಕ್ರಾಂತಿಯ ಅನುಷ್ಠಾನಕ್ಕೆ ಸಂಯುಕ್ತ ಸಂಸ್ಥಾನದ ಕಾಂಗ್ರೆಸ್‌ನ ಸಹಾಯವನ್ನು ಯಾಚಿಸಿದ. ಅದು 27 ದಶಲಕ್ಷ ಡಾಲರನ್ನು ಯೆನ್‌ನ ಕಾರ್ಯಕ್ರಮದ ಅನುಷ್ಠಾನಕ್ಕೆ ತೆಗೆದಿರಿಸಿತು. ಸಂಯುಕ್ತ ಸಂಸ್ಥಾನ ನೀಡಿದ್ದ ನೆರವಿನಲ್ಲಿ ಕೇವಲ ನಾಲ್ಕು ದಶಲಕ್ಷ ಡಾಲರ್ ಮಾತ್ರ ಖರ್ಚಾಗಿತ್ತು. ಅಷ್ಟರಲ್ಲಿ 1949ರಲ್ಲಿ ಚೀನಾವನ್ನು ಕಮ್ಯುನಿಸ್ಟರು ಕೈವಶ ಮಾಡಿಕೊಂಡರು. ನಾಯಕ ಮಾವೋನ ಕ್ರೂರ ಸಮತಾವಾದವನ್ನು ವಿರೋಧಿಸಿದ ಜಿಮ್ಮಿ ಅವರಿಗೆ 'ಸಾಮ್ರಾಜ್ಯವಾದವನ್ನು ಹರಡುವ ನಾಯಿ' ಯಂತೆ ಕಂಡು ಬಂದ. ತತ್‌ಕ್ಷಣವೇ ಜಿಮ್ಮಿಯೆನ್‌ನನ್ನು ಅವನ ಪ್ರಯೋಗಾಲಯದಿಂದ ಮಾತ್ರವಲ್ಲ ಅವನ ನೆಚ್ಚಿನ ತಾಯ್ನಾಡಿನಿಂದಲೂ ಹೊರದಬ್ಬಿದರು.

**ಪ್ರಪಂಚವೇ ಕಾರ್ಯಕ್ಷೇತ್ರ ! :**

ಜಿಮ್ಮಿಯೆನ್ ತನ್ನ ಧ್ಯೇಯದೆಡೆ ಚಲಿಸಲು 40 ಮಂದಿ ಕೂಲಿಗಾರರಿಂದ ಪ್ರಾರಂಭ ಮಾಡಿದ್ದ. ಅನಂತರ ಒಂದು ಊರು, ಒಂದು ಪ್ರಾಂತ್ಯ, ಒಂದು ದೇಶ. ಅವನೀಗ ಇಡೀ ಪ್ರಪಂಚವನ್ನೇ ಕೈಗೆತ್ತಿಕೊಂಡಿದ್ದ. ಈ ನಿಟ್ಟಿನಲ್ಲಿ ಏಷ್ಯನ್ ರಾಷ್ಟ್ರ - ಫಿಲಿಪೈನ್ಸ್ ಅವನ ಕಣ್ಣಿಗೆ ಬಿತ್ತು.

ಫಿಲಿಪೈನ್ಸ್ ವಿದ್ಯಾರ್ಥಿಗಳಿಗೆ ಅವನ ನವ ಚೈತನ್ಯದ ಕರೆ ಮನ ಮುಟ್ಟಿತು. ''ಜನರ ಬಳಿಗೆ ಹೋಗಿ ಅವರೊಡನೆ ಬಾಳಿ. ಅವರೊಂದಿಗೆ ಯೋಚಿಸಿ, ಅವರಿಗೆ ಏನು ಗೊತ್ತಿದೆಯೋ ಅದ

ರಿಂದ ಪ್ರಾರಂಭಿಸಿ, ಅವರ ಬಳಿ ಏನುಂಟೋ ಅದರಿಂದಲೇ ನಿರ್ಮಿಸಿ.'' ಅನತಿ ಕಾಲದಲ್ಲೇ 3,000 ಸ್ವಯಂ ಸೇವಕರು ಅವನನ್ನು ಹಿಂಬಾಲಿಸಿದರು. 1956ರ ವೇಳೆಗೆ ಯೆನ್‌ನ ತಂಡ ಶಿಕ್ಷಣ, ಜೀವನೋಪಾಯ ಮತ್ತು ಆರೋಗ್ಯ ಕ್ಷೇತ್ರಗಳಲ್ಲಿ ಸಾಧಿಸಿದ ಅಪಾರ ಅಭಿವೃದ್ಧಿಯನ್ನು ಕಂಡ ಮನಿಲಾ ಸರಕಾರ ತಮ್ಮ ಹೋಬಳಿಗಳಿಗೆ ತಮ್ಮವರೇ ಕೌನ್ಸಿಲರುಗಳನ್ನು ಆರಿಸಲು ಕಾನೂನೊಂದನ್ನು ಜಾರಿಗೆ ತಂದಿತು. ಜಿಮ್ಮಿಯ ಈ ಎಲ್ಲ ಸಾಧನೆಗಳನ್ನು ಪರಿಗಣಿಸಿ ಅವನಿಗೆ ಪ್ರತಿಷ್ಠಿತ ಮ್ಯಾಗ್ಸೆಸೆ ಪಾರಿತೋಷಕ ನೀಡಿ ಗೌರವಿಸಲಾಯಿತು.

ಫಿಲಿಪೈನ್ಸ್‌ನ ಸಾಧನೆಯನ್ನು ಜಗತ್ತಿನ ಉಳಿದ ಭಾಗಕ್ಕೂ ವಿಸ್ತರಿಸಲು ಜಿಮ್ಮಿ ಪ್ರಯತ್ನಶೀಲನಾದ. ಪರಿಣಾಮವಾಗಿ 1960ರಲ್ಲಿ 'ಅಂತಾರಾಷ್ಟ್ರೀಯ ಗ್ರಾಮೀಣ ಪುನರುಜ್ಜೀವನ ಕೇಂದ್ರ' (IIRR) ತಲೆ ಎತ್ತಿತು. ಇಲ್ಲಿ 1970-80ರ ದಶಕಪೂರ ತೃತೀಯ ಜಗತ್ತಿನ ರಾಷ್ಟ್ರಗಳ ಅಭ್ಯರ್ಥಿಗಳಿಗೆ ಪ್ರಥಮ ತರಬೇತಿ ನೀಡಲಾಯಿತು. ಇಂದು ಸಹಸ್ರಾರು ಸ್ವಯಂ ಸೇವಕರು ಶ್ರೀಲಂಕಾ, ನೇಪಾಳ, ಥೈಲ್ಯಾಂಡ್, ಗ್ವಾಟೆಮಾಲ, ಕೊಲಂಬಿಯಾ, ಘಾನ, ಕೆನ್ಯಾ, ಭಾರತ, ಬಾಂಗ್ಲಾದೇಶ ಮತ್ತು ಇಂಡೋನೇಶಿಯಾಗಳಲ್ಲಿ ತಮ್ಮ ತಾಯ್ನಾಡಿನ ಜನತೆಗೆ ಅಕ್ಷರ ಕಲಿಸಲು ಹಳ್ಳಿಗಳಲ್ಲಿ ಕೆಲಸ ಮಾಡುತ್ತಿರುವರು.

ಯೆನ್‌ನ ಪ್ರಬಲವಾದ ಸಂದೇಶವೆಂದರೆ ''ನಾಡಿನ ಸಂಸ್ಕೃತಿ ಹೊಲ ಉಳುವವರ ಬೆನ್ನೆಲುಬಿನ ಮೇಲೆ ನಿರ್ಮಾಣವಾಗಿದೆ. ಜನೋಪಯೋಗಿ ಕಾರ್ಯಕ್ರಮಗಳು ಆ ಜನರಿಂದಲೇ ಆರಂಭವಾಗಬೇಕು. ಅವರಿಗೆ ಬಿಡುಗಡೆಬೇಕು, ಪರಿಹಾರವಲ್ಲ. ಜನರೇ ರಾಷ್ಟ್ರದ ತಳಹದಿ. ತಳಹದಿ ಸುಭದ್ರವಾಗಿದ್ದರೆ ರಾಷ್ಟ್ರ ನೆಮ್ಮದಿಯನ್ನು ಅನುಭೋಗಿಸುತ್ತದೆ.''

ಮಾನವ ಕುಲಕೋಟಿಗೆ ಅಪೂರ್ವವಾದ ಧ್ಯೇಯವೊಂದನ್ನು ಜಿಮ್ಮಿ ಯೆನ್ ನೀಡಿದ್ದಾನೆ. ''ಭೂಮಿಯ ಮೇಲೆ ಶಾಶ್ವತ ಶಾಂತಿಯ ಪ್ರತಿಷ್ಠಾಪನೆಗಾಗಿ ನಮಗೆ ಇರುವುದು ಒಂದೇ ಅವಕಾಶ - ಶ್ರೀಸಾಮಾನ್ಯನ ಶಿಕ್ಷಣ ಶಕ್ತಿಯ ಬಿಡುಗಡೆ.'' (ಆಧಾರ)

●



ಹರಟೆ :

# ನಮಸ್ಕಾರ

● ತುರುವೆಕೆರೆ ಪ್ರಸಾದ್



'ನಮಸ್ಕಾರ ಸ್ವಾಮಿ' ಎಂದು ಪ್ರಾರಂಭಿಸಿ ನಿಮ್ಮ ತಲೆ, ಅಷ್ಟೇ ಏಕೆ ಮಿದುಳನ್ನೂ ತಿನ್ನುವ ಜನ ಇಲ್ಲದಿಲ್ಲ. ಆದರೆ ನಾನು ಆ ಜಾತಿಯವನಲ್ಲ ಬಿಡಿ! ಆದರೆ ಈ ಶಿಷ್ಟಾಚಾರದ, ಸತ್‌ಸಂಪ್ರದಾಯದ ನಮಸ್ಕಾರ ಒಂದು ರೀತಿಯ ಫ್ಯಾಷನ್ ಆಗಿರುವುದರ ಬಗ್ಗೆ ನನಗೆ ಕಳಕಳಿ ಇದೆ. ನಿಮಗೆ?

ಬೆಳಿಗ್ಗೆ ಎದ್ದ ಕೂಡಲೆ ವಿಭೂತಿ ನಾಮ ಬಳಿದುಕೊಂಡು 'ಯಾರ್ಯಾರಿಗೆ ಎಷ್ಟೆಷ್ಟು ನಾಮ ಹಾಕುವುದು' ಎಂದು ಯೋಚಿಸುತ್ತಾ 'ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂಮಮ' ಎಂದು ದೇವರಿಗೊಂದು ಮಾಮೂಲಿ ನಮಸ್ಕಾರ ಹಾಕುವುದು ಸಾಮಾನ್ಯವಾಗಿ ಹಲವರು ರೂಢಿಸಿಕೊಂಡಿರುವ ಪದ್ಧತಿ. ಅಂದರೆ 'ಬೇರೆ ಯಾರೂ ದಿಕ್ಕಿಲ್ಲ. ನೀನೇ ಗತಿ' ಎಂಬ ಬೂಟಾಟಿಕೆಯ ನಮಸ್ಕಾರ. ಇದರ ನಿಜವಾದ ಅರ್ಥ ಸೃಷ್ಟಿಕರ್ತನಿಗೆ ಕೃತಜ್ಞತಾಭಾವದಿಂದ ಶರಣಾಗುವುದು ಎಂದೇ ಆದರೂ ಎಷ್ಟು ಜನ ಆ ಭಾವನೆಯಿಂದ ನಮಸ್ಕರಿಸಿಯಾರು ಹೇಳಿ? ಕೇವಲ ನಮ್ಮ ಸ್ವಾರ್ಥ ಸಾಧನೆಗೆ ನಮಸ್ಕಾರ. ನಮ್ಮೊಬ್ಬರ ಒಳಿತಿಗಾಗಿ ಕೇವಲ ಬೇಡುವುದು. ಆತ್ಮದ ಹಂಬಲವಂತೂ ಅಲ್ಲ! ಬೇರೆ ಯಾರಾದರೂ ದಿಕ್ಕಿದ್ದರೆ ಈ ದೇವರಿಗೂ ನಮಸ್ಕರಿಸುತ್ತಿರಲಿಲ್ಲವೇನೋ ನಾವು. ನಾವೆಷ್ಟು ಸ್ವಾರ್ಥಿಗಳು!

ಮನೆಯ ಹೊಸಿಲಿನಿಂದ ಕಾಲು ತೆಗೆದಾಕ್ಷಣ 'ನಮಸ್ಕಾರಗಳ ವಿನಿಮಯ ಅವಿರತವಾಗಿ ನಡೆಯಲಾರಂಭಿಸುತ್ತದೆ. ಹಾಗೆಂದು

ಎಲ್ಲವೂ ಮನಃಪೂರ್ವಕವಾದ ನಮಸ್ಕಾರಗಳೇ? ಖಂಡಿತಾ ಅಲ್ಲ. ಪರಿಸ್ಥಿತಿ, ಅವಶ್ಯಕತೆಗೆ ತಕ್ಕಂತೆ ನಮಸ್ಕಾರಗಳು.

ನನ್ನ ಸ್ನೇಹಿತ ಪರ್ಮೇಶಿ ನಮಸ್ಕಾರಗಳನ್ನು ಎರಡು ಬಗೆಯಲ್ಲಿ ವಿಂಗಡಿಸಿದ್ದಾನೆ. ಉಳಿತಾಯ ಖಾತೆಯ ನಮಸ್ಕಾರಗಳು ಮತ್ತು ಚಾಲ್ತಿ ಖಾತೆಯ ನಮಸ್ಕಾರಗಳು ಎಂದು. ಉಳಿತಾಯ ಖಾತೆಯ ನಮಸ್ಕಾರಗಳೆಂದರೆ ದರದು ಬಿದ್ದಾಗ ಹಿಂದೆ-ಮುಂದೆ ನೋಡದೆ ಎಂಥವನಿಗೇ ಆಗಲಿ ವಿನಯದಿಂದ, ದೈನ್ಯದ ಮುಖ ಭಾವದೊಂದಿಗೆ ಹಾಕು ವಂಥವು. ಇನ್ನು ಚಾಲ್ತಿ ಖಾತೆಯ ನಮಸ್ಕಾರಗಳೆಂದರೆ ಸದ್ಯ ಚಾಲ್ತಿಯಲ್ಲಿರುವ ವ್ಯಕ್ತಿಗಳಿಗೆ ಹೊಡೆಯುವ ನಮಸ್ಕಾರಗಳು. ಈ ನಮಸ್ಕಾರಗಳು 'ಏಕ್‌ದಂ' ಪ್ರಯೋಜನ ಬೀರಬೇಕೆಂದಿಲ್ಲ. ಮುಂದೆಂದೋ ಪ್ರಯೋಜನ ನೀಡಬಹುದು ಅಥವಾ ನೀಡದಿರಲೂ ಬಹುದು. 'ಹೇಗಾದರಾಗಲಿ, ಯಾವತ್ತಾದರೂ ಉಪಯೋಗಕ್ಕಾದೀತು ಪ್ರಾಣಿ' ಎಂಬ ದುರಾಲೋಚನೆ, ಕ್ಷಮಿಸಿ, ದೂರಾಲೋಚನೆಯ ನಮಸ್ಕಾರಗಳಿವು. ಎಂ.ಎಲ್.ಎ., ಮಂಡಲಪ್ರಧಾನ, ಕಾಲೇಜಿನ ಲೆಕ್ಚರರ್ ಮುಂತಾದವರಿಗೆ ಹಾಕುವ ನಮಸ್ಕಾರಗಳು ಚಾಲ್ತಿ ಖಾತೆಯವೇ ಸರಿ!



ನಾನು ಈಗಾಗಲೇ ಹೇಳಿದಂತೆ ಎಲ್ಲ ನಮಸ್ಕಾರಗಳೂ ಅಂತರಾಳದಿಂದ ಬರುವಂಥವುಗಳಲ್ಲವೇ ಅಲ್ಲ. ಪ್ರೈಮರಿ ಶಾಲೆಯಲ್ಲಿ ಪಾಠ ಹೇಳಿದ ದೃಷ್ಟಿ ಮಂದವಾದ ಮಾಸ್ತರು ದಾರಿಯಲ್ಲಿ ಬರುವುದನ್ನು ಕಂಡರೂ ಶಿಷ್ಯ ತನಗೆ ಕಣ್ಣೇ ಕಾಣದವನಂತೆ ಹೋಗುತ್ತಾನೆ. ಅಪ್ಪಿ ತಪ್ಪಿ ಆ ಮಾಸ್ತರೇ ಇವನ ಹಳೆಯ ಚಹರೆಯಿಂದ ಗುರುತು ಹಿಡಿದಾಗ ವಿಧಿಯಿಲ್ಲದೆ 'ನಮಸ್ಕಾರ' ಎನ್ನಲೇಬೇಕಾಗುತ್ತದೆ. ಇನ್ನು ಅಪ್ಪನಿಗೋ, ತಾತನಿಗೋ, ಯಾವನಿಗೋ ಪರಿಚಯ, ಗೊತ್ತಿರುವವನು ಎಂಬ ಕಾರಣದಿಂದ ಅವನಿಗೊಂದು 'ನಾಮಕಾವಾಸ್ತೆ ನಮಸ್ಕಾರ.' ಹಾಗೆಯೇ ಮನೆಯವರಿಗೆ ಪರಿಚಯವಿರುವವನ ಮುಂದೆ ಎಂದೋ ಬೀಡಿ ಸೇದಿಯೋ, ಬೀರು ಕುಡಿದೋ, ಸಿಕ್ಕಿ ಬಿದ್ದು ಅವನು ಸಾಯುವ ತನಕ ಇಲ್ಲವೇ ಇವನು ಸಾಯುವ ತನಕ ಅವನು ಸಿಕ್ಕಿದಾಗಲೆಲ್ಲ ಇವನು 'ನಿರಂತರ ನಮಸ್ಕಾರ' ಹೊಡೆಯುತ್ತಿರಬೇಕು. ಪಾಪ! ಎಲ್ಲಿಯ ಗ್ರಹಚಾರ? ಎಂಥ ಮೂರನೇ ದರ್ಜೆಯ ಲೆಕ್ಚರರ್ ಆದರೂ ಇಂಟರ್‌ನಲ್ ಅಸೆಸ್‌ಮೆಂಟ್ ಅಂಕಗಳಿಗೆ ಹೆದರಿ ಅವನಿಗೊಂದು 'ಅಪಾತ್ರ ನಮಸ್ಕಾರ.' ಆಫೀಸಿನಲ್ಲಿ ಬಾಸ್ ಎನ್ನುವ ಪ್ರಾಣಿಯ ಕೃಪಾಕಟಾಕ್ಷ ತನ್ನ ಮೇಲೆ ಬೀಳಲಿ ಎಂದು ಕೂತರೊಂದು, ನಿಂತರೊಂದು 'ಮಸ್ಕಾ ನಮಸ್ಕಾರ'. ಹೀಗೆ ನಮಸ್ಕಾರಗಳೇನು ಒಂದೆರಡು ಬಗೆಯವೇ? ಒಂದೆರಡು ಕಾರ್ಯಸಾಧನೆ

ಗಾಗಿಯೆ?

ಮತ್ತೂ ಕೆಲವು ರೀತಿಯ ನಮಸ್ಕಾರಗಳನ್ನು ಮನಸ್ಸು ಖಾರ ಮಾಡಿಕೊಂಡಾದರೂ ಹೊಡೆಯಲೇಬೇಕು. ನಮ್ಮ ಬೀದಿಯಲ್ಲೊಬ್ಬ ದುರಹಂಕಾರದ ಮನುಷ್ಯನಿದ್ದಾನೆ. ಪರಿಸ್ಥಿತಿಯ ಒತ್ತಡಕ್ಕೆ ತಲೆಬಾಗಿ ನಾನು ಅವನ ಬಳಿ ಸಾಲ ಮಾಡಬೇಕಾಯಿತು. ಸಾಲದಾತನಾದ ಅವನಿಗೆ ಕಂತುಪಿತನಾಗಿ ಬಡ್ಡಿ ಸಮೇತ ಹಣ ಪಾವತಿಸುತ್ತಿದ್ದರೂ ದಿನಕ್ಕೆ ನಾಲ್ಕು ಬಾರಿ ಈ ದುರಾತ್ಮನಿಗೆ ದಾಕ್ಷಿಣ್ಯಕ್ಕೆ ನಮಸ್ಕಾರ ಹೊಡೆಯಬೇಕಲ್ಲ ಎಂದು ಮೈ ಎಲ್ಲಾ ಉರಿಯುತ್ತದೆ. ಆದರೆ ಏನು ಮಾಡುವುದು ಹೇಳಿ? ಅಂತೆಯೇ ನಮ್ಮ ಏರಿಯಾದ ಧಾಂಡಿಗನೊಬ್ಬ ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಯಾರನ್ನೋ ಇರಿದು ಜೈಲಿಗೆ ಹೋಗಿ ಬಂದ. ಈಗ ಅವನು ಎಲ್ಲೇ ಸಿಕ್ಕಲಿ ನಾನೇ ಏನು ಇಡೀ ಏರಿಯಾದವರೇ 'ನಮಸ್ಕಾರ ಶಂಭು' ಎನ್ನದೆ ಮುಂದೆ ಹಾದರೆ ಕೇಳಿ? ನನಗೆ ತುಂಬಾ ಅಭಿಮಾನ, ಗೌರವವಿದ್ದ ಮಾಸ್ತರೊಬ್ಬರಿಗೆ ಅವರು ಸಿಕ್ಕಿದಾಗಲೆಲ್ಲಾ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತಿದ್ದೆ. ಆದರೆ ಕಾಲಕ್ರಮೇಣ ಆ ಮಾಸ್ತರರ ನಿಜವಾದ ಬಣ್ಣ ಬಯಲಾಯಿತು. ಅವರ ಬಣ್ಣ ಬಯಲಾಯಿತೋ ಇಲ್ಲ ಪ್ರಾಪಂಚಿಕ ಜ್ಞಾನ ಬಂದ ನನಗೆ ಆಗ ಅವರ ನಿಜವಾದ ಸ್ವರೂಪ ಕಂಡಿತೋ, ಒಟ್ಟಿನಲ್ಲಿ ಅವರ ಅವಗುಣಗಳ ಪರಿಚಯವಾಯಿತು. ಈಗೆಲ್ಲಾ ಅವರು ಸಿಕ್ಕರೆ ಶಿಷ್ಟಾಚಾರದ ನಮಸ್ಕಾರವಲ್ಲ, ಬರೀ ಒಂದು ಕಾಟಾಚಾರದ ನಮಸ್ಕಾರ. ಮುಂದೊಂದು ದಿನ ಬಹುಶಃ ಅದೂ ಸಿಗಲಾರದೇನೋ ಅವರಿಗೆ! ಸಿಕ್ಕು ತಾನೆ ಏನಾಗಬೇಕು ಬಿಡಿ!



ಕೆಲವೊಂದು ಸಂದರ್ಭಗಳಲ್ಲಿ ನಮಸ್ಕಾರ ಮಾಡುವ ಮಾಡಿ ಅನಿರೀಕ್ಷಿತ, ಅನಪೇಕ್ಷಿತ ಪೇಚಿಗೆ ಸಿಕ್ಕುಬಿಡುತ್ತಾರೆ. ಇತ್ತೀಚೆಗೊಮ್ಮೆ ಹಾಗೇ ಆಯಿತು. ನಮ್ಮ ಬೀದಿಯ ಸಿಂಗಾರಿ ಗೌಡರಿಗೆ ನಾನು ಎಂದೂ ನಮಸ್ಕಾರ ಹೊಡೆದವನೇ ಅಲ್ಲ. ಗೌಡರೂ ಅಷ್ಟೇ, ತಾವಾಗಿಯೇ ಯಾರಿಗೂ ನಮಸ್ಕಾರ ಹೊಡೆಯದ ಬಿಗುಮಾನದ ವ್ಯಕ್ತಿ. ಅಂದು ದಾರಿಯಲ್ಲಿ ಹೋಗುತ್ತಿದ್ದವನು ಯಾವುದೋ ಜ್ಞಾನದಲ್ಲಿ ಜಗಲಿಯ ಮೇಲೆ ಕುಳಿತಿದ್ದ ಗೌಡರಿಗೆ 'ನಮಸ್ಕಾರ' ಎಂದು ಬಿಟ್ಟೆ. ಅಷ್ಟೇ! ಗೌಡರು ಯಾವುದೋ ರಾಜಮಹಾರಾಜರ ರತ್ನ ಖಚಿತ ಕಿರೀಟ ಸಿಕ್ಕಿದಂತಾಗಿ "ಬಾರೋ! ಈಗೇನು ಮಾಡ್ತಿದೀಯೋ? ಯಾವುದೂ ಸರಕಾರೀ ಚಾಕರಿ ಸಿಕ್ಕಲಿಲ್ಲವೇನೋ? ಸುಮ್ನೆ ಉಂಡಾಡಿಗುಂಡನಂತೆ ತಿಂದು ತಿಂದು ಅಲ್ಲಿ ಇಲ್ಲಿ ಅಲೀತಿರ್ತೀಯ! ಯಾವಾಗ್ಲೋ ಜವಾಬ್ದಾರಿ ಬರೋದು ನಿನಗೆ?" ಎಂದು ಏನೋ ಮಹಾ ನಾನು ಅವರ ಮನೆಯ ಅನ್ನ ತಿನ್ನುತ್ತಿರುವವನಂತೆ,

ನನ್ನ ಮೇಲೆ ಅಪಾರ ಕಾಳಜಿ ಇರುವಂತೆ ಬಾಯಿಗೆ ಬಂದಂತೆಲ್ಲಾ ಬೊಗಳಿದರು. ಯಾರಿಗೆ ಬೇಕು ಹೇಳಿ - ನಮಸ್ಕಾರ ಹೊಡೆದು ನಮ್ಮ ಜನ್ಮ ನಾವೇ ಜಾಲಾಡಿಸಿಕೊಳ್ಳುವುದು?

ಮತ್ತೊಮ್ಮೆ ಹೀಗಾಯಿತು. ನಮ್ಮ ಪರಿಚಿತರೊಬ್ಬರ ಮನೆಯ ಹುಡುಗಿ ಯಾವುದೋ ಹುಡುಗನೊಂದಿಗೆ ಸುತ್ತುತ್ತಿದ್ದಳು. ಈ ವಿಷಯವನ್ನು ನಾನು ಆ ಹುಡುಗಿಯ ಹಿತದೃಷ್ಟಿಯಿಂದ ಅವಳಣ್ಣನ ಕಿವಿಗೆ ಮುಟ್ಟಿಸಿದೆ. ಸರಿ! ಅವನೇನೋ ಅಂದಿರಬೇಕು! ಅಂದಿನಿಂದ ಆ ಹುಡುಗಿ ನನ್ನ ಮೇಲೆ ಕ್ರೋಧ ಕಾರಲಾರಂಭಿಸಿದಳು. ಅದೊಂದು ದಿನ ನನ್ನ ಸ್ನೇಹಿತನೊಬ್ಬನ ಜೊತೆ ಪೇಟೆ ಚೌಕದಲ್ಲಿ ಮಾತಾಡುತ್ತಾ ನಿಂತಿದ್ದೆ. ಆ ಸಮಯದಲ್ಲಿ ಈ ಹುಡುಗಿ ಅಲ್ಲಿಗೆ ಬಂದಳು. ಬಹುಶಃ ಆ ನನ್ನ ಉಪಾಧ್ಯಾಯ ವೃತ್ತಿಯ ಸ್ನೇಹಿತನ ಶಿಷ್ಯೆಯಾಗಿರಬೇಕು ಆ ಹುಡುಗಿ, ನನ್ನ ಸ್ನೇಹಿತನನ್ನು ಕಂಡವಳೇ ಗೌರವದಿಂದ 'ನಮಸ್ಕಾರ ಸಾರ್' ಎಂದಳು. ನನ್ನ ಸ್ನೇಹಿತ ಪ್ರತಿ ನಮಸ್ಕರಿಸುವ ಮೊದಲೇ ನಾನು ತಟ್ಟನೆ ಕೈ ಎತ್ತಿ 'ನಮಸ್ಕಾರ' ಎಂದು ಅವಳ ನಮಸ್ಕಾರವನ್ನು ಸ್ವೀಕರಿಸಿಬಿಟ್ಟೆ. ಆ ಹುಡುಗಿಗೆ ಎಷ್ಟು ಕೋಪ ಬಂದಿತ್ತೆಂದರೆ ಎದುರು ಬಸ್ ಬರುವುದನ್ನೂ ಲೆಕ್ಕಿಸದೆ ದುಡುದುಡು ಚೌಕ ದಾಟಿ ಹೋದಳು. ಬಹುಶಃ ಆ ಹುಡುಗಿ ಇನ್ನು ನಾನು ಜೊತೆಯಿದ್ದರೆ ಸಾಕ್ಷಾತ್ ಆ ದೇವರಿಗೂ ನಮಸ್ಕಾರ ಹೊಡೆಯಲಾರಳೇನೋ!

ಇನ್ನು ಪುತ್ರರತ್ನಗಳು ಅಪ್ಪಂದಿರುಗಳಿಗೆ ಪತ್ರಮುಖೇನ ಹೊಡೆಯುವ ನಮಸ್ಕಾರಗಳಂತೂ ಆ ದೇವರಿಗೇ ಪ್ರೀತಿ. 'ತೀರ್ಥರೂಪ ಸಮಾನರಾದ ಅಪ್ಪನಿಗೆ ನಮಸ್ಕಾರಗಳು' ಎಂದು ಪೀಠಿಕೆ ಹಾಕುವುದೇ ಅರ್ಧ ಬಾಟಲು ತೀರ್ಥ ಒಳ ಹೋದ ಮೇಲೆ. ಅಪ್ಪನೆನಿಸಿಕೊಂಡವ ಆ ನಮಸ್ಕಾರಗಳನ್ನು ಸ್ವೀಕರಿಸುವ ತಂಟೆಗೇ ಹೋಗಲಾರ. ಮಗರಾಯ ಎಷ್ಟು ನೂರುಗಳಿಗೆ ಇಂಡೆಂಟ್ ಹಾಕಿದ್ದಾನೆ ಎಂಬುದನ್ನೂ ಪತ್ರದಲ್ಲಿ ಹುಡುಕುತ್ತಾನೆಯೇ ಹೊರತು ಯಾರಿಗೆ ಬೇಕು ಮಗನ ನಮಸ್ಕಾರ? ಗೊತ್ತಿಲ್ಲವೇ ಅವನಿಗೆ ಮಗನ ಯೋಗ್ಯತೆ? ಅಂತೆಯೇ ಸತಿಶಿರೋಮಣಿಗಳು ತಮ್ಮ ಪತಿದೇವರುಗಳಿಗೆ ಹಾಕುವ ನಮಸ್ಕಾರಗಳು. ತವರಿಗೆ ಹೋದ ಮಡದಿ ತನ್ನ ಗಂಡನಿಗೆ ಕಾಗದ ಬರೆಯುವಾಗ 'ನಮಸ್ಕಾರ' ಎಂದು ಬರೆಯಬೇಕಲ್ಲ ಎಂದು ಕಾಟಾಚಾರಕ್ಕೆ ಬರೆಯುತ್ತಾಳೆ, ಅಕಸ್ಮಾತ್ ಬೇರಾರಿಗಾದರೂ ಆ ಕಾಗದ ಸಿಕ್ಕಿ 'ಇವಳೆಂತಹ ಗರಾಣಿ ಹೆಣ್ಣು' ಎಂದು ಕೊಂಕು ನುಡಿಯದಿರಲೆಂದು. ತನ್ನ ಗಂಡ ಪತ್ರ ನೋಡಿ ಅಥವಾ ಓದಿ ಖಂಡಿತ ಅದನ್ನು ಹರಿದು, ಸಿಗಿದು ಗಾಳಿಗೆ ತೂರುತ್ತಾನೆಂಬ ಖಾತರಿಯಿರುವ ಯಾವ ಹೆಣ್ಣೂ ಔಪಚಾರಿಕವಾಗಿಯಾದರೂ ನಮಸ್ಕಾರ ಎಂದು ಬರೆಯುವು



ದಿಲ್ಲವೇನೋ? ಎಲ್ಲರೂ ಹಾಗಿರುವುದಿಲ್ಲ ಬಿಡಿ. ತಮ್ಮ ಗಂಡಂದಿರಿಗೆ ನಿಜಕ್ಕೂ ಕೃತ್ರಿಮವಲ್ಲದ ನಮಸ್ಕಾರಗಳನ್ನು ಸಲ್ಲಿಸುವ ಮಾತೆಯರಿಗೆ ನಮೋ ನಮಃ.

ಈ ನಮಸ್ಕಾರಗಳನ್ನು ಹೊಡೆಯುವುದಿರಲಿ, ಅವನ್ನು ಸ್ವೀಕರಿಸುವುದು ಪ್ರಯಾಸದ ಸಂಗತಿ. ಏಕೆಂದರೆ ಎಷ್ಟೋ ವೇಳೆ ನಮಸ್ಕಾರ ಹಲವು ಪೇಚು, ಇಕ್ಕಟ್ಟಿಗೆ ಸಿಲುಕಿಸುವ ಓಂಕಾರ. 'ನಮಸ್ಕಾರ, ನಾನೊಬ್ಬ ಕವಿ, ನಾನೊಂದು ಕವನ ಸಂಕಲನವನ್ನು ಹೊರ ತಂದಿರುವೆ. ದಯಮಾಡಿ ತಾವೊಂದು ಕೊಂಡು ನನಗೆ ಸಹಾಯ ಮಾಡಿ' ಎಂದು ದೈನ್ಯ ಭಾವದಿಂದ ಕೇಳುವ ಕವಿ ಪುಂಗವನ ಕವನ ಸಂಕಲನದ ಒಂದು ಪ್ರತಿಯನ್ನು ಇಷ್ಟವಿಲ್ಲದಿದ್ದರೂ, ಅಭಿರುಚಿಯಿಲ್ಲದಿದ್ದರೂ ಅವನು ನಮಸ್ಕಾರ ಹೇಳಿದ ಧಾಟಿಗಾದರೂ ಕೊಳ್ಳಲೇಬೇಕು. 'ನಮಸ್ಕಾರ! ಒಂದ್ಹತ್ತು ರೂಪಾಯಿ ಇದೆಯಾ?' 'ನಮಸ್ಕಾರ! ಒಂದ್ನಿಮಿಷ ಗಾಡಿ ಕೊಡ್ತೀರಾ?' 'ನಮಸ್ತೆ, ಬಸ್ ಸ್ಟಾಪ್ ತನಕ ಡ್ರಾಪ್ ಕೊಡ್ತೀರಾ?' 'ನಮಸ್ಕಾರ ಸಾರ್! ಸ್ವಲ್ಪ ಪೆನ್ ಕೊಡ್ತೀರಾ?' 'ನಮಸ್ಕಾರ ಸ್ವಾಮಿ; ನನ್ನ ಮಗನ ಕೆಲಸದ ವಿಷಯ ಏನು ಮಾಡಿದ್ರಿ?' 'ನಮಸ್ಕಾರ, ನಮ್ಮ ಹುಡುಗೀಗೆ ಯಾವುದಾದರೂ ಗಂಡಿದ್ರೆ ನೋಡಿ ಸ್ವಾಮಿ' ಹೀಗೆ ನಮಸ್ಕಾರ ಯಾವುದೋ ಮೋಡಿ ಹಾಕಿ ನಿಮ್ಮನ್ನು ದಾಕ್ಷಿಣ್ಯಕ್ಕೋ, ಯೋಚನೆಗೋ ಸಿಕ್ಕಿಸಿ ಅನಪೇಕ್ಷಿತ ತೊಂದರೆ ನೀಡುವುದು ನಿಮಗೆ ಗೊತ್ತಿಲ್ಲದ್ದೇನಲ್ಲ!



ನಮಸ್ಕಾರಗಳ ಹಿಂದಿನ ಉದ್ದೇಶ ಹತ್ತು ಹಲವು ಬಗೆಯದ್ದಾದರೆ, ಅವುಗಳನ್ನು ಸಲ್ಲಿಸುವ ವೈಖರಿ ನೂರಾರು. ಸಾಚಾ ನಮಸ್ಕಾರಗಳ ತಲೆಯ ಮೇಲೆ ಹೊಡೆದಂತೆ ಖೋಟಾ ನಮಸ್ಕಾರ ಹೊಡೆಯುವ ಮಂದಿಯನ್ನು ಹೇಗೆ ಪತ್ತೆ ಮಾಡುವುದು ಹೇಳಿ? ಕೆಲವರು ಬೆನ್ನು ಬಾಗಿಸಿ, ತಲೆ ಬಗ್ಗಿಸಿ, ಕೈಯನ್ನು ಕಮಾನಾಗಿ ಬಗ್ಗಿಸಿ ಕಣ್ಣಿನ ಪಕ್ಕಕ್ಕಿಟ್ಟು ನಮಸ್ಕಾರ ಹೊಡೆಯುತ್ತಾರೆ. ಇವರು ನಮಸ್ಕಾರ ಎಂದದ್ದು ನಮ್ಮ ಕಿವಿಗೆ ಬೀಳದೆ ಹೋದರೆ 'ಇವರಿಗೆ ನಮ್ಮ ಮುಖ ಕಂಡರೆ ಆಗುವುದಿಲ್ಲ. ಅದಕ್ಕೇ ಹೀಗೆ ಹೋಗುತ್ತಾರೆ' ಎಂದು ಅ(ಪಾ)ರ್ಥ ಮಾಡಿಕೊಳ್ಳಬೇಕಾಗುತ್ತದೆ. ಮತ್ತೆ ಕೆಲವರು ದಾರಿಯಲ್ಲಿ ಹೋಗುತ್ತಿದ್ದವರು ಗಕ್ಕನೆ ನಿಂತು ಏನೋ ಮಹತ್ತರ ವಿಷಯ ಹೇಳುವವರಂತೆ ಹತ್ತಿರ ಬಂದು ಬರೀ 'ನಮಸ್ಕಾರ' ಎಂದು ಭ್ರಮನಿರಸನ ಮಾಡಿ ಹೋಗುತ್ತಾರೆ. ಹಲವರದ್ದಂತೂ ಮಿಲಿಟರಿ ಸೆಲ್ಯೂಟ್. ಅವರ ನಮಸ್ಕಾರಗಳನ್ನೂ ಸರಿಯಾದ ರೀತಿಯಲ್ಲಿ ಸ್ವೀಕರಿಸದಿದ್ದರೆ ನಮಗೇ ನಾಚಿಕೆಯಾಗುತ್ತದೆ. ಇನ್ನೂ ಕೆಲವರು 'ನಮಸ್ಕಾರ' ಎಂದು ಕೈ ಎತ್ತಿಕೊಂಡು ತಲೆಯ ಮೇಲೆ ಹೊಡೆಯುವವರಂತೆಯೇ ನುಗ್ಗಿ

ಬರುತ್ತಾರೆ. ಇವರು ಹೊಡೆಯದಿದ್ದರೂ ಇವರು ಬರುವ ಪೈಖರಿಗೆ ಹೆದರಿ ಸರಿದು ರಸ್ತೆಯ ಪಕ್ಕದ ಚರಂಡಿಗೆ ಕಾಲಿಡುವುದಂತೂ ನಿಜ! ತಲೆಯನ್ನು ಉದ್ದುದ್ದ ಆಡಿಸಿ ನಮಸ್ಕಾರ ಸೂಚಿಸುವವರೂ ಉಂಟು. ಇವರೇನು ನಮಸ್ಕಾರ ಹೊಡೆದರೋ, ಇಲ್ಲ ಕರೆದರೋ ಎಂದು ಕೆಲವೊಮ್ಮೆ ಕನ್‌ಫ್ಯೂಸ್ ಆಗಿಬಿಡುತ್ತದೆ. ಕೆಲವರದಂತೂ ಭರವಸೆಯ ನಗುವೇ ನಮಸ್ಕಾರ! ನಮಸ್ಕಾರ ಎಂದೊಡನೆ ಸುಂದರ ದಂತಪಂಕ್ತಿಯನ್ನು ತೋರಿ ಸರಿದು ಹೋಗುವ ಇವರುಗಳು ಹಲ್ಲೆಲ್ಲಾ ಉದುರಿ ಹೋದ ಮೇಲೆ ಏನು ಮಾಡುತ್ತಾರೋ? ಯಾರದು ಹೇಗೇ ಇರಲಿ, ನಮಸ್ಕಾರವೆಂದರೆ ನಮ್ಮ ಓಟು ಕೇಳುವ ಮಂದಿಯದು! ಎಂತಹ ವಿಶ್ವಾಸ, ಎಷ್ಟು ಸೌಜನ್ಯ, ಎಂತಹ ಮನ ಮೋಹಕ ಪೈಖರಿ. ಹತ್ತೂ ಬೆರಳುಗಳಿಗೆ ಉಂಗುರಗಳಿರುವ ಎರಡೂ ಕೈಗಳನ್ನು ಜೋಡಿಸಿ ತಮ್ಮ ವಿಶಾಲ ಉದರದ ಮೇಲೆ ಕಲಶದಂತೆ ಇಟ್ಟುಕೊಂಡು ಎಷ್ಟು ಚೆನ್ನಾಗಿ ನಮಸ್ಕಾರ ಹೊಡೆಯುತ್ತಾರೆ. ದೇವರಿಗೂ ಹೊಡೆಯುತ್ತಾರೋ ಇಲ್ಲವೋ? ನಮಗೆ ಮಾತ್ರ ಹೊಡೆಯುತ್ತಾರೆ. ನಾವೇ ಅಲ್ಲವೆ ಅವರಿಗೆ ಭಾಗ್ಯ ನೀಡುವ ದೇವರುಗಳು. ಕಲಿಯಬೇಕು ಇವರಿಂದ ನಮಸ್ಕಾರ ಹೊಡೆಯುವ ರೀತಿಯನ್ನು! ಆದರೆ ಹುಶಾರಾಗಿರಿ. ಯಾವುದಾದರೂ ಟೂ ವೀಲರ್ ಡ್ರೈವ್ ಮಾಡುವಾಗ 'ನಮಸ್ಕಾರ' ಎಂದವರಿಗೆ ಎರಡೂ ಕೈಜೋಡಿಸಿ ಪ್ರತಿನಮಸ್ಕರಿಸಿಬಿಟ್ಟೀರಿ!

ಅಂತೂ ನಮಸ್ಕಾರ ನಮ್ಮ ದಿನಚರಿಯಲ್ಲಿ ಹಾಸು ಹೊಕ್ಕಾಗಿದೆ ಎಂಬುದಂತೂ ನಿಜ. ಮನಃಪೂರ್ವಕವಾಗಿ ಸಲ್ಲಿಸಿದ ನಮಸ್ಕಾರ ಗೌರವ ಸೂಚನೆಯ ಸಂಕೇತ, ಕೃತಜ್ಞತೆ ಸಲ್ಲಿಸಿದ ತೃಪ್ತಿ ನೀಡುವ ಅನುಭಾವ. ಸ್ವೀಕರಿಸುವಾತನಿಗೆ ಹೆಮ್ಮೆ. ಆತ್ಮವಿಶ್ವಾಸ ನೀಡುವ ಝೇಂಕಾರ. ಯೋಗ್ಯರಿಗೆ ನಮಸ್ಕಾರ ಸಲ್ಲಿಸುವುದೆಂದರೆ ಕೀಳುತನ, ಗುಲಾಮಗಿರಿ, ಅಂತಸ್ತಿಗೆ ತಕ್ಕುದಲ್ಲ ಎಂದು ಭಾವಿಸುವವರಿಗೆ, ಹಾಗೆಯೇ ಹೃತ್ಪೂರ್ವಕ ನಮಸ್ಕಾರಗಳಿಗೆ ಸ್ಪಂದಿಸದ ಜಿಡ್ಡು ಮುಖಗಳಿಗೆ ಒಂದು ದೊಡ್ಡ ನಮಸ್ಕಾರ ಹೊಡೆದು ದೂರವಿಡಿ. ಕೃತ್ರಿಮ ನಮಸ್ಕಾರಗಳು ಹೋಟೆಲಿನ ಸೋಡಾ ಹಾಕಿದ ಪ್ಲೇಟ್ ಊಟವಿದ್ದಂತೆ. ತಿನ್ನದಿರೆ ಹೊಟ್ಟೆ ಬಿಡುವುದಿಲ್ಲ. ತಿಂದರೆ ಹೊಟ್ಟೆ ತುಂಬುವುದಿಲ್ಲ; ಆರೋಗ್ಯಕರವೂ ಅಲ್ಲ. ಒಂದ್ನಿಮಿಷ, ಇವನೇನು ಮಹಾಕೊರಕ ಎಂದು ನನಗೊಂದು ದೊಡ್ಡ ನಮಸ್ಕಾರ ಹೊಡೆದುಬಿಟ್ಟೀರಿ! ನನ್ನ ಆಲೋಚನೆಗೆ ಮನಸ್ಸು ತೆರೆದಿಟ್ಟು ತಮ್ಮ ಅಮೂಲ್ಯ ಸಮಯವನ್ನು ವ್ಯಯ ಮಾಡಿದ್ದಕ್ಕಾಗಿ ನಿಮಗೆ ಕೃತಜ್ಞತೆ ಹೇಳುವುದು ಬೇಡವೆ? ಇಗೋ ನಿಮಗೊಂದು ನನ್ನ ಸಾಷ್ಟಾಂಗ ನಮಸ್ಕಾರ! ●



# 45ನೇ ಸ್ವಾತಂತ್ರ್ಯೋತ್ಸವ

## ಜನತೆಗೆ ನೀಡಿದ ಭರವಸೆ ಮಾರ್ಗದಲ್ಲಿ ಪ್ರಗತಿಯ ಮುನ್ನೋಟ

ಜನತೆಯ ಆಶೋತ್ತರಗಳನ್ನು ಪೂರೈಸುವುದೇ ಜನಪ್ರಿಯ ಸರ್ಕಾರದ ಕರ್ತವ್ಯ. ಈ ದಿಕ್ಕಿನಲ್ಲಿ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚು ಒತ್ತು ನೀಡುವುದರ ಜೊತೆಗೆ ರಾಜ್ಯ ಸರ್ಕಾರವು ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಗತಿಯನ್ನು ಸಾಧಿಸುತ್ತಿರುವುದು ಈ 45ನೇ ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ಒಂದು ಹೆಮ್ಮೆಯ ವಿಷಯವಾಗಿದೆ.

ಆಶ್ರಯ: ಈ ಯೋಜನೆಯಡಿಯಲ್ಲಿ ಸಮಾಜದ ದುರ್ಬಲ ವರ್ಗದವರಿಗೆ ನಿವೇಶನಗಳನ್ನು ಹಂಚಲು ಮತ್ತು ಮನೆಗಳನ್ನು ನಿರ್ಮಿಸಲು ನೆರವು ನೀಡಲಾಗುವುದು.

ಶುಶ್ರೂಷಾ: ಆರೋಗ್ಯವಂತ ಮಕ್ಕಳನ್ನು ರೂಪಿಸಲು ಕ್ರಾಂತಿಕಾರಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ ಹಾಗೂ ಆರು ತಿಂಗಳಿಗೊಮ್ಮೆ ಎಲ್ಲಾ ವ್ಯಕ್ತಿಗಳಿಗೂ ಉಚಿತ ವೈದ್ಯಕೀಯ ತಪಾಸಣೆ ಮಾಡುವ ಯೋಜನೆ.

ಅಕ್ಷಯ: ಗ್ರಾಮೀಣ ಪ್ರದೇಶದ ಮಕ್ಕಳನ್ನು ಉತ್ತಮ ವಿದ್ಯಾವಂತ ಪ್ರಜೆಗಳನ್ನಾಗಿ ರೂಪಿಸುವ ದೃಷ್ಟಿಯಿಂದ ಒಂದರಿಂದ ಏಳನೇ ತರಗತಿವರೆಗಿನ ಮಕ್ಕಳಿಗೆ ಪೌಷ್ಟಿಕವಾದ ಮಧ್ಯಾಹ್ನದ ಊಟ ನೀಡುವ ಕಾರ್ಯಕ್ರಮ.

ವಿಶ್ವ: ಪರಂಪರಾನುಗತವಾಗಿ ಬಂದ ಗ್ರಾಮೀಣ ಜನತೆಯ ಕೌಶಲ್ಯಗಳನ್ನು ಬಳಸಿಕೊಳ್ಳುವುದರ ಮೂಲಕ ಉದ್ಯೋಗ ಸೃಷ್ಟಿಸುವ ಹೊಸ ಯೋಜನೆ. ಗ್ರಾಮೀಣ ಉದ್ಯೋಗಾಧಾರಿತ ಆರ್ಥಿಕ ಅಭಿವೃದ್ಧಿಗೆ ಇದೊಂದು ದಿಟ್ಟ ಹೆಜ್ಜೆ. ಸರ್ಕಾರವು ಸಾಮಾಜಿಕ ಭದ್ರತಾ ನಿಧಿಯೊಂದನ್ನು ಸ್ಥಾಪಿಸಿದ್ದು ಮೊದಲನೆಯ ಹಂತದಲ್ಲಿ ಸುಮಾರು ಒಂದು ಲಕ್ಷ ನೇಕಾರರು ಮತ್ತು ಕುಶಲ ಕರ್ಮಿಗಳು ಈ ಯೋಜನೆಯ ಅನುಕೂಲಪಡೆಯುವರು.

ಡಾ. ಅಂಬೇಡ್ಕರ ಭವನ: ಅಂಬೇಡ್ಕರ ಭವನ ನಿರ್ಮಾಣ ಹಾಗೂ ದಲಿತ ವರ್ಗಗಳ ಪ್ರಗತಿಗೆ ಎಲ್ಲಾ ವಿಧದಲ್ಲೂ ಹೆಚ್ಚು ನೆರವು. ಪರಿಶಿಷ್ಟ ಜಾತಿ ಮತ್ತು ಜನಾಂಗದವರಿಗೆ ಮನೆಗಳನ್ನು ನೀಡಲು "ಲಕ್ಷ ಗೃಹ ನಿರ್ಮಾಣ" ಎಂಬ ಅಭೂತಪೂರ್ವ ಯೋಜನೆಯೊಂದನ್ನು ಹಮ್ಮಿಕೊಂಡಿದೆ.

ನೀರಾವರಿ ಮತ್ತು ವಿದ್ಯುತ್ ಉತ್ಪಾದನೆ: ಭಾರೀ ಮತ್ತು ಮಧ್ಯಮ ನೀರಾವರಿಗೆ 190 ಕೋಟಿ ರೂ. ಮೀಸಲು 69607 ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಿದ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿದೆ. ಹೆಚ್ಚು ವಿದ್ಯುತ್ ಉತ್ಪಾದಿಸಲು ಖಾಸಗಿ ಉದ್ದಿಮೆಗಳಿಗೆ ರಾಜ್ಯ ಸರ್ಕಾರವು ಹೆಚ್ಚಿನ ಸಹಕಾರ ಹಾಗೂ ಉತ್ತೇಜನ ನೀಡುವುದು.

ಆರಾಧನಾ: ಹರಿಜನ ಕೇರಿಗಳು, ಲಂಬಾಣಿ ತಾಂಡಾಗಳು, ಒಡ್ಡರ ಕೇರಿಗಳು ಇಂತಹ ಸ್ಥಳಗಳಲ್ಲಿ ದೇವಸ್ಥಾನಗಳು ಮತ್ತು ಪೂಜಾ ಮಂದಿರಗಳ ನಿರ್ಮಾಣಕ್ಕೆ ಜೀರ್ಣೋದ್ಧಾರ ಮಾಡಲು ಸರ್ಕಾರದ ನೆರವು.

ಅಕ್ರಮ ಸಾಗುವಳಿಯ ಸಕ್ರಮ: ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಿ ಹಕ್ಕುಪತ್ರ ನೀಡಲಾಗುವುದು. ಬಗರ್‌ಹುಕುಂ ಸಾಗುವಳಿ ಮಾಡುತ್ತಿದ್ದ ಗ್ರಾಮೀಣ ದುರ್ಬಲರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಜಮೀನನ್ನು ಸಕ್ರಮಗೊಳಿಸಲು ಕ್ರಾಂತಿಕಾರಿ ನಿಲುವನ್ನು ಸರ್ಕಾರ ತೆಗೆದುಕೊಂಡಿದೆ.

ಸಣ್ಣ ಕೈಗಾರಿಕೋದ್ಯಮ: ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ.

ಮಹಿಳೆಯರಿಗೆ ಮೀಸಲಾತಿ: ಸರ್ಕಾರಿ ಇಲಾಖೆ ಮತ್ತು ಸಾರ್ವಜನಿಕ ಉದ್ದಿಮೆಗಳಲ್ಲಿ ಶೇ. 30 ರಷ್ಟು ಮಹಿಳೆಯರಿಗಾಗಿ ಉದ್ಯೋಗ ಮೀಸಲಿಡಲು ಸರ್ಕಾರ ನಿರ್ಧರಿಸಲಾಗಿದೆ.

ಕುಡಿಯುವ ನೀರು: ಪ್ರತಿಯೊಂದು ಹಳ್ಳಿಗೂ ಕುಡಿಯುವ ನೀರು ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗುವುದು.

ಸಾಕ್ಷರತಾ ಕಾರ್ಯಕ್ರಮ: ಹಳ್ಳಿಗಳಲ್ಲಿ ಅವಿದ್ಯಾವಂತ ವಯಸ್ಕರಿಗೆ ವಿದ್ಯಾಭ್ಯಾಸ ಕಲಿಸುವ ಯೋಜನೆ.

ಐಕ್ಯತೆ ಕೋಮು ಸೌಹಾರ್ದತೆ, ಸಹಬಾಳ್ವೆ, ಸಮತಾವಾದ ಇವೆಲ್ಲವನ್ನು ಆಚರಣೆಗೆ ತರುವುದು ಸ್ವಾತಂತ್ರ್ಯದ ಗುರಿ. ಇಂದು ಇದೇ ನಮ್ಮೆಲ್ಲರ ಪ್ರತಿಜ್ಞೆಯಾಗಲಿ.

- ಕರ್ನಾಟಕ ವಾರ್ತೆ

# ಚರ್ಚಿಲ್ ಹಳ್ಳಿಯ ಹಿಮಕರಡಿಗಳು



● ಎಸ್.ರವಿಕುಮಾರ್ ಮಾಗಳ

ಹಿಮಕರಡಿಗಳು ಅದ್ಭುತ ಪ್ರಾಣಿಗಳು. ಅರ್ಧ ಟನ್ ತೂಗುವ ಈ ಮಹಾ ದೇಹದ ಪ್ರಾಣಿಗಳು ಎರಡು ಕಾಲಿನ ಮೇಲೆ ನಿಂತುಕೊಂಡರೆ ಹನ್ನೆರಡು ಅಡಿ ಎತ್ತರವಿರುತ್ತವೆ. ಹಿಮವಲಯದ ನಿಗೂಢ ಏಕಾಂತದಲ್ಲಿ ಕಾಲ ಕಳೆಯುವ ಈ ಜೀವಿಗಳಿಗೆ ತಮ್ಮದೇ ಆದ ಗಾಂಭೀರ್ಯ ಇದೆ. ಮಾಂಸಾಹಾರಿಗಳಾದ ಈ ಕರಡಿಗಳು ಪ್ರಾಣಿವರ್ಗದಲ್ಲೇ ಅತ್ಯಂತ ಬಲಶಾಲಿ ಎಂದು ಹೇಳಬಹುದು. ಸುಮಾರು 200 ಕೆ.ಜಿ. ತೂಕ ತೂಗುವ ಸೀಲ್ ಪ್ರಾಣಿಗಳನ್ನು ಇವು ಬೆಕ್ಕು ಇಲಿಯನ್ನು ಹಿಡಿದು ಹೊತ್ತೊಯ್ಯುವಂತೆ ನಿರಾಯಾಸವಾಗಿ ಒಯ್ಯುತ್ತವೆ. 500 ಪೌಂಡ್ ತೂಗುವ ಸೀಲ್ ಪ್ರಾಣಿಗೆ ಹಿಮಕರಡಿಗಳು ತಮ್ಮ ಮುಂಗೈಯಿಂದ ಒಂದೇ ಒಂದು ಹೊಡೆತ ಹೊಡೆದರೆ ಸಾಕು. ಸೀಲ್ ಪ್ರಾಣಿ ಕತ್ತರಿಸಿ ತುಂಡಾಗುತ್ತದೆ. ಇಷ್ಟೊಂದು ಅಗಾಧವಾದ ಪ್ರಾಣಿಯಾದರೂ ಹಿಮಕರಡಿ ಮಂಜಿನ ಮೇಲೆ ಜಾರಿಕೊಂಡು ಸಲೀಸಾಗಿ ಓಡಾಡುತ್ತದೆ. 35 ಮೈಲು ವೇಗದಲ್ಲಿ ಓಡುವ ಈ ಹಿಮಕರಡಿಗಳು ದಿನಕ್ಕೆ ಸಲೀಸಾಗಿ ನೂರು ಮೈಲುಗಳಷ್ಟು ದೂರವನ್ನು ಕ್ರಮಿಸುತ್ತವೆ. ಇವುಗಳ ವಾಸನಾಶಕ್ತಿ ಎಷ್ಟು ಚುರುಕಾದುದೆಂದರೆ ಒಂದು ಸೀಲ್ ಪ್ರಾಣಿಯ ಇರುವಿಕೆಯನ್ನು 20 ಮೈಲು ದೂರದಿಂದ ಕಂಡುಹಿಡಿಯಬಲ್ಲವು.

ಸೀಲ್ ಪ್ರಾಣಿಗಳೇ ಇವುಗಳ ಮುಖ್ಯ ಆಹಾರ. ಆದ್ದರಿಂದ ಸಮುದ್ರದ ಮೇಲೆ ಹಿಮಗಡ್ಡೆ ಗಟ್ಟಿದಾಗ ಸೀಲ್ ಪ್ರಾಣಿಗಳು ಹಿಮದ ಬಿರುಕುಗಳಲ್ಲಿ ಸೇರಿರುತ್ತವೆ. ಅವುಗಳು ಉಸಿರಾಡಲು ಮೇಲೆ ಬಂದಾಗ ಈ ಹಿಮಕರಡಿಗಳು ಅವುಗಳನ್ನು ಬೇಟೆಯಾಡುತ್ತವೆ. ನೀರೊಳಗೂ ಇದು ಸೀಲ್ ಪ್ರಾಣಿಯಷ್ಟೇ ವೇಗವಾಗಿ ಈಜುತ್ತದೆ. ಹೀಗಾಗಿ ಸೀಲ್ ಪ್ರಾಣಿಗಳಿಗೆ ನೀರಿನಲ್ಲಿದ್ದರೂ ಹಿಮಕರಡಿಗಳ ಭಯ ತಪ್ಪಿದ್ದಲ್ಲ. ಇದೆಲ್ಲಕ್ಕಿಂತ ಮುಖ್ಯವಾಗಿ ಹಿಮದಷ್ಟೇ ಬೆಳ್ಳನೆಯ ಕೂದಲುಳ್ಳ ಈ ಜೂಲು ಕರಡಿ ಅತ್ಯಂತ ಸುಂದರವಾದ ಪ್ರಾಣಿ. ಪ್ರಪಂಚದಲ್ಲಿ ಇಂದು ಇವುಗಳ ಸಂಖ್ಯೆ ಕೇವಲ 12,000.

### ಸಹಬಾಳ್ವೆ

ಈ ಹಿಮಕರಡಿಗಳನ್ನು ಕೆನಡಾದ ಚರ್ಚಿಲ್ ಗ್ರಾಮದವರಷ್ಟು ಚೆನ್ನಾಗಿ ಬಲ್ಲವರು ಬೇರೆ ಯಾರೂ ಇಲ್ಲ. ಅನೇಕ ದಶಕಗಳಿಂದ ಈ ಹಿಮಕರಡಿಗಳೊಂದಿಗೆ ಸಹಬಾಳ್ವೆ ನಡೆಸುತ್ತಾ ಅವುಗಳೊಡನೆ ಜಗಳವಾಡುತ್ತಾ ಬಂದಿರುವ ಈ ಚರ್ಚಿಲ್ ಹಳ್ಳಿಯವರ ಕತೆ ತುಂಬಾ ರೋಚಕವಾಗಿದೆ.

ಚರ್ಚಿಲ್ ಹಳ್ಳಿಯಲ್ಲಿ ಮರೀಸ್ ಎನ್ನುವವ ಒಂದು ದಿನ ಬೆಳಿಗ್ಗೆ ತನ್ನ ಮನೆಯಿಂದ ಹೊರಗೆ ಇಣುಕಿದಾಗ ಒಂದು ದೊಡ್ಡ ಹಿಮಕರಡಿ ಅಕ್ಕ-

ಪಕ್ಕದ ಮನೆಯುವರ ಬಾಗಿಲು ತಟ್ಟುತ್ತಾ ಒಳಗೆ ನುಗ್ಗಲು ಜಾಗ ಹುಡುಕುತ್ತಿತ್ತು. ಮರೀಸ್ ಆ ಹಳ್ಳಿಗೆ ಹೊಸಬ. ಹಿಮಕರಡಿಯನ್ನು ನೋಡಿ ಗಾಬರಿಯಿಂದ ಸಾರ್ವಜನಿಕ ಟೆಲಿಫೋನ್ ಬೂತಿಗೆ ಓಡಿಹೋಗಿ ಟೆಲಿಫೋನ್ ಆಪರೇಟರ್‌ಗೆ ಫೋನ್ ಮಾಡಿ ರಕ್ಷಣೆ ಕೇಳಿಕೊಂಡ. ಹಿಮಕರಡಿ ಅಲ್ಲಲ್ಲಿ ಅಲೆದಾಡಿ ಕೊನೆಗೆ ಮರೀಸ್ ಇದ್ದ ಟೆಲಿಫೋನ್ ಬೂತಿನ ಬಳಿಗೆ ಬಂದು ಮರೀಸ್‌ನನ್ನು ಕುತೂಹಲದಿಂದ ನೋಡುತ್ತ ನಿಂತುಕೊಂಡಿತು. ಮರೀಸ್ ಹೌಹಾರಿ ಮತ್ತೆ-ಮತ್ತೆ ಡಯಲ್ ಮಾಡುತ್ತ ಫೋನಿನಲ್ಲಿ ಅರಚಾಡ ತೊಡಗಿದ. ಹಿಮಕರಡಿಗೆ ಇನ್ನೂ ಕುತೂಹಲವುಂಟಾಗಿ ಹತ್ತಿರ ಬಂದು ಮರೀಸನ ಗೋಳನ್ನು ಗಾಜಿನ ಕಿಟಕಿಯಿಂದ ನೋಡುತ್ತ ನಿಂತೇ ಇತ್ತು. ಅಷ್ಟರಲ್ಲಿ ವನ್ಯಮೃಗ ಸಂರಕ್ಷಣಾಧಿಕಾರಿಗಳು ಬಂದು ಕರಡಿಯನ್ನು ಓಡಿಸಿ ಟೆಲಿಫೋನ್ ಬೂತಿನೊಳಗೆ ಬಂದಿಯಾಗಿದ್ದ ಮರೀಸ್‌ನನ್ನು ರಕ್ಷಿಸಿದರು.

ಆ ಕರಡಿ ಅಲ್ಲಿಂದ ನೇರವಾಗಿ ಚರ್ಚಿಲ್ ಊರಿನ ಒಳಗೇ ಬಂದು ಅಡ್ಡಾಡತೊಡಗಿತು. ಒಂದಷ್ಟು ಜನ ಗುಂಪುಗೂಡಿಕೊಂಡು ಆಟವಾಡುತ್ತಿದ್ದಲ್ಲಿಗೆ ಹೋಗಿ ಅವರ ಚೆಂಡನ್ನು ಹಿಡಿದುಕೊಂಡಿತು. ಆಟಗಾರರು ಕರಡಿಯನ್ನು ಕೂಗಾಡಿ ಓಡಿಸಿ, ಚೆಂಡನ್ನು ಕಿತ್ತುಕೊಂಡರು. ಅಲ್ಲಿಂದ ಆ ಕರಡಿ ಲೀಜನ್ ಹಾಲ್‌ನ ಬಳಿಯಿದ್ದ ಒಬ್ಬರ ಮನೆಗೆ ಊಟದ ಸಮಯಕ್ಕೆ ಸರಿಯಾಗಿ ನುಗ್ಗಿ ಊಟದ ಮೇಜಿನ ಮೇಲಿದ್ದ ತಿಂಡಿಯನ್ನೆಲ್ಲಾ ತಿನ್ನತೊಡಗಿತು. ಮನೆಯವರೆಲ್ಲಾ ಸೇರಿ ಆ ಅಪರಿಚಿತ ಅತಿಥಿಯನ್ನು ಬೆತ್ತಗಳಿಂದ ಹೊಡೆದು ಓಡಿಸಿದರು.

ವರ್ಷದಲ್ಲಿ ಕೆಲವು ತಿಂಗಳು ಈ ರೀತಿ ಇದ್ದಕ್ಕಿದ್ದಂತೆ ಹಿಮಕರಡಿಗಳ ಕಾಟ ಚರ್ಚಿಲ್ ಗ್ರಾಮವಾಸಿಗಳಿಗೆ ತಪ್ಪಿದ್ದಲ್ಲ. ಹುಡುಗರು, ಮಕ್ಕಳು, ನಾಯಿಗಳು, ಫೋಟೋ ತೆಗೆಯುವವರು ಗುಂಪು ಕೂಡಿಕೊಂಡು ಈ ಹಿಮಕರಡಿಗಳನ್ನು ಊರಿನಿಂದ ಹೊರಗೆ ದಬ್ಬುವ ದೃಶ್ಯ ಸರ್ವೇಸಾಮಾನ್ಯ. ಇಷ್ಟೆಲ್ಲ ಕಾಟವಿದ್ದರೂ ಚರ್ಚಿಲ್ ಹಳ್ಳಿಯವರು ಈ ಸುಂದರ ಪ್ರಾಣಿಗಳನ್ನು ಅವುಗಳ ಸಣ್ಣ-ಪುಟ್ಟ ಮರಿಗಳನ್ನು ಕೊಲ್ಲಲು ಪ್ರಯತ್ನಿಸುವುದಿಲ್ಲ.

ಮಧ್ಯ ಕೆನಡಾದಲ್ಲಿರುವ ಈ ಚರ್ಚಿಲ್ ಊರಿನಲ್ಲಿ ತಿರುಗಾಡುವಷ್ಟು ಹಿಮಕರಡಿಗಳು ಇಂದು ಪ್ರಪಂಚದಲ್ಲಿ ಬೇರೆಲ್ಲಿಯೂ ಇಲ್ಲ. ಧ್ರುವವಲಯದ ಬಿರುಗಾಳಿ ಸಮುದ್ರದ ಹಿಮಕವಚವನ್ನು ದಕ್ಷಿಣಕ್ಕೆ ತಳ್ಳುವುದರಿಂದ ಅದರೊಡನೆಯೇ ಈ ಹಿಮಕರಡಿಗಳೂ ಕೆನಡಾದ ದಕ್ಷಿಣಕ್ಕೆ ವಲಸೆ ಬರತೊಡಗುತ್ತವೆ. ಕೆಳಗೆ ಹಡ್ಸನ್ ಕೊಲ್ಲಿಯಲ್ಲಿ ಇವು ಸೀಲ್ ಪ್ರಾಣಿಗಳನ್ನು ಬೇಟೆಯಾಡಲು ಬರುತ್ತವೆ. ಅವುಗಳ ಮುಖ್ಯ ವಲಸೆಯ ಮಾರ್ಗದಲ್ಲೇ ಚರ್ಚಿಲ್ ಗ್ರಾಮ ಇರುವುದರಿಂದ 1600 ಮನೆಗಳಿರುವ ಈ ಊರು ಕೆಲವು ತಿಂಗಳುಗಳವರೆಗೆ ಹಿಮಕರಡಿಗಳ ಕಾಟಕ್ಕೆ ತುತ್ತಾಗುತ್ತದೆ. ಅತ್ಯಂತ ಬಲಶಾಲಿಯೂ, ಅಪಾಯಕಾರಿಯೂ ಆಗಿರುವ ಈ ಮಾಂಸಾಹಾರಿ ಹಿಮಕರಡಿಗಳು ಈ ಊರಿನ ಬೀದಿ ಬೀದಿಗಳಲ್ಲಿ ಕುತೂಹಲದಿಂದ ತಿರುಗಾಡತೊಡಗುತ್ತವೆ. ಊರಿನ ಜನರಿಗೆಲ್ಲಾ ಈ ಕರಡಿಗಳನ್ನು ಓಡಿಸುವುದೇ ಒಂದು ಸಂಭ್ರಮದ ಉದ್ಯೋಗವಾಗುತ್ತದೆ.

### ಪ್ರಾಣ ಹಾನಿ

1966ರಿಂದ ಇಲ್ಲಿಯವರೆಗೆ ಕೇವಲ ಎರಡೇ ಎರಡು ಬಾರಿ ಹಿಮಕರಡಿಗಳು ಜನರನ್ನು ಕೊಂದಿವೆ. ಒಮ್ಮೆ ಒಬ್ಬ ಹನ್ನೆರಡು ವರ್ಷದ ಹುಡುಗನನ್ನು ಒಂದು ಕರಡಿ ಕಚ್ಚಿ ಕೊಂದು ಹಾಕಿತು. ಆ ಕರಡಿಯನ್ನು ಕೊಂದ ನಂತರ ಪರೀಕ್ಷಿಸಿದಾಗ ಕರಡಿಗೆ ಯಾರೋ ಎರಡು ಗುಂಡು ಹೊಡೆದು ಗಾಯ ಮಾಡಿದ್ದು ತಿಳಿಯಿತು. ಇನ್ನೊಂದು ಸಲ ಕರಡಿಯೊಂದು ಬಂಡೆಗಳ ಮರೆಯಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದಾಗ ಮೂರು ಮಂದಿ ವಿದ್ಯಾರ್ಥಿಗಳು ಬಂಡೆಯ ಮೇಲಿನಿಂದ ಅದರ ಬೆನ್ನಿನ ಮೇಲೆ ಜಿಗಿದಿದ್ದರು. ನಿದ್ದೆ ಮಾಡುತ್ತಿದ್ದ ಕರಡಿ ಹಠಾತ್ತಾಗಿ ಎಚ್ಚರಗೊಂಡು ಕೋಪದಿಂದ ಒಬ್ಬ ಹುಡುಗನನ್ನು ಕಚ್ಚಿಕೊಂಡು ಅಲ್ಲಿಂದ ಓಡಿಹೋಯಿತು. ಇದಿಷ್ಟನ್ನು ಬಿಟ್ಟರೆ ಕರಡಿಗಳಿಂದ ಪ್ರಾಣಹಾನಿಯಾದ ಪ್ರಸಂಗ

ಚರ್ಚಿಲ್ ಊರಿನಲ್ಲಿ ತೀರಾ ಕಡಿಮೆ.

ಈ ಹಿಮಕರಡಿಗಳು ವಾಸ್ತವವಾಗಿ ತೀರಾ ಅಪಾಯಕಾರಿಯಾದ ಪ್ರಾಣಿಗಳು. ಅದರಲ್ಲೂ ಮರಿಗಳಿರುವ ತಾಯಿಯಾದರಂತೂ ಯಾವುದಕ್ಕೂ ಹೆದರುವುದಿಲ್ಲ. ಒಮ್ಮೆ ವಿಮಾನ ನಿಲ್ದಾಣದ ಅಧಿಕಾರಿಯೊಬ್ಬ ವಿಮಾನಕ್ಕೆ ಮುಂಬರಲು ದಾರಿ ನಿರ್ದೇಶಿಸುತ್ತ ಹಿಂದು ಹಿಂದಕ್ಕೆ ಬರುತ್ತಿದ್ದ. ಅಲ್ಲೊಂದು ಪೊದೆಯಲ್ಲಿ ತಾಯಿ ಹಿಮಕರಡಿಯೊಂದು ತನ್ನ ಮರಿಯೊಂದಿಗೆ ಕುಳಿತಿತ್ತು. ಹಿಂದು-ಹಿಂದಕ್ಕೆ ಬರುತ್ತಿದ್ದ ಆತನನ್ನು ನೋಡಿ ತಾಯಿ ಕರಡಿ ಮೇಲೆರಗಿ ಬಂತು. ಇದನ್ನು ವಿಮಾನದ ಪೈಲಟ್ ನೋಡಿ, ದಾರಿ ನಿರ್ದೇಶಿಸುತ್ತಿದ್ದವನಿಗೆ ''ನಿನ್ನ ಹಿಂದೊಂದು ಹಿಮಕರಡಿ ಬರುತ್ತಿದೆ'' ಎಂದು ಕೂಗಿದ. ಆದರೆ ಅದು ಅವನಿಗೆ ಕೇಳಲಿಲ್ಲ. ಆಗ ಜೋರಾಗಿ ವಿಮಾನವನ್ನು ಶಬ್ದ ಮಾಡುತ್ತ ಅವನತ್ತಲೇ ನಡೆಸಿದ. ವಿಮಾನ ಮೈಮೇಲೆ ಬರುತ್ತದೆಂದು ಹೆದರಿ ನಿರ್ದೇಶಕ ಹಿಂದಿರುಗಿ ಓಡತೊಡಗಿದ. ಕರಡಿ ವಿಮಾನದ ಆರ್ಭಟಕ್ಕೆ ಹೆದರಿ ಮರಿಗಳನ್ನು ಕರೆದುಕೊಂಡು ಅವನಿಗಿಂತ ಮುಂದೆ ಓಡಿ ಪರಾರಿಯಾಯಿತು.

ಚರ್ಚಿಲ್ ಊರಿನ ಜನರಾದರೋ ಈ ಹಿಮಕರಡಿಗಳ ಬಗ್ಗೆ ಬಹಳ ತಾಳ್ಮೆ ಹೊಂದಿದ್ದಾರೆ. ಅವುಗಳ ಕಾಟಕ್ಕೆ ಸಿಕ್ಕವರೂ ಸಹ ''ಎಲ್ಲೋ ಒಮ್ಮೊಮ್ಮೆ ಅಡುಗೆ ಮನೆಗೆ ನುಗ್ಗಿ ತಿಂಡಿ ತಿಂದು ಓಡಿ ಹೋಗುತ್ತವೆ ಅಷ್ಟೇ'' ಎಂದು ಅವುಗಳ ಕಾಟವನ್ನು ಕ್ಷಮಿಸುತ್ತಾರೆ.

ವೆಬರ್ ಎನ್ನುವ ವ್ಯಕ್ತಿಯ ಮನೆ ಪದೇ-ಪದೇ ಕರಡಿಗಳ ಹಾವಳಿಗೆ ತುತ್ತಾಗಿತ್ತು. ಆದರೆ ಆತನಿ



ಗೇನೂ ಕರಡಿಗಳ ಬಗ್ಗೆ ಕೋಪವಿಲ್ಲ. ''ಅವುಗಳಿಂದೇನೂ ಅಂಥ ತೊಂದರೆಯಿಲ್ಲ. ಆದರೆ ಕಿಟಕಿ ಮುರಿದು ಒಳಗೆ ಬರುವ ಈ ಹಿಮಕರಡಿಗಳನ್ನು ಓಡಿಸಿದಾಗ ಬಂದ ದಾರಿಯಲ್ಲೇ ಹೋದರೆ ತುಂಬಾ ಉಪಕಾರವಾಗುತ್ತದೆ. ಆದರೆ ಅವು ಹೋಗುತ್ತ ಬೇರೊಂದು ಕಿಟಕಿಯನ್ನೋ-ಬಾಗಿಲನ್ನೋ ಮುರಿದು ಓಡಿ ಹೋಗುತ್ತವೆ. ಪ್ರತಿ ಸಲ ಕರಡಿ ಮನೆಗೆ ನುಗ್ಗಿದಾಗಲೂ ನಾನು ಎರಡೆರಡು ಕಡೆ ದುರಸ್ತಿ ಮಾಡಬೇಕಾಗುತ್ತದೆ. ಅದೇ ನನಗೆ ಬೇಸರದ ವಿಚಾರ'' ಎನ್ನುತ್ತಾನೆ.

ಚರ್ಚಿಲ್ ಊರಿನ ಮುನಿಸಿಪಾಲಿಟಿ ಸಹ ಈ ಕರಡಿಗಳನ್ನು ಉಚ್ಚಾಟನೆ ಮಾಡಲು ಯೋಚಿಸುವುದಿಲ್ಲ. ಏಕೆಂದರೆ ಕರಡಿಗಳ ಕಾಟವೇ ತಮ್ಮೂರಿನ ವೈಶಿಷ್ಟ್ಯವಾಗಿರುವುದರಿಂದ ಅದನ್ನು ಕಳೆದುಕೊಳ್ಳಲು ಅವರು ತಯಾರಿಲ್ಲ. ಕರಡಿಗಳೂ-ಮನುಷ್ಯರೂ ಸಹಬಾಳ್ವೆ ನಡೆಸಲು ಸಾಧ್ಯವೆಂದು ಅವರು ನಂಬಿದ್ದಾರೆ.

ಆದರೆ ಈ ಊರಿನ ಕಸದ ತೊಟ್ಟಿಗಳೇ ನಿಜವಾಗಿಯೂ ಇಲ್ಲಿಯ ಮುನಿಸಿಪಾಲಿಟಿಗೆ ಸಮಸ್ಯೆಯಾಗಿರುವುದು. ಈ ಹಿಮಕರಡಿಗಳಿಗೆ ಕಸದ ತೊಟ್ಟಿಗಳೆಂದರೆ ಪಂಚಪ್ರಾಣ. ಅದರಲ್ಲಿರುವ ನಾನಾ ಬಗೆಯ ಹಳಸಿದ ಪದಾರ್ಥಗಳನ್ನು ತಿನ್ನಲು ಅವು ತೊಟ್ಟಿಗಳನ್ನು ಹೊತ್ತು ಒಯ್ದು ಎಲ್ಲಾ ಕಡೆಯೂ ಸುರಿದು ಊರೆಲ್ಲಾ ಹೊಲಸು ಮಾಡುತ್ತವೆ. ಅನೇಕ ಸಲ ಕಸ ಹೊರುವ ಟ್ರಕ್ಕುಗಳ ಮೇಲೆಲ್ಲಾ ಕರಡಿಗಳು ಹತ್ತಿ ಪೌರಕಾರ್ಮಿಕರ ಕೆಲಸಕ್ಕೆ ತೊಂದರೆ ಉಂಟುಮಾಡಿದ ಪ್ರಸಂಗಗಳುಂಟು. ತೀರಾ ತೊಂದರೆ ಉಂಟುಮಾಡುವ ಕರಡಿಗಳಿದ್ದರೆ ಮಾತ್ರ ಅವನ್ನು ಹಿಡಿದು ಬಹುದೂರ ಕೊಂಡೊಯ್ಯುವ ಏರ್ಪಾಟು ಮಾಡಿದ್ದಾರೆ.

ಚರ್ಚಿಲ್ ಊರಿನ ಜನ ಹೊರಗಿನಿಂದ ಬಂದವರ ಬಳಿ ಕರಡಿಗಳ ಕಾಟದ ಗೋಳನ್ನು ಹೇಳಿಕೊಳ್ಳುತ್ತಾರೆ. ಅವರಿಂದ ಬರುವ ಸಲಹೆಗಳನ್ನೆಲ್ಲಾ ಸಮಾಧಾನದಿಂದ ಕೇಳುತ್ತಾರೆ. ಆದರೆ ಕರಡಿಗಳ ಮೂಲೋಚ್ಚಾಟನೆ ಮಾಡಲು ಅವರು ಯಾವುದೇ ಗಂಭೀರ ಪ್ರಯತ್ನ ಮಾಡುವುದಿಲ್ಲ. ಏಕೆಂದರೆ ಕರಡಿಗಳು ಇಲ್ಲದೆ ಹೋದರೆ ಅವರ ಬಳಿ ಹೇಳಿಕೊಳ್ಳಲು ವಿಷಯಗಳೇ ಇರುವುದಿಲ್ಲ.

● (ಆಧಾರ : ಅದ್ಭುತ ಜಗತ್ತು)



**19**40ರ ಜುಲೈನಲ್ಲಿ ಜಾನ್ ಸಿಗ್ಮಂಡ್ 89 ಗಂಟೆ 48 ನಿಮಿಷಗಳ ಕಾಲ ಬಿಡುವಿಲ್ಲದೆ ಈಜಾಡಿದನು. ಈ ಸಮಯದಲ್ಲಿ ಆತ ಮಿಸಿಸಿಪ್ಪಿ ನದಿಯಲ್ಲಿ 292 ಮೈಲು ದೂರವನ್ನು ಈಜಿದನು.

---

**ನೆ**ಪೋಲಿಯನ್‌ಗೆ ಚಿಕಿತ್ಸೆ ಮಾಡಿದ ಡಾ। ಬಾರನ್ ಡೊಮಿನಿಕ್ ಜೀನ್‌ಲಾರಿ ಎಂಬ ವೈದ್ಯನು 1792ರಲ್ಲಿ ನಡೆದ ಯುದ್ಧವೊಂದರಲ್ಲಿ ಯುದ್ಧ ಭೂಮಿಯಿಂದ ಗಾಯಾಳುಗಳನ್ನು ಸಾಗಿಸಲು ಮೊಟ್ಟ ಮೊದಲಿಗೆ ಕುದುರೆಯಿಂದ ಎಳೆಯುವ ಅಂಬುಲೆನ್ಸ್ ಮತ್ತು ಸ್ಟ್ರೆಚರ್‌ನ್ನು ಸಿದ್ಧ ಮಾಡಿದ್ದನು. 1796-97ರಲ್ಲಿ ನೆಪೋಲಿಯನ್‌ನ ಇಟಾಲಿಯನ್ ದಂಡಯಾತ್ರೆಯಲ್ಲಿ ಈ ಅಂಬುಲೆನ್ಸ್ ಉಪಯೋಗವಾಯಿತು.

---

**ಮೊ**ಟ್ಟ ಮೊದಲ ಅಂತಾರಾಷ್ಟ್ರೀಯ ಬೆಲೂನ್ ಪಂದ್ಯ 1906ರಲ್ಲಿ ಪ್ಯಾರಿಸ್‌ನಲ್ಲಿ ನಡೆಯಿತು. ಏಳು ದೇಶಗಳಿಂದ 15 ಮಂದಿ ಅಭ್ಯರ್ಥಿಗಳು ಪಾಲ್ಗೊಂಡಿದ್ದರು. 22 ಗಂಟೆ 28 ನಿಮಿಷಗಳ ಕಾಲ ಗಾಳಿಯಲ್ಲಿ ತೇಲಾಡಿ 395 ಮೈಲು ಪ್ರಯಾಣಿಸಿ, ಇಂಗ್ಲೆಂಡ್‌ನಲ್ಲಿಯ ಯಾರ್ಕ್‌ಶೈರ್‌ನಲ್ಲಿ ನೆಲದ ಮೇಲೆ ಇಳಿದ ಒಬ್ಬ ಅಮೇರಿಕನ್ ಈ ಪಂದ್ಯದಲ್ಲಿ ವಿಜಯಿಯಾದನು!

● ಸಂಗ್ರಹ : ಉಮಾ

## ಜೀವನದರ್ಶನ

43

ಕೆ.ಟಿ. ಪಾಂಡುರಂಗಿ

# ನೆರೆಹೊರೆಯವರು

ಸಾಮಾನ್ಯವಾಗಿ ಅಕ್ಕಪಕ್ಕದ ಮನೆಗಳಲ್ಲಿ ಇರುವವರು ಅಥವಾ ಒಂದೇ ಬೀದಿಯಲ್ಲಿ ಇರುವವರು ಇವರಿಗೆ ನೆರೆಹೊರೆಯವರು ಎನ್ನುತ್ತಾರೆ. ನೆರೆಹೊರೆ ಎಂಬ ಮಾತಿನಲ್ಲಿ ನೆರೆ ಅಂದರೆ ಹತ್ತಿರ ಅಕ್ಕಪಕ್ಕದವರು ಹತ್ತಿರ ಇರುವವರು ಎಂಬುದೇನೋ ಸರಿಯೇ. ಆದರೆ ಹೊರೆ ಎಂಬ ಮಾತಿನ ಅಭಿಪ್ರಾಯ ಸ್ಪಷ್ಟವಾಗುವುದಿಲ್ಲ. ಹೊರೆ ಎಂಬುದು ಹೊರಗೆ ಎಂಬುದರ ಸಂಕ್ಷಿಪ್ತರೂಪ ಎಂದರೆ ಅದು ಅಕ್ಕಪಕ್ಕದವರು ಎಂಬ ಒಟ್ಟು ಅರ್ಥಕ್ಕೆ ಹೊಂದಿಕೆಯಾಗುವುದಿಲ್ಲ. ಹೊರೆ ಅಂದರೆ ಭಾರ ಎಂದು ಅರ್ಥ ಮಾಡಿದರೆ ಅದು ನಿಂದಾತ್ಮಕವಾಗುತ್ತದೆ. ನೆರೆಹೊರೆಯವರು ಪರಸ್ಪರ ಪ್ರೀತಿ ಸಹಕಾರಗಳಿಂದ ಇರಬೇಕಾದವರು. ಕೆಲವು ಸಲ ಅವರು ಹೊರೆಯಾದರೂ ಇದನ್ನು ಹೆಚ್ಚಿಗೆ ಬೆಳೆಸದೆ ಪ್ರೀತಿ ಸಹಕಾರಗಳ ಕಡೆಗೆ ತಿರುಗಿಸುವದೇ ವಿವೇಕ. ಇಲ್ಲವಾದರೆ ಇಬ್ಬರಿಗೂ ವಿನಾಕಾರಣ ತೊಂದರೆಯಾಗುವುದು.

ಹಿಂದಿನ ಕಾಲದ ಗ್ರಾಮ ಜೀವನದ ಪದ್ಧತಿಯಲ್ಲಿ ನೆರೆಹೊರೆಯವರು ಬಹಳ ಸಹಕಾರದಿಂದ ಇರುತ್ತಿದ್ದರು. ಪರಸ್ಪರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಿದ್ದರು. ಹಬ್ಬ ಹುಣ್ಣಿಮೆಗಳಲ್ಲಿ ಪರಸ್ಪರ ಸೇರಿ ಸಂತೋಷಪಡುತ್ತಿದ್ದರು. ಇಂದಿನ ನಗರ ಜೀವನದಲ್ಲಿ ಪರಸ್ಪರ ಉದಾಸೀನರಾಗಿರುವುದೇ ಹೆಚ್ಚು. ಇದಕ್ಕೆ ಮುಖ್ಯ ಕಾರಣ ಹಿಂದಿನ ಕಾಲದಲ್ಲಿ ದಿನ ನಿತ್ಯದ ಅನೇಕ ವಿಷಯಗಳಲ್ಲಿ ಪರಸ್ಪರ ಸಹಕಾರದ ಅಗತ್ಯವಿತ್ತು. ಆದರೆ ಇಂದು ಅಂಥ ಅಗತ್ಯ ಬಹಳ ಕಡಿಮೆ. ಅಲ್ಲದೆ ಹಿಂದಿನ ಕಾಲದಲ್ಲಿ ಜಮೀನು ವ್ಯಾಪಾರಗಳಿಗೆ ಮನೆಯಿಂದ ದೂರ ಹೋಗುವವರನ್ನು ಬಿಟ್ಟರೆ ಆಯಾ ಕುಟುಂಬದವರು ಮನೆಯಲ್ಲಿಯೇ ಹೆಚ್ಚು ಕಾಲ ಕಳೆಯುತ್ತಿದ್ದರು. ಆದರೆ ಇಂದು ಎಲ್ಲರ ಕಾಲವೂ ಮನೆಯ ಹೊರಗೇ ಹೆಚ್ಚು ವ್ಯಯವಾಗುವುದು.

ಹಿಂದಿನ ಕಾಲದಲ್ಲಿ ಈ ನೆರೆಹೊರೆಯ ಸಂಬಂಧ ಕೇವಲ ಕಾರ್ಯ ಕಾಲದ ಸಂಬಂಧವಾಗಿರದೆ ಪರಸ್ಪರ ಪ್ರೀತಿ ವಿಶ್ವಾಸ ಮತ್ತು ಸಹಕಾರಗಳ ಮಾನವೀಯ ಸಂಬಂಧವೂ ಆಗಿತ್ತು.

ಹಿಂದಿನ ಕಾಲದಲ್ಲಿ ನೆರೆಹೊರೆಯವರು ಜಗಳಾಡುವ ಪ್ರಸಂಗಗಳೂ ಆಗಾಗ ಕಂಡು ಬರುತ್ತಿದ್ದವು. ಆದರೆ ಇಂದು ಜಗಳವೂ ಇಲ್ಲ ಸ್ನೇಹವೂ ಇಲ್ಲ ಎನ್ನುವ ಉದಾಸೀನ ಸಂಬಂಧವೇ ನೆರೆಹೊರೆಯ ಸಂಬಂಧವಾಗಿದೆ. ಇಂದಿನ ಮನೆಗಳಲ್ಲಿ ಮಕ್ಕಳ ಸಂಖ್ಯೆ ಕಡಿಮೆಯಾಗಿರುವುದೂ ಇದಕ್ಕೆ ಕೆಲಮಟ್ಟಿಗೆ ಕಾರಣವಾಗಿದೆ. ಹೆಣ್ಣು ಮಕ್ಕಳೂ ಆಫೀಸುಗಳಿಗೆ ಹೋಗಿ ಬಹುಕಾಲ ಮನೆಯಲ್ಲಿ ಇಲ್ಲದಿರುವುದೂ ಕಾರಣವಾಗಿದೆ.

ಜೀವನದ ರೀತಿ ಮತ್ತು ಪರಿಸ್ಥಿತಿ ಬದಲಾದಂತೆ ಕೆಲವು ಬದಲಾವಣೆಗಳಾಗುವುದು ಅನಿವಾರ್ಯ. ಆದರೆ ಅನೂಚಾನವಾಗಿ ಬಂದ ಮಾನವೀಯ ಸಂಬಂಧದ ಕೆಲವು ಅವಕಾಶಗಳನ್ನು ಪ್ರಯತ್ನ ಪೂರ್ವಕವಾಗಿ ಉಳಿಸಿಕೊಳ್ಳುವದು ಅಗತ್ಯ. ಇದರಿಂದ ಜೀವನವು ಉಲ್ಲಾಸಮಯವಾಗುವುದು. ನೆರೆಹೊರೆಯವರು ಪರಸ್ಪರ ಅಪರಿಚಿತರಂತೆ ವರ್ತಿಸಿದರೆ ಜೀವನವು ಬರಡಾಗುವುದು. ●

# ತೆರಿಗೆ

ಮೂಲ : ಎಸ್.ವೈ.ಅಗ್ನಾನ್
ಅನುವಾದ : ಕೆ.ಎಂ.ಮ್ಯಾಥ್ಯೂ



ಅಗ್ನಾನ್ (1888-1970)
ಹಿಬ್ರೂ ಭಾಷೆಯ ಜಗತ್ಪ್ರಸಿದ್ಧ ಕಥೆಗಾರ. 1966ರ ನೊಬೆಲ್ ಬಹುಮಾನವೂ ಇವರಿಗೆ ಸಂದಿದೆ. 'ಬುಕ್ ಆಫ್ ದಿ ಸ್ಟೇಟ್' ಅಗ್ನಾನ್ ಬರೆದ ಸ್ವಾರಸ್ಯಕರ ರಾಜಕೀಯ ವಿಡಂಬನೆ. ಈ ಪುಸ್ತಕದಿಂದಲೆ ಆಯ್ದ ಭಾಗವಾದ ಈ 'ತೆರಿಗೆ.' ವ್ಯವಸ್ಥೆಯೊಂದರ ಕಾರ್ಯನಿರ್ವಹಣೆಯ ಶೈಲಿಯನ್ನು ಸಮರ್ಥವಾಗಿ ವಿಡಂಬಿಸುತ್ತದೆ.

(News from Israel ನಿಂದ ಸಾಭಾರ)

ಅದೊಂದು ದಿನ ಸದನದ ಅಧಿವೇಶನ ಮುಗಿಸಿದ ಹಿರಿಯ ಸದಸ್ಯರೊಬ್ಬರು ತಮ್ಮ ಊರುಗೋಲನ್ನು ಮರೆತು ಹೊರ ನಡೆದರು. ಮನೆಯನ್ನು ತಲುಪಿದ ಕೆಲವೇ ನಿಮಿಷಗಳಲ್ಲಿ ಊರುಗೋಲು ಸ್ವಸ್ಥಾನದಲ್ಲಿ ಇಲ್ಲದ್ದರ ಅರಿವು ಅವರಿಗಾಯಿತು. ಮೊದಲ ಬಾರಿ ಈ ರೀತಿ ಸದನದಲ್ಲಿ ಊರುಗೋಲನ್ನು ಮರೆತು ಬಂದುದಕ್ಕೆ ಸದಸ್ಯರು ತಮ್ಮ ಮೇಲೆ ತಾವೇ ರೇಗಿಕೊಂಡರು. ಆದರೆ ಹೆಚ್ಚು ರೇಗಿಕೊಳ್ಳಲು ಅವರಿಗೆ ವೇಳೆಯಾದರೂ ಎಲ್ಲಿತ್ತು? ಏಕೆಂದರೆ ಅವರಿಗಾಗಿ ಮೇಜಿನ ಮೇಲೆ ಊಟ ಕಾದಿತ್ತಲ್ಲ! ಊರುಗೋಲು ಮರೆತ ಸಿಟ್ಟನ್ನು ತಮ್ಮೊಳಗೇ ಅದುಮಿಟ್ಟುಕೊಂಡರೂ, ಒಂದೊಂದು ತುತ್ತು ಹೊಟ್ಟೆಯೊಳಗೆ ಸೇರುವಾಗ ಕೂಡ ಊರುಗೋಲಿನ ಬಗ್ಗೆ ಚಿಂತಿಸುವುದನ್ನು ನಿಲ್ಲಿಸಲಾಗಲಿಲ್ಲ. ಹೀಗೆ ವಿಚಾರಮಾಡಿದಾಗ ತನ್ನಂಥ ಮುದುಕರು ಅದಿಲ್ಲದೆ ನಡೆಯುವುದೇ ಅಸಂಭವವೆನಿಸುತ್ತಿತ್ತು.

ಮರುದಿನ ಸದನದಲ್ಲಿ ತಮ್ಮ ಗೋಳನ್ನು ಆ ಹಿರಿಯ ಸದಸ್ಯರು ಹೇಳತೊಡಗಿದರು. ಅಲ್ಲಿ ಸೇರಿದ್ದ ಸಮಾನವಯಸ್ಕ ಸದಸ್ಯರು, ''ಅದೇನು ಮಹಾ?'' ಎಂದು ತಿರಸ್ಕಾರ ಬೀರಿದರೆ, ಕಿರಿಯರು ಅದಕ್ಕಾಗಿ ಅಭಿನಂದಿಸಿ ''ಹೊಸ ಹಲ್ಲು ಚಿಗುರುತ್ತಿದೆ'' ಎಂದು ಗೇಲಿ ಮಾಡಿದರು.

ಈ ಸಂದರ್ಭದಲ್ಲಿ ಸದನದ ಒಬ್ಬ ಸದಸ್ಯ ಮಾತ್ರ ಚರ್ಚೆಯಲ್ಲಿ ಪಾಲುಗೊಳ್ಳದೆ ದೂರದಲ್ಲಿ ಕೂತು ಬಹಳ ಗಂಭೀರವಾಗಿ ಯೋಚಿಸುತ್ತಿದ್ದನು. ಊರುಗೋಲಿನ ಬಗ್ಗೆ ಕೆಲವರು ತಿರ

ಸ್ಕಾರ, ಹಾಸ್ಯ ವ್ಯಕ್ತಪಡಿಸಿದರೆ, ಇವನು ಮಾತ್ರ ಅದೊಂದು ಅದ್ಭುತವಾದ ಶಕ್ತಿಯೆಂದು ತಿಳಿದಿದ್ದ. ಊರುಗೋಲಿನ ಮಹತ್ವದ ಅರಿವು ಅವನಿಗೆ ಮಾತ್ರ ತಿಳಿದಿತ್ತು. ಇಂಥ ಒಂದು ಶಕ್ತಿಯನ್ನು ರಾಜ್ಯದ ಶ್ರೇಯೋಭಿವೃದ್ಧಿಗಾಗಿ ಏಕೆ ಬಳಸಬಾರದು ಎನ್ನುವ ಕೊರಗು ಅವನನ್ನು ಕಾಡುತ್ತಿತ್ತು. ಕೂಡಲೇ ಅವನು ಜಾಗೃತಗೊಂಡು ಸದನದ ಎಲ್ಲ ಸದಸ್ಯರನ್ನು ಉದ್ದೇಶಿಸಿ, ''ಸ್ನೇಹಿತರೇ, ನಿಮ್ಮ ಗಮನವನ್ನು ಈ ಕಡೆ ಕೇಂದ್ರೀಕರಿಸಿರಿ; ರಾಜ್ಯದ ಅಭಿವೃದ್ಧಿಗಾಗಿ ನನ್ನದೊಂದು ಉಪಯುಕ್ತ ಸಲಹೆಯನ್ನು ನಿಮ್ಮ ಮುಂದೆ ಇಡುತ್ತಿದ್ದೇನೆ'' ಎಂದನು. ಕೆಲವು ಸದಸ್ಯರು ಧ್ವನಿ ಬಂದ ಕಡೆ ಲಕ್ಷ್ಯವಹಿಸಿದರೆ ಇನ್ನುಳಿದವರು ಮುಖ ಸೊಟ್ಟಗೆ ಮಾಡಿಕೊಂಡರು.

ಅವನು ಆವೇಶದಿಂದ, ''ನನ್ನಲ್ಲಿ ಪರಿಹಾರ ಇದೆ. ನಾನು ತಿಳಿದುಕೊಂಡದ್ದು ಸರಿಯಾಗಿಯೇ ಇದೆ ಎನ್ನುವುದನ್ನು ದಯಮಾಡಿ ಜಾಗ್ರತೆಯಿಂದ ಪರಿಶೀಲಿಸಿ ಆಮೇಲೆ ಉತ್ತರಿಸಬೇಕು. ಯಾವುದೋ ಒಂದು ವಸ್ತುವಿಗೆ ನಾವು ತೆರಿಗೆ ವಿಧಿಸಲು ಮರೆತಿದ್ದೇವೆ. ಹೌದು, ಅದು ಊರುಗೋಲು. ಅದಕ್ಕೆ ತೆರಿಗೆ ವಿಧಿಸಲು ಮರೆತಿರುವುದು ರಾಷ್ಟ್ರಕ್ಕೆ ದೊಡ್ಡ ನಷ್ಟವಾಗಿ ಪರಿಣಮಿಸಿದೆ. ಅದು ಮಾತ್ರವೇ ಸಾರ್ವಜನಿಕ ಬೊಕ್ಕಸದ ಬೆಂಬಲಕ್ಕೆ ನಿಲ್ಲದೆ ಜಾರಿಕೊಂಡಿದೆ. ಅದಕ್ಕಾಗಿಯೇ ನಾನು ಉಪಯುಕ್ತ ವಸ್ತುಗಳ ಮೇಲಷ್ಟೇ ತೆರಿಗೆ ವಿಧಿಸಬೇಕೆಂದು ಹೇಳಿದ್ದು. ಚಾಳೀಸಕ್ಕಿಂತ ಹೆಚ್ಚಿನ ವಿನಾಯತಿ ಊರುಗೋಲಿಗೆ ಅಗತ್ಯವಿದೆಯೇ, ಇವುಗಳಲ್ಲಿ ಯಾವುದಕ್ಕೆ ತೆರಿಗೆ ವಿಧಿಸಬಹುದು? ಕೃತಕ ಹಲ್ಲುಗಳಿಗಿಂತಲೂ ಊರುಗೋಲಿಗೆ ಹೆಚ್ಚು ಮಹತ್ವವಿರುವುದರಿಂದ ಅದಕ್ಕೆ ತೆರಿಗೆ ವಿಧಿಸಲೇಬೇಕು. ಅದು ವಿಶೇಷ ತೆರಿಗೆಗೆ ಅರ್ಹವಾಗಿದೆ. ಸ್ನೇಹಿತರೆ, ಇದು ನನ್ನ ನಮ್ರ ಅಭಿಪ್ರಾಯ ನನ್ನ ಸಲಹೆ ಅತ್ಯಂತ ವಿವೇಕದಿಂದ ಕೂಡಿರುವುದರಿಂದ ಯಾರಿಂದಲೂ ವಿರೋಧಿಸಲು ಸಾಧ್ಯವಾಗದು'' ಎಂದು ಅವನು ತನ್ನ ಭಾಷಣವನ್ನು ನಿಲ್ಲಿಸಿದನು.

ರಾಷ್ಟ್ರದ ದೃಷ್ಟಿಯಿಂದ ಈ ಸೂಚನೆ ಹಿತಕಾರಿಯಾಗಿತ್ತು. ಆದ್ದರಿಂದ ಸದನದ ಯಾವೊಬ್ಬ ಸದಸ್ಯನೂ ಇದಕ್ಕೆ ವಿರೋಧ ವ್ಯಕ್ತಪಡಿಸಲಿಲ್ಲ. ಯಾರಿಂದಲೂ ಆಕ್ಷೇಪಣೆಯ ಧ್ವನಿ ಬರದಿದ್ದರೂ ಅದನ್ನು ಕಾರ್ಯರೂಪಕ್ಕೆ ತರುವುದರ ಬಗ್ಗೆ ಚಿಂತಿತರಾಗಿದ್ದರು. ಹೊಸ ತೆರಿಗೆಯನ್ನು ಜಾರಿಗೊಳಿಸುವ ಮುಂಚೆ ಅದರ ಸಾಧಕ ಬಾಧಕಗಳ ಕುರಿತು ವಿಚಾರಗೋಷ್ಠಿಗಳನ್ನು ನಡೆಸಲಾಯಿತು.

ಶಾಸಕಾಂಗವು ರಾಜ್ಯದಲ್ಲಿರುವ ಊರುಗೋಲುಗಳ ಬಗ್ಗೆ ಅಧಿಕೃತ ಮಾಹಿತಿಯನ್ನು ಒದಗಿಸುವಂತೆ ಲೆಕ್ಕ ಪರಿಶೋಧಕರ ಸಮಿತಿಯನ್ನು ನಿಯಮಿಸಿತು. ರಾಷ್ಟ್ರದ ಆರ್ಥಿಕ ನೀತಿಗೆ ಪೂರಕವಾಗಿ ಈ ತೆರಿಗೆ ಬರುತ್ತದೋ ಎಂಬುದನ್ನು ಪರಿಶೀಲಿಸಲು ಅರ್ಥಶಾಸ್ತ್ರಜ್ಞರನ್ನು ನೇಮಿಸಲಾಯಿತು. ಕುಂಟರು ಬಳಸುವ ಊರುಗೋಲನ್ನು ಈ ವ್ಯಾಪ್ತಿಯೊಳಗೆ ಸೇರಿಸಬೇಕೆ ಎಂದು ತೀರ್ಮಾನಿಸಲು ಮೂರನೆ ಸಮಿತಿಯೊಂದು ಅಸ್ತಿತ್ವಕ್ಕೆ ಬಂತು. ಅಧ್ಯಾಪಕರು ಬಳಸುವ ದಂಡ ಹೆಚ್ಚು ಲಕ್ಷುರಿಯಿದೆಯೇ? ಎಂಬುದನ್ನು ವಿಶ್ಲೇಷಿಸಲು ಉಪಸಮಿತಿಯ ರಚನೆಯಾಯಿತು. ಈ ಸಮಿತಿಯು ಅಧ್ಯಾಪಕರು ಮಕ್ಕಳಿಗೆ ಶಿಕ್ಷಿಸುವುದಕ್ಕೆ ದಂಡವನ್ನೇ ಉಪಯೋಗಿಸುತ್ತಾರೋ ಅಥವಾ ಕಾಲಿನಿಂದ ಒದೆಯುತ್ತಾರೋ ಎಂದು ಗಮನಿಸಲು ಆಜ್ಞೆ ಹೊರಡಿಸಲಾಯಿತು. ಬೈಬಲ್, ಪುರಾಣ ಮತ್ತು ವಿಜ್ಞಾನಗಳಲ್ಲಿ 'ಊರುಗೋಲು' ಪ್ರಯೋಗ ಇದ್ದರೆ ಅದನ್ನು ಪರಿಶೋಧಿಸಲು ಇತಿಹಾಸತಜ್ಞರು, ಭೌತಶಾಸ್ತ್ರಜ್ಞರು, ಮತ್ತು ಧರ್ಮ ಗುರುಗಳನ್ನೊಳಗೊಂಡ ನಾಲ್ಕನೆಯ ಸಮಿತಿಯೊಂದನ್ನು ನೇಮಿಸಲಾಯಿತು.

ಊರುಗೋಲಿನ ಉಪಯುಕ್ತತೆಯನ್ನು ಆಧರಿಸಿ ತಾತ್ಕಾಲಿಕ ತೆರಿಗೆ ವಿಧಿಸುವ ಬಗ್ಗೆ ಪರಿಶೀಲಿಸಲು ತೆರಿಗ ಸಮಿತಿಯೊಂದನ್ನು ರಚಿಸಲಾಯಿತು. ಈ ಎಲ್ಲ ಸಮಿತಿಗಳು ಹಿರಿಯ ಅಧಿಕಾರಿಗಳಿರುವ ಸಮಿತಿಗೆ ವರದಿ ಒಪ್ಪಿಸಬೇಕು. ಇವರು ಹಣಕಾಸು ಆಯೋಗಕ್ಕೆ ಈ ಕುರಿತು ಮಾಹಿತಿ ನೀಡುತ್ತಿ

ರಬೇಕು. ಅದು ಮೇಲಿನ ಉಸ್ತುವಾರಿ ಕಮಿಟಿಗೆ ತಿಳಿಸುತ್ತಿರುತ್ತದೆ. ಇಷ್ಟೆಲ್ಲ ರಚನೆಗಳು ಮುಗಿದ ಮೇಲೆ ಶಾಸಕಾಂಗವು ಊರುಗೋಲಿಗೆ ತೆರಿಗೆ ವಿಧಿಸುವುದನ್ನು ಜಾರಿಗೆ ತಂದಿತು.

ತೆರಿಗೆ ಜಾರಿಯಾದ ಮೊದಲ ದಿನಗಳಲ್ಲಿ ಪ್ರಜೆಗಳೆಲ್ಲ ಅದನ್ನು ಪ್ರೀತಿಯಿಂದ ಸ್ವಾಗತಿಸಿದರು.

ಊರುಗೋಲು ಇಲ್ಲದವರೂ ಅವುಗಳನ್ನು ಖರೀದಿಸಿ ಉಪಯೋಗಿಸತೊಡಗಿದರು. ಕೆಲವು ಊರುಗೋಲಿನ ಮಾಲಿಕರು ನಾವುಗಳು ಸರಕಾರಕ್ಕೆ ತೆರಿಗೆ ಕೊಡುತ್ತಿದ್ದೇವೆ, ಎಂದು ಹೆಮ್ಮೆಯಿಂದ ಬೀಗುತ್ತಿದ್ದರು.



"ಈ ಫೋಟೋ ನಿಮ್ಮದೇ ಸಾರ್.. ರಾಜಕೀಯಕ್ಕೆ ಇಳಿಯೋದಕ್ಕೆ ಮೊದಲು ತೆಗೆಸಿದ್ದು!"

ದಿನಗಳು ಕಳೆದಂತೆ ಊರುಗೋಲು ಉಪಯೋಗಿಸುವವರ ಸಂಖ್ಯೆ ಇಳಿಮುಖವಾಗತೊಡಗಿತು. ಅದೇ ರೀತಿ ಹೊಸ ಕಾನೂನಿನ ಬಗ್ಗೆ ಜನ ಅಸಮಾಧಾನ ವ್ಯಕ್ತಪಡಿಸತೊಡಗಿದರು. ಆದರೆ ಕುಂಟರು ಮತ್ತು ಮುದುಕರಿಗೆ ಅದಿಲ್ಲದೆ ನಡೆಯೋಕೆ ಆಗುತ್ತಿರಲಿಲ್ಲ. ತೆರಿಗೆ ಕೊಡುವುದರಿಂದ ಪಾರಾಗಲು ಕೆಲವರು ತಮ್ಮ ತಮ್ಮ ಛತ್ರಿಗಳನ್ನೇ ಊರುಗೋಲಿನಂತೆ ಉಪಯೋಗಿಸತೊಡಗಿದರು. ಇಂಥ ಅವ್ಯವಹಾರಗಳು ಸರಕಾರದ ಗಮನಕ್ಕೆ ಬಂದಾಗ; ಊರುಗೋಲು ಉಪಯೋಗಿಸಿದ್ದು ಹೌದೇ ಅಲ್ಲವೇ ಎಂದು ಪರಿಶೀಲಿಸಿ ತೆರಿಗೆ ವಿಧಿಸಲು ಹೊಸ ಕಾನೂನನ್ನು ಜಾರಿಗೆ ತರಲಾಯಿತು. ಹೊಸ ಕಾನೂನನ್ನು ಕೆಲವು ಪ್ರಜೆಗಳು ತಿರಸ್ಕರಿಸಿದರು. ಅಲ್ಲದೆ ಧಾರ್ಮಿಕ ಸಂಸ್ಥೆಗಳು ಇಂಥ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡಿದುವಲ್ಲದೆ 'ವಾರದಲ್ಲಿ ಒಂದು ದಿನ ಊರುಗೋಲು ಉಪಯೋಗಿಸಿ' ಎಂದು ಕರೆ ನೀಡಿದವು. ಧಾರ್ಮಿಕ ಸಂಸ್ಥೆಗಳು ತನ್ನ ಅಧೀನದಲ್ಲಿ ಇಲ್ಲದಿರುವುದರಿಂದ ಸರಕಾರಕ್ಕೆ ವಿಶೇಷ ತಲೆ ನೋವು ಉಂಟಾಯಿತು. ಒಂದು ದಿನದ ಮಟ್ಟಿಗೆ ಜನರು ಊರುಗೋಲು ಉಪಯೋಗಿಸುವುದನ್ನು ಕಂಡು ಕಂದಾಯ ಅಧಿಕಾರಿಗಳು ಆ ಒಂದು ದಿನಕ್ಕಾಗಿ ವಿಶೇಷ ತೆರಿಗೆಗಳನ್ನು ವಿಧಿಸತೊಡಗಿದರು.

ಕೆಲವು ಪ್ರಜೆಗಳಿಗೆ ಅಸಮಾಧಾನ ಉಂಟಾಗಬಾರದೆಂದು ಸರಕಾರ ತೆರಿಗೆ ವಸೂಲಿ ಮಾಡುವ ಕ್ರಮದಲ್ಲಿ ಸ್ವಲ್ಪ ಬದಲಾವಣೆ ತಂದಿತು. ಊರುಗೋಲಿನ ಅಗತ್ಯವುಳ್ಳವರೂ, ಇಲ್ಲದವರೂ ಪ್ರತಿಯೊಬ್ಬರೂ ಊರುಗೋಲು ಖರೀದಿಸಬೇಕೆಂದು ಆಜ್ಞೆ ಹೊರಡಿಸಲಾಯಿತು. ಮತ್ತೆ ಊರುಗೋಲಿನ ಒಡೆಯರು ತಮ್ಮ ಊರುಗೋಲನ್ನು ಉಪಯೋಗಿಸತೊಡಗಿದರು. ಇದರಿಂದಾಗಿ ಅವುಗಳಿಗೆ ಬೇಡಿಕೆ ಹೆಚ್ಚಾಗತೊಡಗಿತು. ಸಂದರ್ಭಕ್ಕೆ ಅನುಗುಣವಾಗಿ ವ್ಯಾಪಾರಿಗಳು ಬೆಲೆಯನ್ನು ಏರಿಸತೊಡಗಿದರು. ಪ್ರತಿಯೊಬ್ಬರೂ ಒಂದು ಊರುಗೋಲನ್ನಾದರೂ ಖರೀದಿಸಿ ತೆರಿಗೆ ಕಟ್ಟಬೇಕಾಗಿತ್ತು. ಯಾರಿಗೂ ಇದರಿಂದ ಮುಕ್ತಿ ಇರಲಿಲ್ಲ. ವ್ಯಾಪಾರಸ್ಥರು ಬೆಲೆ ಹೆಚ್ಚಿಸಿರುವುದನ್ನು ಅರಿತ ಸರಕಾರ ಬೆಲೆ ನಿಯಂತ್ರಣಕ್ಕೊಂದು ಸಮಿತಿಯನ್ನು ರಚಿಸಿತು. ಈ ಸಮಿತಿ ಊರುಗೋಲಿಗೆ ನ್ಯಾಯಯುತ ಬೆಲೆಯನ್ನು ನಿಗದಿಪಡಿಸಿತು. ಸಮಿತಿ ಶಿಫಾರಸು ಮಾಡಿದ ಬೆಲೆಯನ್ನು ಮೀರುವವರಿಗೆ ಕಾನೂನು ರೀತ್ಯ ಶಿಕ್ಷೆ ವಿಧಿಸತೊಡಗಿದರು. ಕಾನೂನಿನ ಕಣ್ತಪ್ಪಿಸಲು ವ್ಯಾಪಾರಸ್ಥರು ಕಳ್ಳ ವ್ಯಾಪಾರ ಆರಂಭಿಸಿದರು. ಆಗ ಸರಕಾರ ಬುದ್ಧಿ ಓಡಿಸಿ ವಿದೇಶಗಳಿಂದ ಊರುಗೋಲನ್ನು ಆಮದು ಮಾಡಿಕೊಳ್ಳಲು ಆರಂಭಿಸಿತು. ಇದರಿಂದಾಗಿ ಊರುಗೋಲಿನ

ಬೆಲೆ ತೀವ್ರ ಇಳಿಮುಖವಾಯಿತು. ಸ್ಥಳೀಯ ವ್ಯಾಪಾರಿಗಳೂ ಬೆಲೆ ಇಳಿಸಿದರು. ಅಂತೂ ಎಲ್ಲರಿಗೂ ಊರುಗೋಲು ಕೈಗೆಟುಕುವಂತಾಯಿತು.

ತೆಳ್ಳಗಿನ ಊರುಗೋಲು ಬಳಸುವವರು, ದಪ್ಪಗಿನ ಊರುಗೋಲು ಬಳಸುವವರಷ್ಟೇ ತೆರಿಗೆ ಕಟ್ಟುತ್ತಿದ್ದುದರಿಂದ ತಮ್ಮೊಳಗೇ ಅಸಮಾಧಾನಪಟ್ಟುಕೊಳ್ಳುತ್ತಿದ್ದರು. ಅದೇ ರೀತಿ ಕುಳ್ಳಗಿನ ಜನರು, ಎತ್ತರವುಳ್ಳವರು ಕೊಡುವಷ್ಟೇ ತೆರಿಗೆ ಕೊಡುತ್ತಿರುವುದಕ್ಕೆ ವಿರೋಧ ವ್ಯಕ್ತಪಡಿಸಿ ಆಗಾಗ್ಗೆ ಪ್ರತಿಭಟನಾ ಮೆರವಣಿಗೆ ನಡೆಸುತ್ತಿದ್ದರು. ಇದರಿಂದಾಗಿ ಒಬ್ಬರು ಇನ್ನೊಬ್ಬರ ಮೇಲೆ ಆಪಾದನೆ ಹೊರಿಸುವುದು, ಕೋರ್ಟ್ ಕಟ್ಟೆ ಹತ್ತುವುದಲ್ಲದೇ ಊರುಗೋಲನ್ನೇ ಹೋರಾಟಗಳಲ್ಲಿ ಆಯುಧವನ್ನಾಗಿಯೂ ಬಳಸತೊಡಗಿದರು. ಇದನ್ನು ಕಂಡ ಸರಕಾರ ಆದಷ್ಟು ಬೇಗನೇ ಎಚ್ಚೆತ್ತು ಊರುಗೋಲು ಮತ್ತು ಅದರಿಂದ ಸಿಗುವ ತೆರಿಗೆಯಿಂದ ರಾಷ್ಟ್ರದ ಉನ್ನತಿಯಾಗುತ್ತದೆ ಎಂದು ಹೊಗಳಿ ಭಾಷಣ ಮಾಡಲು ಪ್ರಾರಂಭಿಸಿದರು. ಸದನ ಸದಸ್ಯರ ಭಾಷಣದ ಯಥಾವತ್ ರೂಪವನ್ನು ಪತ್ರಿಕೆಯವರು ಅಚ್ಚು ಹಾಕಿದರು. ಪ್ರಜೆಗಳೆಲ್ಲ ರಾಷ್ಟ್ರಾಭಿಮಾನದಿಂದ 'ನಮ್ಮ ದೇಶ ವಿಶ್ವದಲ್ಲೇ ಶ್ರೀಮಂತ ರಾಷ್ಟ್ರವೆನಿಸಿಕೊಳ್ಳಬೇಕು' ಎಂದು ಊರುಗೋಲು ಖರೀದಿಸಿ ತೆರಿಗೆ ತೆರತೊಡಗಿದರು. ಪ್ರಜೆಗಳ ಉಪಯೋಗಕ್ಕಾಗಿ ಸರಕಾರ ವಿದೇಶಗಳಿಂದ ಮರದ ದಿಮ್ಮಿಗಳನ್ನೇ ಆಮದು ಮಾಡತೊಡಗಿತು. ವಿದೇಶಗಳಿಂದ ದಿಮ್ಮಿಗಳನ್ನು ಖರೀದಿಸುವುದು ಸರಕಾರಕ್ಕೆ ಅನಿವಾರ್ಯವಾಗಿತ್ತು. ಏಕೆಂದರೆ ರಾಜ್ಯದಲ್ಲಿ ಮರಗಳ ಅಭಾವ ತೀವ್ರವಾಗಿತ್ತು. ಸರಕಾರ ಗಿಡಗಳನ್ನು ನೆಟ್ಟು ಬೆಳೆಸಿದರೆ, ವನಮಹೋತ್ಸವದ ದಿನ ಮಕ್ಕಳು ಆ ಗಿಡಗಳನ್ನೆಲ್ಲ ಕಿತ್ತು ಶಾಲೆಗೆ ಕೊಂಡೊಯ್ಯುತ್ತಿದ್ದರು. ಮರದ ದಿಮ್ಮಿಗಳ ಖರೀದಿಗೆ ಅಂತಾರಾಷ್ಟ್ರೀಯ ಬ್ಯಾಂಕ್‌ನಿಂದ ಸಾಲ ಹೇಗೆ ಪಡೆಯಬಹುದೆನ್ನುವುದಕ್ಕೆ ಕಮಿಟಿಯೊಂದರ ನೇಮಕದ ಜೊತೆಗೆ ದಿಮ್ಮಿಗಳ ಖರೀದಿಯನ್ನು ಕಡಿತಗೊಳಿಸುವುದರ ಬಗ್ಗೆಯೂ ಕಮಿಟಿ ರಚನೆಯಾಯಿತು.

ಈ ಕಮಿಟಿಯ ವರದಿ ಬರಬೇಕಿದೆ .... ●

## ವಿಜ್ಞಾನಿ-ರಾಜಕಾರಣಿ :

ಒಮ್ಮೆ ಮಹಿಳೆಯೊಬ್ಬಳು ಮಿಖಾಯಿಲ್ ಗೊರ್ಬಚೇವರನ್ನು ''ಕಮ್ಯೂನಿಜಂ ಅನ್ನು ಕಂಡುಹಿಡಿದವರು ವಿಜ್ಞಾನಿಯೋ ರಾಜಕಾರಣಿಯೋ?'' ಎಂದು ಕೇಳಿದಳು. ಅದಕ್ಕೆ ಗೊರ್ಬಚೇವ್ ''ಏಕೆ ಅನುಮಾನ? ಅದನ್ನು ಕಂಡುಹಿಡಿದವರು ಒಂದು ರೀತಿಯಲ್ಲಿ ರಾಜಕಾರಣಿಯೇ'' ಎಂದರು. ಇದನ್ನು ಕೇಳಿದ ಆಕೆ ''ವಿಷಯ ಈಗ ಸ್ಪಷ್ಟವಾಯಿತು. ಆತನೇನಾದರೂ ವಿಜ್ಞಾನಿಯಾಗಿದ್ದಲ್ಲಿ ಅದನ್ನು ಮನುಷ್ಯರ ಮೇಲೆ ಪ್ರಯೋಗಿಸುವ ಮೊದಲು ಇಲಿಗಳ ಮೇಲೆ ಪ್ರಯೋಗಿಸುತ್ತಿದ್ದ'' ಎಂದಳು.

---

## ರಾಜರತ್ನಂ ಉವಾಚ :

''ವಾಚಕರಲ್ಲಿ ಮೂರು ಬಗೆ. ದೋಷಗಳನ್ನು ದೊಡ್ಡದು ಮಾಡದೆ ಗುಣಗಳನ್ನು ಆಸ್ವಾದಿಸುವ ರಸಿಕರು. ಗುಣದೋಷಗಳನ್ನು ನಿಷ್ಪಕ್ಷಪಾತದಿಂದ ತೂಗಿ ಬೆಲೆ ಕಟ್ಟುವ ವಿಮರ್ಶಕರು. ದೋಷಗಳನ್ನೆ ಕಾಣುತ್ತಾ ಗುಣಗಳನ್ನು ಕಡೆಗಣಿಸುವ ಸಿನಿಕರು. ಲೇಖಕ, ಮೊದಲೆರಡು ವರ್ಗದವರ ಬಗ್ಗೆ ಹುಷಾರಾಗಿರಬೇಕು'' ಎನ್ನುತ್ತಾರೆ ಜಿ.ಪಿ.ರಾಜರತ್ನಂ 'ಸ್ವಾರಸ್ಯ'ದಲ್ಲಿ

● ಕೆ.ವೆಂಕಣ್ಣಾಚಾರ್

ನೀತಿಕಥೆ

ದೇವರು ಇರುವುದು ಗುಡಿಯೊಳಗಿನ ನಿರ್ಜೀವ ಶಿಲೆಯಲ್ಲಲ್ಲ ಮನದೊಳಗಿನ ಸಜೀವ ಮಂದಿರದಲ್ಲಿ




ಒಮ್ಮೆ ಒಬ್ಬ ಅಸ್ಪೃಶ್ಯ ವ್ಯಕ್ತಿ ದೇವಸ್ಥಾನಕ್ಕೆ ಪ್ರವೇಶಿಸಲಿದ್ದ. ಥಟ್ಟನೇ ... ಅಲ್ಲೇ ಉಪಸ್ಥಿತರಿದ್ದ ದೇವಸ್ಥಾನದ ಪೂಜಾರಿ ಆತನನ್ನು ಬಾಗಿಲಲ್ಲೇ ತಡೆದರು. ಆ ಅಸ್ಪೃಶ್ಯ ವ್ಯಕ್ತಿ ದೇವಸ್ಥಾನದ ಪ್ರವೇಶಕ್ಕೆ ಅನುಮತಿ ಪಡೆಯಲು ಪೂಜಾರಿಯನ್ನು ಸಾಕಷ್ಟು ಗೋಗರೆದ. ಆದರೂ ಫಲಕಾರಿಯಾಗಲಿಲ್ಲ. ಬದಲಿಗೆ ಪೂಜಾರಿ ಆತನಿಗೆ ಛೀಮಾರಿ ಹಾಕಿ, ''ಛಿ .....! ನೀನು ಜನ್ಮದಿಂದಲೇ ಪಾಪಿ, ಅಪವಿತ್ರ, ಕಳಂಕ ಹೊತ್ತವನು. ಹೋಗು ....! ಎರಡು ವರ್ಷಗಳ ಕಾಲ ದೇವರ ತಪ-ಜಪ, ಪೂಜೆ-ಪ್ರಾರ್ಥನೆ, ನೇಮ-ನಿಷ್ಠೆ ಮಾಡಿ ಪರಿಶುದ್ಧನಾಗಿ ಬಾ. ಆನಂತರ ನಿನ್ನನ್ನು ದೇವಸ್ಥಾನದೊಳಕ್ಕೆ ಬಿಡುತ್ತೇನೆ'' ಎಂದನು. ಇದನ್ನು ಕೇಳಿದ ಆ ವ್ಯಕ್ತಿ ಅಲ್ಲಿಂದ ಮೌನವಾಗಿ ಹೊರಟುಬಿಟ್ಟ.

ಮೂರು ವರ್ಷಗಳ ಕಾಲ ಕಳೆದು ಹೋಯಿತು. ಒಂದು ದಿನ ಪೂಜಾರಿಗೆ ಆಕಸ್ಮಿಕವಾಗಿ ಆ ಅಸ್ಪೃಶ್ಯ ವ್ಯಕ್ತಿ ಎದುರಾದ. ಪೂಜಾರಿ ಆತನನ್ನು ಕೆಣಕಲು ''ಏನಯ್ಯಾ ....! ಎಲ್ಲ ಸೌಖ್ಯವೇ .....? ಅಂದು ನಾನು ನಿನಗೆ ಹೇಳಿದ ಮೇಲೆ ಮೂರು ವರ್ಷಗಳೇ ಕಳೆದು ಹೋಗಿದ್ದರೂ ದೇವಸ್ಥಾನಕ್ಕೇಕೆ ಬರಲಿಲ್ಲ?'' ಎಂದು ಪ್ರಶ್ನಿಸಿದ.

ಅದಕ್ಕೆ ಆ ಅಸ್ಪೃಶ್ಯ ವ್ಯಕ್ತಿ ಪೂಜಾರಿಗೆ ನಮಸ್ಕರಿಸುತ್ತಾ ''ಮಹಾಸ್ವಾಮಿ ....! ತಾವು ನನಗೆ ಜೀವನದಲ್ಲಿ ಒಳ್ಳೆಯ ಶಿಸ್ತನ್ನು ಹೇಳಿಕೊಟ್ಟು ಮಹದುಪಕಾರ ಮಾಡಿದಿರಿ. ತಮ್ಮ ಸಲಹೆಯಂತೆ ನಾನು ನಿತ್ಯವೂ ಈಗ ದೇವರ ತಪ-ಜಪ, ಪೂಜೆ-ಪ್ರಾರ್ಥನೆ, ನೇಮ-ನಿಷ್ಠೆ ಮಾಡುತ್ತಾ ಪರಿಶುದ್ಧನಾಗಿದ್ದೇನೆ'' ಎಂದನು.

''ಅದು ಸರಿ .....! ಮತ್ತೆ ದೇವಸ್ಥಾನಕ್ಕೇಕೆ ಬರಲಿಲ್ಲ'' ಪೂಜಾರಿ ಮತ್ತೆ ಕೆದಕಿದರು.

ಆಗ ಆ ವ್ಯಕ್ತಿ ''ಇಲ್ಲ ಮಹಾಸ್ವಾಮಿ ....! ಒಂದು ದಿನ ದೇವರು ನನಗೆ ಕನಸಿನಲ್ಲಿ ಬಂದು 'ಅಯ್ಯಾ ....! ದೇವಸ್ಥಾನಕ್ಕೆ ನಾನೇ ಹೋಗಿ ಎಷ್ಟೋ ವರ್ಷಗಳಾಗಿ ಹೋಗಿವೆ. ಅಲ್ಲಿ ನಾನಿಲ್ಲದೆ ನೀನೇಕೆ ಹೋಗುತ್ತೀಯಾ? ನಾನು ನಿನ್ನ ಮನದಲ್ಲೇ ಸದಾಕಾಲ ಇರುತ್ತೇನೆ' ಎಂದು ಹೇಳಿದನು ಸ್ವಾಮಿ'' ಎಂದಾಗ ತಲ್ಲಣಿಸುವ ಸರದಿ ಪೂಜಾರಿಯದಾಗಿತ್ತು. (ಸಾಧಾರ) ●

● ಜಿ.ವಿ.ಪ್ರಭು

# ಅಪಾಯದ ಅಂಚಿನಲ್ಲಿ ಜೀವ ಸಂಕುಲ

ಭೂಮಿಯ ಉಷ್ಣತೆ ಮುಂದಿನ 40-50 ವರ್ಷಗಳಲ್ಲಿ 1-3 ಡಿಗ್ರಿ ಸೆಂ. ಏರಲಿದೆ; ಕಳೆದ 100 ವರ್ಷಗಳಲ್ಲಿ 1 ಡಿಗ್ರಿ.ಸೆಂ. ಏರಿದೆ; ಕ್ರಿ.ಶ. 2015ರ ಹೊತ್ತಿಗೆ 1500-2000 ಭೂವಾಸಿ ಕಶೇರುಕಗಳು ಭೂಮಿಯಿಂದಲೇ ನಾಶವಾಗಿ ಹೋಗಲಿವೆ; ಜಗತ್ತಿನಾದ್ಯಂತ ಪ್ರತಿವರ್ಷ 250 ಕೋಟಿ ಟನ್ ಫಲವತ್ತಾದ ಮೇಲ್ಪದರದ ಮಣ್ಣು ಕೊಚ್ಚಿಕೊಂಡು ಹೋಗುತ್ತಿದೆ.

ಇವೆಲ್ಲ ಏನು? ಭೂಮಿಯ ಭವಿಷ್ಯ; ಮುಂದಿನ ಜನಾಂಗ ಎದುರಿಸಲೇ ಬೇಕಾದ ಭಯಾನಕ ಘಟನೆಗಳು. ಭೂಮಿಗೆ ಮನುಷ್ಯನ ಮೇಲೆ ಕೋಪ ಬಂದು ಈ ರೀತಿ ಆಗುವುದಿಲ್ಲ; ಬದಲು ಇವೆಲ್ಲ ಮಾನವ ನಿರ್ಮಿತ ಸಮಸ್ಯೆಗಳೇ. ಅದಕ್ಕಾಗಿಯೇ ಜಗತ್ತಿನಾದ್ಯಂತ ವಿಜ್ಞಾನಿಗಳಲ್ಲಿ, ಬುದ್ಧಿಜೀವಿಗಳಲ್ಲಿ, ಜನರಲ್ಲಿ ಪರಿಸರ ಜಾಗೃತಿ ಬೆಳೆಯುತ್ತಿರುವುದು.

ಮಾನವನು ತನ್ನ ಮಿದುಳಿನ ಶಕ್ತಿಯಿಂದ ಒಂದೊಂದೇ ಕಾರ್ಯಗಳನ್ನು ಸಾಧಿಸುತ್ತಾ ಬಂದ. ಹಲವಾರು ಸಮಸ್ಯೆಗಳನ್ನು ಎದುರಿಸಿ ಮನುಷ್ಯ ಜಯಶೀಲನಾದ. ಇದಕ್ಕೆಲ್ಲ ಕಾರಣ ವಿಜ್ಞಾನ. ಆದರೆ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯಾದಂತೆ ಸಮಸ್ಯೆಗಳು ಹುಟ್ಟಿಕೊಂಡವು. ಮೊದಲ ಸಮಸ್ಯೆ ಜನಸಂಖ್ಯೆಯ ತೀವ್ರ ಬೆಳವಣಿಗೆ. ವಿಜ್ಞಾನದ ತೀವ್ರ ಬೆಳವಣಿಗೆಯಿಂದಾಗಿ ಮರಣದ ಗತಿಗಿಂತ ಜನನದ ಗತಿ ತೀವ್ರವಾಯಿತು. ಕ್ರಿಸ್ತಶಕ 1650ರಲ್ಲಿ ಕೇವಲ 50 ಕೋಟಿ ಇದ್ದ ಪ್ರಪಂಚದ ಜನಸಂಖ್ಯೆ 1970ಕ್ಕೆ ಬಂದಾಗ 360 ಕೋಟಿ ಆಗಿತ್ತು. ಜನಸಂಖ್ಯೆಯ ಏರಿಕೆಯ ಪ್ರಮಾಣ 2.1 ಆಯಿತು. ಈಗ ಜಗತ್ತಿನ ಜನಸಂಖ್ಯೆ 530 ಕೋಟಿ. ಕ್ರಿಸ್ತಶಕ 2000ದ ಹೊತ್ತಿಗೆ 610 ಕೋಟಿ ಆಗಬಹುದೆಂದು ತಜ್ಞರು ಲೆಕ್ಕ ಹಾಕಿದ್ದಾರೆ. ಜನಸಂಖ್ಯೆ ಹೆಚ್ಚಾದಂತೆ ಆಹಾರದ ಸಮಸ್ಯೆ ಉಂಟಾಯಿತು. ಜನಸಂಖ್ಯೆ ಜಾಸ್ತಿಯಾಯಿತೆಂದು ಕೃಷಿ ಜಮೀನನ್ನು ವಿಸ್ತರಿಸಲು ಸಾಧ್ಯವಿಲ್ಲ. ಏಕೆಂದರೆ ಭೂಮಿಯ ಮೇಲೆ ಕೆಲವು ಪ್ರದೇಶಗಳು ಪರ್ವತ, ಬಂಜರು ಭೂಮಿಗಳಾಗಿವೆ. ಉಳಿದ ಪ್ರದೇಶಗಳಲ್ಲಿ ಜನರ ವಾಸ್ತವ್ಯ, ಕಛೇರಿಗಳಿರುತ್ತವೆ. ತಜ್ಞರ ಪ್ರಕಾರ 320 ಕೋಟಿ ಹೆಕ್ಟೇರ್ ಜಮೀನನ್ನು ಕೃಷಿಗೆ ಉಪಯೋಗಿಸಬಹುದು. ಇದರ ಅರ್ಧದಷ್ಟನ್ನು ಈಗಾಗಲೇ ಬಳಸಿಕೊಳ್ಳುತ್ತಿದ್ದೇವೆ. ಆದರೆ ಸಿಗುವ ಎಲ್ಲ ಸೌಕರ್ಯಗಳನ್ನು ಬಳಸಿದರೂ ಕ್ರಿಸ್ತಶಕ 2000ದ ಹೊತ್ತಿಗೆ ಆಹಾರದ ಅಭಾವ ತೀವ್ರವಾಗಲಿದೆ.

ಈಗ ಪ್ರಪಂಚದ ಪ್ರತಿಯೊಂದು ದೇಶವು

● ರಾಜೇಶ ಪಿ. ಮಡಿವಾಳ

ಶ್ರೀಮಂತವಾಗಲು ಪ್ರಯತ್ನಿಸುತ್ತಿದೆ. ಆದುದರಿಂದ ಔದ್ಯಮಿಕ ರಂಗಕ್ಕೆ ಪ್ರಾಶಸ್ತ್ಯ ನೀಡಲಾಗುತ್ತಿದೆ. ಅರಣ್ಯ ಸಂಪತ್ತು ಒಂದೇ ಸವನೆ ಬರಿದಾಗುತ್ತಿದೆ. ಈಗಿನ ಲೆಕ್ಕದ ಪ್ರಕಾರ ಪ್ರತಿವರ್ಷ 10,000 ಚ.ಕಿ.ಮೀ. ಅರಣ್ಯದ ನಾಶವಾಗುತ್ತಿದೆ. ಕಳೆದ ನೂರು ವರ್ಷಗಳಲ್ಲಿ ಪ್ರಪಂಚದಲ್ಲಿದ್ದ ಒಟ್ಟು ಅರಣ್ಯ ಸಂಪತ್ತಿನಲ್ಲಿ ಅರ್ಧದಷ್ಟು ನಾಶವಾಗಿದೆ. ಅಮೆರಿಕದಲ್ಲಿ ಯುರೋಪಿಯನ್ನರು ಮೊದಲು ಕಾಲಿಟ್ಟಾಗ 32,00,000 ಚದರ ಕಿಲೋಮೀಟರ್ ಅರಣ್ಯವಿತ್ತು. ಈಗ ಅದು 2,20,000 ಚ.ಕಿ.

ಮೀ.ಗೆ ಇಳಿದಿದೆ. ಕಾರ್ಖಾನೆಗಳು ಬಿಟ್ಟ ಹೊಗೆಯಲ್ಲಿರುವ ಅನಿಲಗಳಿಂದ ಉಂಟಾದ ಆಮ್ಲ ಮಳೆಯಿಂದಾಗಿ ಯುರೋಪಿನ 25 ದೇಶಗಳಲ್ಲಿ 70,000 ಚ.ಕಿ.ಮೀ. ಅರಣ್ಯ ನಾಶವಾಗಿದೆ. ಕೈಗಾರಿಕಾ ರಂಗದ ಪ್ರಗತಿಯ ಹೆಸರಲ್ಲಿ ಅರಣ್ಯಗಳನ್ನು ನಾಶಪಡಿಸಲಾಗುತ್ತಿದೆ.

ಒಂದೇ ಮರದಲ್ಲಿ ಅನೇಕ ಜೀವ ಜಾತಿಗಳು ವಾಸಿಸುತ್ತವೆ. ಬೇರಿನಲ್ಲಿ ಏಕಾಣು ಜೀವಿಗಳು ವಾಸಿಸಿದರೆ ಕಾಂಡದಲ್ಲಿ ಪೊಟರೆ ಮಾಡಿಕೊಂಡು ಪಕ್ಷಿಗಳು ಬದುಕಿಕೊಂಡಿರಬಹುದು. ಗೂಡು ಕಟ್ಟಿಕೊಂಡು ಇನ್ಯಾವುದೋ ರೀತಿಯಿಂದ ಬದುಕುವ ಅನೇಕ ಜೀವಿಗಳಿಗೆ ಮರವು ಆಶ್ರಯದಾತವಾಗಿದೆ ಮಾತ್ರವಲ್ಲ ಆಹಾರದಾತವೂ ಆಗಿದೆ. ಸಸ್ಯ ಸಂಪತ್ತಿನ ನಾಶ ಅರಣ್ಯ ಜೀವಿಗಳನ್ನು ನಿರಾಶ್ರಿತರನ್ನಾಗಿಸಿದೆ. ಇದುವರೆಗೆ 106 ಜಾತಿಯ ಪ್ರಾಣಿಗಳು, 139 ಪ್ರಭೇದದ ಪಕ್ಷಿಗಳು ನಾಶವಾಗಿವೆ. ಕಳೆದ ಶತಮಾನದಲ್ಲಿ 76 ಪ್ರಭೇದದ ಪ್ರಾಣಿಗಳು ನಾಶವಾದರೆ ಈ ಶತಮಾನದ ಮೊದಲರ್ಧದಲ್ಲಿ 40 ಪ್ರಭೇದದ ಪ್ರಾಣಿಗಳು ನಾಶವಾಗಿವೆ. ಒಂದು ಅಂದಾಜಿನ ಪ್ರಕಾರ ಈ ಶತಮಾನದಲ್ಲಿ ಪ್ರತಿ ಒಂದೂವರೆ ವರ್ಷಕ್ಕೊಮ್ಮೆ ಒಂದು ಪ್ರಾಣಿ, ಪಕ್ಷಿ ಸಂತತಿ ನಶಿಸುತ್ತಿದೆ. ಈಗಾಗಲೇ 600 ಪ್ರಾಣಿ ಪಕ್ಷಿ ಪ್ರಭೇದಗಳು ಅಳಿಯುವ ಭೀತಿಯಲ್ಲಿವೆ. ಭಾರತೀಯ ಖಡ್ಗಮೃಗ, ಸೀಲ್ ಮೀನುಗಳು ಭಾರತೀಯ ಚೀತಾ, ಕಸ್ತೂರಿಮೃಗ ಅಳಿಯುವ ಹಾದಿಯಲ್ಲಿರುವ ಕೆಲವು ಪ್ರಭೇದಗಳು.

### ಆಮ್ಲ ಮಳೆ

*ಕಲ್ಲಿದ್ದಲನ್ನು ಹೆಚ್ಚಾಗಿ ಬಳಸುವ ಕಾರ್ಖಾನೆಗಳಿಂದ ಹೊರಬರುವ ಅನಿಲಗಳಲ್ಲಿ ಗಂಧಕದ ಆಕ್ಸೈಡ್ ಗಮನಾರ್ಹ ಪ್ರಮಾಣದಲ್ಲಿರುತ್ತದೆ. ಇದು ಮಳೆಯ ನೀರಿನೊಂದಿಗೆ ಸೇರಿ ಗಂಧಕಾಮ್ಲ ಉತ್ಪತ್ತಿಯಾಗುತ್ತದೆ. ಇದೇ ಆಮ್ಲ ಮಳೆ. ಇದು ಎಲ್ಲಿ ಬೀಳುತ್ತದೋ ಅಲ್ಲಿಯ ಸಸ್ಯಗಳನ್ನು ಕೊರೆಯುತ್ತದೆ. ನೆಲಕ್ಕೆ ಬಿದ್ದ ಆಮ್ಲ ಮಳೆ ಮಣ್ಣಿನಲ್ಲಿರುವ ಕೆಲವು ಪೋಷಕಾಂಶಗಳನ್ನು ಭೂಮಿಯ ಆಳಕ್ಕೆ ತಳ್ಳಿ ಗಿಡದ ಬೇರುಗಳಿಗೆ ದೊರೆಯುವಂತೆ ಮಾಡುತ್ತದೆ.*

### ಗ್ರೀನ್ ಪೀಸ್

*ಇದು ಪರಿಸರ ಸಂರಕ್ಷಣೆಗೆ ತನ್ನನ್ನು ಮುಡಿಪಾಗಿಸಿಕೊಂಡ ಅಂತಾರಾಷ್ಟ್ರೀಯ ಸಂಸ್ಥೆ. ಇದರ ಕೇಂದ್ರ ಕಛೇರಿ ಇಂಗ್ಲೆಂಡಿನ ಸಸೆಕ್ಸ್ ಪ್ರಾಂತ್ಯದಲ್ಲಿದೆ. ಇದು 1971ರಲ್ಲಿ ಸ್ಥಾಪಿಸಲ್ಪಟ್ಟಿತು. ಪ್ರಪಂಚದ 14 ದೇಶಗಳಲ್ಲಿ 17 ಶಾಖೆಗಳನ್ನು ಹೊಂದಿದೆ. ಜನರು ನೀಡಿದ ಹಣ, ವಿಶ್ವ ವನ್ಯಜೀವಿ ನಿಧಿ ಮತ್ತು ಗ್ರೀನ್ ಪೀಸ್ ಲೇಬಲ್‌ಗಳ ಮಾರಾಟದಿಂದ ತನ್ನ ಕಾರ್ಯಕ್ರಮಗಳಿಗೆ ಬೇಕಾದ ಹಣವನ್ನು ಸಂಗ್ರಹಿಸುತ್ತದೆ. ಇದು ಪತ್ರಿಕೆಗಳನ್ನು ಹೊರಡಿಸುತ್ತಿದೆ. ಭಾರತದಲ್ಲಿ ತನ್ನ ಶಾಖೆಯನ್ನು ತೆರೆಯುವ ಬಯಕೆ ಇದಕ್ಕಿದೆ.*

ನಿಮಗೆಲ್ಲರಿಗೂ ಗೊತ್ತಿದ್ದ ಹಾಗೆ ಪ್ರಕೃತಿಯಲ್ಲಿ ಪ್ರತಿ ಜೀವಿಯು ಇನ್ನೊಂದು ಜೀವಿಯನ್ನು ಅವಲಂಬಿಸಿದೆ. ಯಾವುದೇ ಜೀವಿಯ ನಾಶ ಇನ್ನೊಂದು ಪ್ರಭೇದದ ಜೀವಿಯ ಸಂಖ್ಯೆಯ ಹೆಚ್ಚಳ ಇಲ್ಲವೇ ಕಮ್ಮಿಗೆ ಕಾರಣವಾಗುತ್ತದೆ. ಉದಾಹರಣೆಗೆ, ಹಾವುಗಳು ಹೆಚ್ಚಾದರೆ ಕಪ್ಪೆಗಳು ಕಡಿಮೆಯಾಗಬಹುದು. ಆದರೆ ಹಾವುಗಳ ಸಂಖ್ಯೆಯನ್ನು ಹದ್ದುಗಳು ನಿಯಂತ್ರಿಸುತ್ತವೆ. ಇಂತಹ ಜೀವಿ-ಜೀವಿ ಸಂಬಂಧಕ್ಕೆ ಕೆಲವು ನಿದರ್ಶನಗಳನ್ನು ನೀಡಬಹುದು. ಮಲೆನಾಡಿನಲ್ಲಿ ನಿತ್ಯಹರಿದ್ವರ್ಣದ ಕಾಡುಗಳು ಕಣ್ಮರೆಯಾಗುತ್ತಿವೆ. ಇದರಿಂದ ಕೆಲವು ಪ್ರಭೇದದ ಉಣ್ಣೆಗಳ ಸಂಖ್ಯೆ ಹೆಚ್ಚಾಗುತ್ತದೆ. ಇವು ಕ್ಯಾಸನೂರು ಕಾಯಿಲೆಯನ್ನು ಹರಡುವಂತಹವುಗಳು. 1950ರಲ್ಲಿ ಕರ್ನಾಟಕದಲ್ಲಿ ಕ್ಯಾಸನೂರು ಕಾಯಿಲೆ ಇದ್ದಕ್ಕಿದ್ದಂತೆ ಕಾಣಿಸಿದ್ದು ಎಲ್ಲರಿಗೂ ಗೊತ್ತಿರಬಹುದು. ಅದೇ ರೀತಿ ಹುಲಿ ಸಂಖ್ಯೆಗೂ ಕುಡಿ



ಕಸ್ತೂರಿ

ಯುವ ನೀರಿಗೂ ಸಂಬಂಧವಿದೆ. ಹುಲಿಗಳ ಸಂಖ್ಯೆ ಕಡಿಮೆಯಾದರೆ ಕುಡಿಯುವ ನೀರಿನ ಅಭಾವವುಂಟಾಗುತ್ತದೆ. ಏಕೆಂದರೆ ಹುಲಿಗಳ ಸಂಖ್ಯೆಯು ಕಡಿಮೆಯಾದರೆ ಜಿಂಕೆ ಮುಂತಾದ ಸಸ್ಯಾಹಾರಿ ಪ್ರಾಣಿಗಳ ಸಂಖ್ಯೆ ಹೆಚ್ಚಾಗುತ್ತದೆ. ಸಹಜವಾಗಿಯೇ ಹುಲ್ಲು ಮತ್ತು ಇತರ ಸಸ್ಯಗಳ ಪ್ರಮಾಣ ಕಡಿಮೆಯಾಗುತ್ತದೆ. ಇದರಿಂದ ಮಳೆಯ ನೀರು ಹರಿದು ಹೋಗಿ ಅಂತರ್ಜಲ ಸಂಗ್ರಹವಾಗುವುದಿಲ್ಲ.

ಕೈಗಾರಿಕಾ ರಂಗದ ಪ್ರಗತಿ ವಾಯುಮಂಡಲಕ್ಕೆ ದೊಡ್ಡ ಹೊಡೆತ ನೀಡಿದೆ. ಕಾರ್ಖಾನೆಗಳಿಂದ ಹೊರಹೊಮ್ಮುವ ಅನಿಲಗಳು ವಾಯುಮಾಲಿನ್ಯಕ್ಕೆ ಕಾರಣವಾದರೆ ಹೆಚ್ಚುತ್ತಿರುವ ಇಂಗಾಲದ ಡೈ ಆಕ್ಸೈಡ್‌ನ ಪ್ರಮಾಣ ಭೂಮಿಯು ಬಿಸಿಯಾಗುತ್ತಿರುವುದಕ್ಕೆ ಕಾರಣವಾಗಿದೆ. ಕಳೆದ 100 ವರ್ಷಗಳಲ್ಲಿ 0.5 - 0.7 ಡಿಗ್ರಿ.ಸೆಂ. ಹೆಚ್ಚಳ ಕಂಡುಬಂದಿದೆ. ಧ್ರುವ ಪ್ರದೇಶದ ಮಂಜುಗಡ್ಡೆಯೂ ನಿಧಾನವಾಗಿ ಕರಗುತ್ತಿರುವುದು ತಿಳಿದುಬಂದಿದೆ. ತಜ್ಞರ ಪ್ರಕಾರ ಭೂಮಿಯ ಉಷ್ಣತೆಯಲ್ಲಿ 15 ಡಿಗ್ರಿ.ಸೆಂ. ಹೆಚ್ಚಳವಾದರೆ ಸಮುದ್ರ ಮಟ್ಟವು 20-165 ಸೆ.ಮೀ. ಏರಬಹುದು. ಈ ಸಮಸ್ಯೆಯು ಒಂದು ಕಡೆಯಾದರೆ ಒಂದು ಸಮಯದಲ್ಲಿ ಬಹಳ ಉಪಯೋಗಿ ಅನಿಲವೆನಿಸಿಕೊಂಡಿದ್ದ ಕ್ಲೋರೋಫ್ಲೋರೋ ಕಾರ್ಬನ್ ನಮಗೇ ಉರುಲಾಗಿ ಪರಿಣಮಿಸಿದೆ. ಈ ಅನಿಲ 1930ರಲ್ಲಿ ಥಾಮಸ್ ಮಿಡ್‌ಗ್ಲೆಯಿಂದ ಕಂಡುಹಿಡಿಯಲ್ಪಟ್ಟಿತು. ಅಂದಿನಿಂದ ಶೀತಲೀಕರಣ ಮತ್ತಿತರ ತಂತ್ರಜ್ಞಾನಗಳಲ್ಲಿ ಹೆಚ್ಚಾಗಿ ಉಪಯೋಗಿಸಲಾಯಿತು. ಇತರ ರಾಸಾಯನಿಕಗಳೊಂದಿಗೆ ವರ್ತಿಸದ ಅದು ಓಜೋನ್ ಪದರವನ್ನು ತಿನ್ನುತ್ತಿದೆ ಮಾತ್ರವಲ್ಲ ಹಸಿರು ಮನೆ ಪರಿಣಾಮಕ್ಕೂ ತನ್ನ ಕಾಣಿಕೆ ಸಲ್ಲಿಸಿದೆ. ಹಸಿರು ಮನೆ ಪರಿಣಾಮಕ್ಕೆ ಸಿಎಫ್‌ಸಿಗಳು 20 ಶೇಕಡ ಕಾರಣವಾಗಿದ್ದರೆ, ಇಂಗಾಲದ ಡೈ ಆಕ್ಸೈಡ್ 50 ಶೇಕಡ, ಮಿಥೇನ್ 25 ಶೇಕಡಾ ಕಾರಣವಾಗಿದೆ. ಹಸಿರು ಮನೆ ಪರಿಣಾಮ ಮತ್ತು ಓಜೋನ್ ಪದರದ ತೆಳುವಾಗು

### ಹಸಿರು ಮನೆ ಪರಿಣಾಮ

*ಕೈಗಾರಿಕಾ ಪ್ರಗತಿಯ ಹಸಿಗೂಸೇ ಹಸಿರು ಮನೆ ಪರಿಣಾಮ (GREEN HOUSE EFFECT). ವಿಪರೀತ ಕೈಗಾರೀಕರಣದಿಂದ ವಾತಾವರಣದಲ್ಲಿ ಇಂಗಾಲದ ಡೈಆಕ್ಸೈಡ್‌ನ ಪ್ರಮಾಣ ಜಾಸ್ತಿಯಾಗುತ್ತಿರುವುದೇ ಇದಕ್ಕೆ ಕಾರಣ. ಆದರೆ ಈ ವಿಷಯದ ಬಗ್ಗೆ ಎರಡು ವಾದಗಳಿವೆ. ಭೂಮಿಗೆ ಬರುವ ಸೂರ್ಯನ ಕಿರಣಗಳಲ್ಲಿ ಸ್ವಲ್ಪ ಭಾಗ ಸಾಮಾನ್ಯವಾಗಿ ಪುನಃ ಅಂತರಿಕ್ಷಕ್ಕೆ ಪ್ರತಿಫಲಿಸಲ್ಪಡುತ್ತವೆ. ಆದರೆ ಹೆಚ್ಚಿನ ಪ್ರಮಾಣದಲ್ಲಿರುವ ಇಂಗಾಲದ ಡೈಆಕ್ಸೈಡ್ ಒಂದು ತಡೆಯಾಗಿ ಪರಿಣಮಿಸುತ್ತದೆ, ಮತ್ತು ಆ ಕಿರಣಗಳು ಪುನಃ ಭೂಮಿಗೆ ಪ್ರತಿಫಲಿಸಲ್ಪಡುತ್ತವೆ. ಇದರಿಂದ ಭೂಮಿಯ ಉಷ್ಣತೆ ಹೆಚ್ಚಾಗುತ್ತದೆ. ಈಗಾಗಲೇ ಭೂಮಿಯ ಉಷ್ಣತೆ ಹೆಚ್ಚಾದುದು ಕಂಡುಬಂದಿದೆ. ಇದರಿಂದ ಭೂಮಿಯು ಬಿಸಿಯುಗಕ್ಕೆ ಕಾಲಿಡಬಹುದಾದ ಸಾಧ್ಯತೆ ಜಾಸ್ತಿ ಇದೆ. ವಾತಾವರಣದಲ್ಲಿ ಅಧಿಕಾಂಶ ಪ್ರಮಾಣದಲ್ಲಿ ಇಂಗಾಲದ ಡೈಆಕ್ಸೈಡ್ ಹೊಂದಿರುವ ಗ್ರಹ ಶುಕ್ರ. ಆ ಗ್ರಹವು ವಿಪರೀತ ಬಿಸಿಯಾಗಿರುವುದು ಸಂಶೋಧನೆಗಳಿಂದ ಕಂಡುಬಂದಿದೆ. ಇದೊಂದು ವಾದವಾದರೆ ಭೂಮಿಯು ಮತ್ತೊಂದು ಹಿಮಯುಗಕ್ಕೆ ಕಾಲಿಡಬಹುದೆನ್ನುತ್ತದೆ ಮತ್ತೊಂದು ವಾದ. ಈ ವಾದದ ಪ್ರಕಾರ ಇಂಗಾಲದ ಡೈಆಕ್ಸೈಡ್‌ನ ಪದರು ಸೂರ್ಯನ ಕಿರಣಗಳು ಭೂಮಿಗೆ ಬರುವುದನ್ನು ತಡೆಯುತ್ತದೆ. ಇದರಿಂದ ಭೂಮಿಯ ಉಷ್ಣತೆ ಕಡಿಮೆಯಾಗುತ್ತದೆ. ಪರಿಣಾಮವಾಗಿ ಭೂಮಿಯು ಹಿಮಯುಗಕ್ಕೆ ಕಾಲಿಡಬಹುದು.*

ಏಕೆಯು ಇಂದು ಜಗತ್ತಿನ ವಿಜ್ಞಾನಿಗಳನ್ನು ಕಾಡುತ್ತಿರುವ ಬಹು ದೊಡ್ಡ ಸಮಸ್ಯೆ. 1974ರಲ್ಲಿ ಅಮೆರಿಕದ ರೋಲಂಡ್ ಶೆರ್ವುಡ್ ಅವರು ಮಾರಿಯೋ ಮಲನಾರೊಂದಿಗೆ ಮಾಡಿದ ಸಂಶೋಧನೆಯಲ್ಲಿ ಧ್ರುವ ಪ್ರದೇಶಗಳಲ್ಲಿ ಓಜೋನ್ ಪದರದ ತೆಳುವಾಗುವಿಕೆ ಕಂಡು ಬಂದಿತ್ತು. ಈಗ ಈ ರಂಧ್ರ ಅಗಲವಾಗುತ್ತಿದೆ.

ಆದರೆ ಭೂಮಿಯ ಉಷ್ಣತೆಯ ಏರಿಕೆಯಿಂದ ಹಸಿರು ಮನೆ ಪರಿಣಾಮ ಉಂಟಾಗಬಹುದೆಂಬುದನ್ನು ಕೆಲವು ವಿಜ್ಞಾನಿಗಳು ಅಲ್ಲಗಳೆಯುತ್ತಾರೆ. ಭೂಮಿಯ ಉಷ್ಣತೆಯಲ್ಲಾಗುವ ತುಸು ಬದಲಾವಣೆಯಿಂದ ಆಹಾರದ ಉತ್ಪಾದನೆ ಜಾಸ್ತಿಯಾಗಬಹುದೆಂದು ಅವರು ಹೇಳುತ್ತಾರೆ ಮಾತ್ರವಲ್ಲ ''ಕಾಲಯಾನ ಸಾಗುತ್ತಿರುತ್ತದೆ. ಸಮಸ್ಯೆಗಳನ್ನು ಮಾನವ ನಿವಾರಿಸುತ್ತಾನೆ'' ಎನ್ನುವವರೂ ಇದ್ದಾರೆ. ಈಗಿನ ಬೆಳವಣಿಗೆಗೆ ತಡೆಯೊಡ್ಡುವುದು ಅಸಾಧ್ಯ ಮಾತ್ರವಲ್ಲ ಯಾರಿಗೂ ಹಿಂದೆ ಹೋಗಲು ಮನಸ್ಸಿಲ್ಲ. ಮನುಷ್ಯ ವ್ಯವಸಾಯ ಮಾಡಲು ಆರಂಭಿಸಿದಾಗಲೇ ಪ್ರಕೃತಿಯ ಸಮತೋಲನ ತಪ್ಪಲು ಆರಂಭವಾಗಿದೆ. ಸಣ್ಣ ಪುಟ್ಟ ಬದಲಾವಣೆಗಳನ್ನು ಪ್ರಕೃತಿ ಸರಿಪಡಿಸಿಕೊಳ್ಳುತ್ತದೆ ಎನ್ನುತ್ತಾರೆ ಕೆಲವರು.

ವಾದ ಪ್ರತಿವಾದಗಳು ಏನೇ ಆದರೂ ಅಂಟಾರ್ಕ್ಟಿಕ್ ಪ್ರದೇಶದಲ್ಲಿ ಕಂಡು ಬಂದ ಓಜೋನ್ ರಂಧ್ರದಿಂದಾಗಿ ಎಲ್ಲರೂ ಚಿಂತಿತರಾಗಿದ್ದಾರೆ. ಪ್ರಕೃತಿಯ ಮೇಲಿನ ಮಾನವರ ದೌರ್ಜನ್ಯದಿಂದಾಗಿ ಉಂಟಾದ ದುಷ್ಪರಿಣಾಮದ ಕೆಲವು ಫಲಿತಾಂಶಗಳು ಸಿಗುತ್ತಿವೆ. ಬ್ರಿಟನ್ನಿನ ಎಡ್ವರ್ಡ್ ಗೋಲ್ಡ್‌ಸ್ಮಿತ್ ''ಮೂರನೇ ವಿಶ್ವಯುದ್ಧ ಆರಂಭವಾಗಿದೆ. ಅದು ಪ್ರಕೃತಿಯ ವಿರುದ್ಧ ಆಗಿದೆ'' ಎನ್ನುತ್ತಾರೆ. ಸಮಸ್ಯೆಗಳೆಲ್ಲ ತಮ್ಮಷ್ಟಕ್ಕೆ ಬಗೆಹರಿಯುತ್ತವೆ ಎಂದು ಸುಮ್ಮನೆ ಕೂತರಾಗದು. ಆದರೆ ಸಮಸ್ಯೆಗಳು ಸುಲಭವಾಗಿ ಬಗೆಹರಿಯಲಾಗದಂತಹುಗಳು. ಓಜೋನ್ ಪದರ ತೆಳುವಾಗುತ್ತಿದೆಯೆಂದು ವಾಯುಮಂಡಲಕ್ಕೆ ಓಜೋನ್ ತುಂಬಲು ಸಾಧ್ಯವಿಲ್ಲ. ಧ್ರುವ ಪ್ರದೇಶದ ಮಂಜುಗಡ್ಡೆ ಕರಗಲಾರಂಭಿಸಿದೆಯೆಂದು ಉಧ್ಧಿಮೆಗಳನ್ನು ಮುಚ್ಚಲಾಗುವುದಿಲ್ಲ. ಒಟ್ಟಾರೆ ಉಭಯ ಸಂಕಟ. ಆದರೆ ಮಾನವ ಜನಾಂಗ ಒಟ್ಟಾದರೆ ಸಮಸ್ಯೆ ಪರಿಹಾರ ಕಷ್ಟವೇನಲ್ಲ. ●

## ಮಹಾನ್‌ರ ದೃಷ್ಟಿಯಲ್ಲಿ ಮದುವೆ

★ ಒಂದು ಆದರ್ಶ ಮದುವೆ ಕುರುಡು ಹೆಂಡತಿ ಮತ್ತು ಕಿವುಡು ಗಂಡನಲ್ಲಿ ಮಾತ್ರ ಸಾಧ್ಯ.
**- ಮಾಂಟೆಗೊ**

★ ಉತ್ತಮ ಹೆಂಡತಿಯನ್ನು ಕಣ್ಣಿನಿಂದಲ್ಲದೆ ಕಿವಿಯಿಂದ ಆರಿಸಿಕೊಳ್ಳಬೇಕು. **- ಫುಲ್ಲರ್**

★ ಮದುವೆಗೆ ಮೊದಲು ಹೆಂಡತಿ ಅಳುತ್ತಾಳೆ. ಮದುವೆಯ ನಂತರ ಗಂಡ. **- ಒಂದು ಗಾದೆ**

★ ಆದಷ್ಟು ಬೇಗ ಮದುವೆಯಾಗಬೇಕೆನ್ನುವುದು ಹೆಂಗಸಿನ ದೃಷ್ಟಿಯಿಂದ ಲಾಭದಾಯಕವಾದರೆ ಆದಷ್ಟು ಹೆಚ್ಚು ದಿನ ಮದುವೆಯನ್ನು ಮುಂದೂಡುವುದು ಗಂಡಸಿಗೆ ಲಾಭದಾಯಕ.
**- ಜಾರ್ಜ್ ಬರ್ನಾರ್ಡ್‌ಶಾ**

★ ಮದುವೆಯೆಂಬುದು ಒಂದು ಜೂಜು. ಆದರಲ್ಲಿ ಗಂಡಸು ತನ್ನ ಸ್ವಾತಂತ್ರ್ಯವನ್ನು ಪಣಕ್ಕಿಟ್ಟರೆ ಹೆಂಗಸು ತನ್ನ ಸಂತೋಷವನ್ನು ಪಣಕ್ಕಿಡುತ್ತಾಳೆ. **- ಮೆಡಮಂ ಡೆರಿಯಾ**

★ ಮದುವೆಯೆಂಬುದು ಒಂದು ಭದ್ರವಾದ ಕೋಟೆಯಿದ್ದಂತೆ. ಹೊರಗಿರುವವನು ಒಳಗೆ ಹೋಗಬೇಕೆನ್ನುತ್ತಾನೆ. ಆದರೆ ಒಳಗಿನವನು ಹೊರಗೆ ಬರಲು ಸಾಧ್ಯವಾಗುವುದಿಲ್ಲ. **- ಸ್ವಾಮಿ ವಿವೇಕಾನಂದ**

**(ಸಂಗ್ರಹ) : ಮುರಲೀಧರ ಕುಲಕರ್ಣಿ**



# ಲಾರೆನ್ಸ್ ಪ್ರತಿಭೆಯ ಮತ್ತೊಂದು ಪದರು

ಡಿ. ಎಚ್. ಲಾರೆನ್ಸ್ ಯಾರಿಗೆ ಗೊತ್ತಿಲ್ಲ? ವಿಶ್ವ ಸಾಹಿತ್ಯದ ಕನಿಷ್ಠ ಗಂಧವಿರುವವರೂ ಥಟ್ಟನೆ ಉತ್ತರಿಸುತ್ತಾರೆ: ಲಾರೆನ್ಸ್ ಖ್ಯಾತ ಇಂಗ್ಲೀಷ್ ಕಾದಂಬರಿಕಾರನೆಂದು. ಮನೋವೈಜ್ಞಾನಿಕ ನೆಲೆಯಿಂದ ರೂಪುಗೊಂಡ ಅವನ ಸ್ವೋಪಜ್ಞ ಚಿಂತನೆಗಳು ಚೌಕಟ್ಟಿನೊಳಗೆ ಕವುಚಿ ಕುಳಿತ ಮನಸ್ಸುಗಳಿಗೆ ಸುಲಭವಾಗಿ ದಕ್ಕುವಂತಿರಲಿಲ್ಲ. ಅಂತೆಯೇ ಪ್ರತಿ ಕಾದಂಬರಿಯೊಂದಿಗೂ ವಿವಾದದ ಸುಳಿಗಳನ್ನು ಸೃಜಿಸುತ್ತಿದ್ದ. ಈ ಶತಮಾನದ ಮಾನವ ಸ್ವಾಭಾವಿಕ ರೀತಿಯಲ್ಲಿ ಬಾಳುತ್ತಿಲ್ಲ; ನಾಗರಿಕತೆ ಇವನ ಸಹಜ ಜೀವನ ಸಾಧನೆಗೆ ತೊಡಕಾಗಿದೆ ಎಂಬುದು ಲಾರೆನ್ಸ್‌ನ ಖಚಿತ ನಿಲುವಾಗಿತ್ತು. ಆದರೆ ವಿಶಿಷ್ಟ ಬಗೆಯ ಮಿದುಳ ತರಂಗಗಳನ್ನು ಹೊಮ್ಮಿಸುತ್ತಿದ್ದ ಈ ಕಾದಂಬರಿಕಾರ ಕಲಾವಿದನೂ ಆಗಿದ್ದನೆಂಬುದು ಬಹುಜನರ ಗಮನಕ್ಕೆ ಬಾರದ ಪ್ರತಿಭೆಯ ಪದರು.

ಅಮೆರಿಕೆಯ ಮೆಕ್ಸಿಕೋ ರಾಜ್ಯದಲ್ಲಿ ತಾವೊಸ್ ಒಂದು ಸುಂದರ ಪಟ್ಟಣ. ಇಲ್ಲಿಯ ಹೊಟೇಲೊಂದರ ಕಲಾ ಸಂಗ್ರಹದಲ್ಲಿ ಇವತ್ತಿಗೂ ಲಾರೆನ್ಸ್‌ನ ಕುಂಚದಿಂದ ಮೂಡಿದ ಹತ್ತು ವರ್ಣಚಿತ್ರಗಳು ನೋಡಸಿಗುತ್ತವೆ. ಅಚ್ಚರಿಯ ಸಂಗತಿಯೆಂದರೆ ಅವೆಲ್ಲ ಇಂದಿಗೂ ಇಂಗ್ಲೆಂಡಿನಲ್ಲಿ ನಿಷೇಧಿಸಲ್ಪಟ್ಟಿವೆ. ಲಾರೆನ್ಸ್‌ನ ಅತ್ಯುತ್ತಮ ಚಿತ್ರಗಳೆಲ್ಲವೂ ಇಟಲಿಯಲ್ಲಿ ಕಾದಂಬರಿಕಾರ ಹಕ್ಸಲೇ ಜತೆಗಿದ್ದಾಗ ರಚಿತಗೊಂಡವು.

1929ರಲ್ಲಿ ಈ ಚಿತ್ರಗಳು ಮೊದಲ ಬಾರಿಗೆ ಸಾರ್ವಜನಿಕರ ಅವಗಾಹನೆಗೆಂದು ಲಂಡನ್ನಿನ ವಾರನ್ ಗ್ಯಾಲರಿಯಲ್ಲಿ ಪ್ರದರ್ಶಿತವಾದವು. ಅವುಗಳಲ್ಲಿ ಹದಿಮೂರು ಚಿತ್ರಗಳನ್ನು ವಶಪಡಿಸಿಕೊಂಡ ಪೊಲೀಸರು ಅವೆಲ್ಲ ಅಶ್ಲೀಲ ಚಿತ್ರಗಳೆಂದು ತೀರ್ಮಾನಿಸಿ, ನಾಶಪಡಿಸಬೇಕೆಂದು ತೀರ್ಪಿತ್ತರು. ಆದರೆ ಅಂತಿಮ ಕ್ಷಣದಲ್ಲಿ ಏರ್ಪಟ್ಟ ರಾಜಿಗನುಗುಣವಾಗಿ ಈ ಚಿತ್ರಗಳು ನಾಶದ ಅಂಚಿನಿಂದ ಬಚಾವಾದವು; ಅವುಗಳನ್ನು ತಕ್ಷಣವೇ ದೇಶದಿಂದ ಹೊರಸಾಗಿಸಬೇಕು ಮತ್ತು ಇನ್ನೆಂದೂ ಪ್ರದರ್ಶನಕ್ಕೆ ಇಡಕೂಡದು ಎಂಬ ಷರತ್ತನ್ನು ವಿಧಿಸಲಾಯಿತು.

ಲಾರೆನ್ಸ್ 1930ರಲ್ಲಿ ಅಸು ನೀಗಿದ ನಂತರ ಈ ವರ್ಣಚಿತ್ರಗಳು ಆತನ ಹೆಂಡತಿ ಫ್ರೈಡಾಳೊಂದಿಗೆ ತಾವೊಸ್ ನಗರಕ್ಕೆ ಪಯಣಿಸಿದವು. ಆಕೆಯ ಸಾವಿನ ನಂತರ ಅವಳ ಮೂರನೇ ಗಂಡನಾದ ಆ್ಯಂಜೆಲೋ ರೇವಾಗ್ಲಿ ವರ್ಣಚಿತ್ರಗಳಲ್ಲಿ ಕೆಲವನ್ನು ಲಾ ಫೋಂಡಾ ಹೊಟೇಲಿನ ಮಾಲಿಕರಿಗೆ ಮಾರಿದ. ಈ ಹೊಟೇಲಿನಲ್ಲಿ ಲಾರೆನ್ಸ್‌ನ ಚಿತ್ರಗಳನ್ನು ವೀಕ್ಷಿಸಲು ಒಂದು ಡಾಲರ್ ಪ್ರವೇಶ ಶುಲ್ಕ ನಿಗದಿಪಡಿಸಿದ್ದಾರೆ. ಈತ ಚಿತ್ರಿಸಿದ ಮಾಂಸಲ ಭರಿತ ನಗ್ನ ಚಿತ್ರಗಳು ಮಾನವನ ದೇಹರಚನೆಗೆ ಪೂರ್ತಿ ಹೋಲದಿದ್ದರೂ ನೋಡುಗನ ಸಂವೇದನೆಯ ತಂತುಗಳನ್ನು ಮಿಡಿಸಬಲ್ಲವು.

ಮಾನವ ಪ್ರಕೃತಿ ಸಹಜವಾದ ಜೀವನ ನಡೆಸಬೇಕು. ದೈಹಿಕ ಹಾಗೂ ಮಾನಸಿಕ ಕ್ರಿಯೆಗಳು ಸಹಜ ರೀತಿಯಲ್ಲಿ ಹೊಂದಿಕೊಂಡಿರಬೇಕು ಎಂಬ ಲಾರೆನ್ಸ್‌ನ ತತ್ವ ಆತನ ವರ್ಣಚಿತ್ರಗಳಲ್ಲೂ ಕಾಣಿಸಿಕೊಳ್ಳುತ್ತದೆ. ಮಾಧ್ಯಮ ಯಾವುದಾದರೇನಂತೆ ಸೃಜನ ಶಕ್ತಿಯ ಮೂಲ ದ್ರವ್ಯ ಬದಲಾಗಲು ಸಾಧ್ಯವೇ?

● ತಿಂಗಳೇಶ






## 'ಗಪ್ಲಾಸ್'ನಿಂದ '[illegible]'ವರೆಗೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ''ಗಪ್ಲಾಸ್'' ಅಥವಾ ''ಗಪ್ಪಾಸ್'' ಎಂಬೊಂದು ಪದ ಬಳಕೆಯಲ್ಲಿದೆ. ನಮ್ಮ ಚಿಕ್ಕಂದಿನಲ್ಲಿ, ಬೊಂಬಾಯಿಗೆ ಹೋಗಿ ಬಂದ ತರುಣರು ಈ ಶಬ್ದವನ್ನು ತಂದರೆಂದು ನನ್ನೆಣಿಕೆ. ಪರಿಷತ್ತಿನ ನಿಘಂಟಿನಲ್ಲಿ ಇದು ''ಗಪ್ಪಳಾಸು'' ಎಂದು ನಮೂದಾಗಿದೆ. ಅದರಲ್ಲಿ ಈ ಪದಕ್ಕೆ ತುಳು ''ಗಪಲತ್'' ಸಂಬಂಧ ಹೇಳಿದ್ದಾರೆ. ಮರಿಯಪ್ಪ ಭಟ್ಟರ ತುಳು ನಿಘಂಟಿನಲ್ಲಿ ಅದು ''ಗಪ್ಪೆ'' ಎಂದು ದಾಖಲಾಗಿದೆ. ಅರ್ಥ, ಟೊಳ್ಳು ಮಾತು, ಬುರುಡೆ, ಬೊಗಳೆ, ಲೊಟ್ಟೆ ಇತ್ಯಾದಿಯಾಗಿ ಪ್ರಾದೇಶಿಕವಾಗಿ ಪ್ರಚುರವಾದ ಮಾತುಗಳಿಗೆ ಸಮಾನ. ತುಳು ನಿಘಂಟಿನಲ್ಲಿ ಅದನ್ನು ವಿದೇಶಿ ಶಬ್ದವೆಂದಷ್ಟೇ ಸೂಚಿಸಿದೆ. ಆದರೆ ಯಾವ ಪರಭಾಷೆ? ತಟ್ಟನೆ ಹೊಳೆಯುವುದು ಹಿಂದುಸ್ತಾನಿಯಲ್ಲಿ ಸೇರಿಕೊಂಡ ಅರಬ್ಬಿ ''ಗಫಲತ್''. ಆದರೆ ಉರ್ದು ಕೋಶಗಳ ಪ್ರಕಾರ ''ಗಫಲತ್'' ಎಂದರೆ ತಪ್ಪು, ಅಜಾಗ್ರತೆ, ಪ್ರಮಾದ ಇತ್ಯಾದಿ. ಬದಲಾಗಿ ಹಿಂದುಸ್ತಾನಿಯಲ್ಲಿ ''ಗಪ್'', ''ಗಪ್ಪಾ'' ಎಂಬ ಇನ್ನೊಂದು ಪದವುಂಟು. ಪಾರಸೀಕ ಮೂಲದ ''ಗಪ್ - ಗಪ್ಪಾ'' ಕರಾವಳಿ ''ಗಪಳಾಸ್''ಗೆ ಅರ್ಥದಲ್ಲಿ ತೀರ ಸಮೀಪದಲ್ಲಿದೆ. ಪರಿಷತ್ತಿನ ನಿಘಂಟಿನಲ್ಲಿ ಈ ಪದ ನಮೂದಾಗಿದೆ. ಹಾಗಾದರೆ ಧ್ವನಿ ಸಾಮೀಪ್ಯದಿಂದ ''ಗಪ್ಪಾ''ದ ಮೇಲೆ ''ಗಫಲತ್''ಇನ ಪ್ರಭಾವವಾಗಿ ತುಳು- ಕನ್ನಡ ಗಪಲಾಸ್ - ಗಪಳಾಸ್ ಹುಟ್ಟಿಕೊಂಡಿತೇ? ಅಥವಾ ತುಳುವಿನಲ್ಲಿರುವ ''ಆಸ್'' ಪ್ರತ್ಯಯ (''ತಿರ್ಗಾಸ್'', ''ಬುನ್ಗಾಸ್'' ಇತ್ಯಾದಿಗಳಲ್ಲಿ ಈ ಪ್ರತ್ಯಯ ಕಾಣಸುತ್ತದೆ) ಗಪಳಾಸ್ ರೂಪುಗೊಂಡಿತೇ? ಹೇಳುವುದು ಕಷ್ಟ ಎಂದುಕೊಂಡು ಕೇವಲ ಕೆಲಸಕ್ಕೆ ಬಾರದ ಕುತೂಹಲದಿಂದ ಬಂಗಾಲಿ ಕೋಶದಲ್ಲಿ ಹುಡುಕಿದಾಗ ಅದರಲ್ಲಿ ಇದೇ ಅರ್ಥದ ''ಗಪ್ಲ'' ಎಂಬ ಪದ ಕಂಡು ಚಕಿತನಾದೆ. ಅದು ಬಂಗಾಲಿ ''ಗಲ್ಪ'' (ಕಥೆ, ಕಾಲ್ಪನಿಕ ಆಖ್ಯಾನ) ದ ಒಂದು ರೂಪ ಎಂದು ಆ ಕೋಶ ಹೇಳಿದೆ. ಬಂಗಾಲಿಯಿಂದ ಈ ಪದ ಕರಾವಳಿ ಕನ್ನಡಕ್ಕೆ ಹಾರಿ ಬರುವುದು ಬಹಳ ಅಸಂಭಾವ್ಯವಾದರೂ ಇದು ಶಬ್ದಗಳ ಅನ್ವೇಷಣೆಯ ಮಾರ್ಗ ಎಂಥ ಜಾರು ದಾರಿಯೆಂದು ತೋರಿಸುತ್ತದೆ.

ಗಪಳಾಸ್ ''ಹೊಡೆ''ಯುವುದು ಅಥವಾ ''ಬಿಡು''ವುದಕ್ಕೆ ನಮ್ಮ ದೇಶಿ ಭಾಷೆಗಳಲ್ಲಿ ಶಬ್ದಗಳ ಕೊರತೆಯಿಲ್ಲ. ದೇಶಿ ಪದಗಳಲ್ಲಿ ''ಬುರುಡೆ'' ಬಿಡು, ''ಲೊಟ್ಟೆ'' ಹೊಡೆ, ''ಗೊಳ್ಳು'' ಹರಟೆ, ''ಪೊಳ್ಳು'' ನುಡಿ ಇತ್ಯಾದಿಗಳನ್ನು ಹೆಸರಿಸಬಹುದು. ಇವೆಲ್ಲವೂ ಒಳಗೆ ಟೊಳ್ಳಾಗಿದ್ದು ನೋಟಕ್ಕೆ ದುಂಡೂ ದೊಡ್ಡದೂ

ಆಗಿರುವ ಸ್ಥಿತಿಯನ್ನು ಸೂಚಿಸುವುದು ಗಮನಾರ್ಹವಾಗಿದೆ. ಒಳಗೆ ಹುರುಳಿಲ್ಲದೆ ಸಪ್ಪಳ ಹೆಚ್ಚು ಮಾಡುವ ಪದಾರ್ಥಗಳೇ ಇವೆಲ್ಲ. ದಕ್ಷಿಣ ಕನ್ನಡದಲ್ಲಿ ಪ್ರಚಲಿತವಾದ ಇನ್ನೊಂದು ಪದ ''ಪಟಾಕಿ'' ಬರೇ ಪಟಾಕಿ ಹೊಡೆಯುತ್ತಾನೆ ಅಥವಾ ಬಿಡುತ್ತಾನೆ. ಇದು ನಾವು ದೀಪಾವಳಿ, ಗಣೇಶೋತ್ಸವ ಮೊದಲಾದ ಹಬ್ಬಗಳಲ್ಲಿ ಹಾರಿಸುವ ಬೆಂಕಿಯಾಟದ ವಸ್ತು. ಸಪ್ಪಳ ಬಹಳ ಮಾಡಿದರೂ ಸಪ್ಪಳಕ್ಕೆ ತಕ್ಕ ಭಯಂಕರತ್ವವೇನೂ ಇಲ್ಲದ್ದು. ಇತರ ಕೆಲ ಭಾರತೀಯ ಭಾಷೆಗಳಲ್ಲಿಯೂ ''ಪಟಾಕಿ'' ಎಂಬುದು ಸ್ವಲ್ಪ ಹೆಚ್ಚು ಕಡಿಮೆ ರೂಪದಲ್ಲಿ ಇದೆ. ಮರಾಠಿಯಲ್ಲಿ ''ಫಟಾಕಾ'' ಇದೆ; ಅದು ಮದ್ದಿನ ಸ್ಫೋಟಕಕ್ಕೆ ಮಾತ್ರವಲ್ಲದೆ ಚುರುಕಾದ ಹುಡುಗ ಹುಡುಗಿಯರಿಗೂ ಅನ್ವಯಿಸುತ್ತದೆ. ಹಿಂದಿಯಲ್ಲಿ ''ಪಟಾಕಾ'' ಇದೆ. ಎರಡೂ ಭಾಷೆಗಳಲ್ಲಿ ಈಕಾರಾಂತ ರೂಪವೂ ಇದೆ. ಬಂಗಾಲಿಯಲ್ಲಿ ''ಪಟಕಾ'' ಇದೆ. ಕನ್ನಡದಲ್ಲಿ ''ಪಟಾಕ್ಷಿ'', ''ಫಟಾಕ್ಷಿ'' ಇತ್ಯಾದಿ ರೂಪಗಳೂ ಇವೆ. ತಮಿಳಿನಲ್ಲಿ ''ಪಟಾಚು'', ಮಲಯಾಳಿಯಲ್ಲಿ ''ಪಟ್ಟಾಸ್'' ಇತ್ಯಾದಿಗಳಿವೆ. ಇವೆಲ್ಲವೂ ಅನುಕರಣಮೂಲವಾದ ಪದಗಳೇ. ಕೆಲಸಕ್ಕೆ ಬಾರದ ಹರಟೆಗೆ ಬಹುತರವಾಗಿ ಕರಾವಳಿ ಮತ್ತು ಮಲೆನಾಡಿನಲ್ಲಿ ''ಪಟ್ಟಾಂಗ'', ''ಪಟ್ಟಂಗ'' ಇದೆ. ಹಿಂದಿಯಲ್ಲಿಯೂ ''ಪಟಾಂಗ್'' (''ಊಟ್-ಪಟಾಂ'' ಎಂಬಲ್ಲಿ) ತಲೆ ಹರಟೆಯನ್ನು ನಿರ್ದೇಶಿಸುತ್ತದೆ. ಇವು ಕೂಡ ''ಪಟ್'' ಎಂಬ ಸಪ್ಪಳದ ಅನುಕರಣದಿಂದಲೇ ಹೊರಟವೆಂದು ನನಗನಿಸುತ್ತದೆ. ಪ್ರಯೋಜನಕ್ಕೆ ಬಾರದ ಮಾತುಗಳನ್ನು ''ಟೊಳ್ಳು'' ಎನ್ನುವುದು ನಮ್ಮ ಭಾಷೆಗಳಿಗೆ ಮಾತ್ರ ಸೀಮಿತವಲ್ಲ. ಇಂಗ್ಲೀಷಿನ hollow (= ಟೊಳ್ಳು) ತೆಗೆದುಕೊಳ್ಳಿ. ಅಲ್ಲಿಯೂ hollow promise (ಟೊಳ್ಳು ಭರವಸೆ) hollow threat (ಪೊಳ್ಳು ಬೆದರಿಕೆ) ಇತ್ಯಾದಿ ಇವೆ. Empty (= ಖಾಲಿ) ಪದವನ್ನು ಈ ಅರ್ಥದಲ್ಲಿ ಬಳಸುತ್ತಾರೆ.

ಸುಮ್ಮನೆ ಗಲಾಟೆ ಮಾಡುವವರನ್ನು ''ಗೌಜಿ ಗೋಪಾಲ'' ಎನ್ನುವುದುಂಟು. ಗದ್ದಲಕ್ಕೆ ''ಗೌಜಿ'' ಪದ ಸುಮಾರು ಸಮಾನ. ಇದಕ್ಕೆ ಪ್ರಾಚೀನ ಪ್ರಯೋಗಗಳಿಲ್ಲವಾದ್ದರಿಂದ ಅದು ಈಚೆಗಿನ ಆಮದು ಇರಬೇಕು. ಪರಿಷತ್ತಿನ ನಿಘಂಟು ತುಳು ''ಗೌಜಿ''ಯತ್ತ ಬೆರಳು ತೋರಿಸುತ್ತದೆ. ಆದರೆ ಉರ್ದು ಕೋಶದಲ್ಲಿ ಅರಬ್ಬಿಯಿಂದ ಬಂದ ''ಗೌಜ್'' ಕಾಣಸುತ್ತದೆ. ಅಲ್ಲಿ ಅದರ ಅರ್ಥ ಹರಟೆ, ಮಾತುಕತೆ ಎಂದು. ಅಲ್ಲಿಂದ ಗದ್ದಲಕ್ಕೆ ಎಷ್ಟು ದೂರ? ಸುಮಾರು ಅದೇ ಅರ್ಥದ ''ಗುಲ್ಲು'' ಶಬ್ದದ ಬಳಕೆ ಪುರಂದರದಾಸರಷ್ಟು ಹಳೆಯದು (''ಗುಲ್ಲು ಮಾಡದೆ ಅವರ ಗಲ್ಲ ಕಚ್ಚಿದನೆಂದು'') ಪರಿಷತ್ತಿನ ನಿಘಂಟು ಇದಕ್ಕೆ ತುಳು, ತೆಲುಗು (''ಗೊಲ್ಲು'') ಸಂಬಂಧಗಳನ್ನಷ್ಟೇ ಕೊಡುತ್ತದೆ. ಆದರೆ ಉರ್ದು ಕೋಶಗಳು ಎರಡು ''ಗುಲ್''ಗಳನ್ನು ದಾಖಲಿಸಿವೆ. ಒಂದು ಪಾರಸೀಕ; ಅದರ ಅರ್ಥ ಹೂ, ಗುಲಾಬಿ; ಇನ್ನೊಂದು ಅರಬ್ಬಿ; ಅರ್ಥ ಗದ್ದಲ, ದಾಳಿ. ನಮ್ಮ ''ಗುಲ್ಲು'' ಈ ಎರಡನೆಯದು. ಹಳೆಗಾಲದ ಹಿಂದೀ ಸಿನೆಮಾವೊಂದರ ಜನಪ್ರಿಯ ಹಾಡೊಂದರಲ್ಲಿ ಬರುವ ''ಮೇರಾ ಬುಲ್ ಬುಲ್ ಸೋ ರಹಾ ಹೈ ಶೋರ-ಗುಲ್‌ನ ಮಚಾ'' ಅನೇಕರಿಗೆ ನೆನಪಿರಬಹುದು.

ನಮ್ಮ ರಾಜಕಾರಣಿಗಳು ಒಬ್ಬರಿಗೊಬ್ಬರು ''ಸವಾಲು'' ಹಾಕುತ್ತಾರೆ; ವಕೀಲರು ''ಪಾಟೀ ಸವಾಲು'' ಮಾಡಿ ಸಾಕ್ಷಿದಾರರನ್ನು ಕಂಗೆಡಿಸುತ್ತಾರೆ. ರಾಜಕಾರಣಿಗಳ ಸವಾಲು ಜಗಳಕ್ಕೆ (ವಾದವಿವಾದದ್ದು-ಮಾರಾಮಾರಿಯದಲ್ಲ) ಕರೆ(Challenge)ಯುವುದೆಂಬ ಅರ್ಥದಲ್ಲಿ ತೂರಲ್ಪಡುತ್ತದೆ. ಕಳೆದ ಶತಮಾನದಲ್ಲಿಯೆ ''ಸವಾಲು'' ಕನ್ನಡಕ್ಕೆ ಬಂದಿದೆ. (ರಾಜೇಂದ್ರನಾಮೆ.) ಆದಗೆ ಅದರ ಅರ್ಥ ಅರಬ್ಬಿ ಭಾಷೆಯಲ್ಲಿ ಪ್ರಶ್ನೆ ಎಂದು ಮಾತ್ರ. Challenge ಎಂಬರ್ಥದಲ್ಲಿ ಅದನ್ನು ತಮಿಳರು ಮೊದಲು ಸ್ವೀಕರಿಸಿದಂತೆ ತೋರುತ್ತದೆ. ನಮ್ಮ ರಾಜಕಾರಣಿಗಳ ಸವಾಲು ತಮಿಳಿನಿಂದ ಕೊಂಡದ್ದು-ಬಹುಶಃ ಪತ್ರಿಕೋದ್ಯೋಗಿಗಳ ಮೂಲಕ. ಅಂದ ಹಾಗೆ ''ಸವಾಲ್-ಜವಾಬ್'' (ಪ್ರಶ್ನೆ-ಉತ್ತರ) ಎಂಬ ಒಂದು ಜಾನಪದ ಹಾಡಿನ ಪ್ರಕಾರವೇ ಇದೆ. ಹೆಚ್ಚಾಗಿ ಪ್ರಿಯ-ಪ್ರಿಯಕರಿಯರ ನಡುವೆ ನಡೆಯುವ (ಸುಳ್ಳು) ಜಗಳದ ಶೃಂಗಾರ ಸಂವಾದ ಇದು. ದಾಸರೂ ಈ ಪ್ರಕಾರವನ್ನು ಬಳಸಿದ್ದಾರೆ. ●

– ಪಾವೆಂ.

# ಕಸ್ತೂರಿ ನಡೆದು ಬಂದ ದಾರಿ

ಹವಾಮಾನವು ನಿಮ್ಮ ಆರೋಗ್ಯವನ್ನಷ್ಟೇ ಅಲ್ಲ,

# ಹವೆ ಮತ್ತು

● ಮುರಲೀಧರ

1964 ನವೆಂಬರ್ ಸಂಚಿಕೆಯಿಂದ

ರಜಾ ದಿನಗಳು ಬಂದಿವೆ. ಆದರೂ ನಿಮಗೇಕೋ ಉತ್ಸಾಹವಿಲ್ಲ. ಥೂ, ಈ ಹೊತ್ತಿಗೇ ಈ ಹವಾಮಾನದ ಕಾಟ ಬರಬೇಕೇ ಎಂದು ನೀವು ನಿಮ್ಮ ಆಲಸ್ಯ ಅಸಮಾಧಾನಗಳಿಗಾಗಿ ಹವೆಯನ್ನು ಜರೆದರೆ ಸುತ್ತಮುತ್ತಲಿನ ಸಾಮಾನ್ಯರು ನಿಮ್ಮನ್ನು ತಲೆ ಕೆಟ್ಟವ ಎನ್ನಬಹುದಾದರೂ ವಿಜ್ಞಾನಿಗಳು ಮಾತ್ರ ಹಾಗನ್ನುವುದಿಲ್ಲ. ಹವಾಮಾನವು ಮನುಷ್ಯನನ್ನು ಉತ್ಸಾಹಿಯನ್ನಾಗಿ ಅಥವಾ ನಿರುತ್ಸಾಹಿಯನ್ನಾಗಿ, ಆಲಸಿ ಅಥವಾ ಮಹತ್ವಾಕಾಂಕ್ಷಿಯನ್ನಾಗಿ, ದುಃಖಿ ಅಥವಾ



ಸ್ವಭಾವವನ್ನೂ ಬದಲಿಸಬಹುದು.

# ನಿಮ್ಮ ಪ್ರಕೃತಿ

ಸುಖಿಯನ್ನಾಗಿ ಮಾಡುತ್ತದೆ ಎಂದು ಅವರನ್ನು ತ್ತಾರೆ.

ಮನುಷ್ಯ ವಾಯುಭಾರ ಮಾಪಕ ಯಂತ್ರದಂ ತಿದ್ದಾನೆ. ವಾಯುಭಾರ ಕಡಿಮೆಯಾಗಿದ್ದಾಗ ಆತ ಅಸ್ವಸ್ಥ ಚಿತ್ತನೂ ಯಾವುದೊಂದು ವಿಷಯದಲ್ಲಿ ಏಕಾಗ್ರಚಿತ್ತದಿಂದ ಯೋಚಿಸಲಾರದವನೂ ಆಗುತ್ತಾನೆ. ಪ್ರಾಯಸ್ಥರು ಆಗ ಜಗಳಗಂಟರೂ ಉದ್ರಿಕ್ತ ಭಾವನೆಯವರೂ ನಿರಾಶೆಯಿಂದ ಕೂಡಿದವರೂ ಆಗುತ್ತಾರೆ.

ವಾಯುಭಾರ ಕಡಿಮೆಯಿದ್ದಾಗ ಆತ್ಮಹತ್ಯೆಗಳ ಪ್ರಮಾಣ, ಅಪರಾಧಗಳ ಪ್ರಮಾಣ ಹೆಚ್ಚಿರುವುದು ಕೆಲ ಅಮೆರಿಕನ್ ನಗರಗಳಲ್ಲಿ ಪೊಲೀಸರ ರಿಕಾರ್ಡುಗಳ ಮೇಲಿಂದ ಕಂಡುಬಂದಿದೆ. ಆ ಸಮಯದಲ್ಲಿ ಕಾರಖಾನೆಗಳಲ್ಲಿ ಹೆಚ್ಚು ಅಪಘಾತಗಳೂ ಸಂಭವಿಸುತ್ತವೆ. ''ನಿನ್ನಿನ ಚುರುಕು ವಿಚಾರ ಇಂದು ನಿಷ್ಪ್ರಯೋಜಕ ಎಂದು ನಿಮಗನಿಸಿದರೆ ವಾಯುಭಾರ ಮಾಪಕದತ್ತ ಕಣ್ಣು ಹಾಯಿಸಿ. ನಿಮ್ಮ ಕಷ್ಟದ ಹಿಂದೆ ಹವಾಮಾನವಿದೆಯೆಂದು ಗೊತ್ತಾದರೆ ಅದು ಎಷ್ಟೋ ಮಟ್ಟಿಗೆ ಸಹ್ಯವೆನಿಸೀತು. ಹವಾಮಾನ ಬದಲಾದ ಕೂಡಲೇ ಎಲ್ಲ ಸರಿ ಹೋಗುವುದು ಎಂಬ ವಿಚಾರ ಸಮಾಧಾನವೀಯುತ್ತದೆ'' ಎಂದು ಸಿನಿಸಿನಾಟಿಯ ಎಕ್ಸ್‌ಪೆರಿಮೆಂಟಲ್ ಮೆಡಿಸಿನ್ ಲೆಬೊರೇಟರಿಯ ಡೈರೆಕ್ಟರ್ ಡಾ.ಕ್ಲೆರೆನ್ಸ್ ಮಿಲ್ಸ್ ಹೇಳುತ್ತಾರೆ.

ವಿಚಿತ್ರವಾದರೂ ಸತ್ಯ ಮಾತು ಇದು: 'ಬ್ಯಾಂಕ್ ಆಫ್ ಇಂಗ್ಲಂಡ್'ನ ಅಧಿಕಾರಿಗಳು ದಟ್ಟವಾಗಿ ಮಂಜುಕವಿದ ಹವೆಯಿರುವಾಗ ಮಹತ್ವದ ಕಾಗದ ಪತ್ರಗಳನ್ನು ಕಾರಕೂನರ ಹತ್ತಿರ ಕೊಡುವುದಿಲ್ಲ. ಸಾಮಾನ್ಯ ನಿತ್ಯ ವ್ಯವಹಾರದ ಕೆಲಸಗಳನ್ನು ಮಾತ್ರ ಮಾಡಿಸುತ್ತಾರೆ.

ನಿಮ್ಮ ಮಾತಿನ ವೇಗ ಮತ್ತು ಶ್ರವಣ ಶಕ್ತಿಗಳ ಮೇಲೂ ಹವಾಮಾನದ ಪರಿಣಾಮವಾಗುತ್ತದೆ. ಹವಾಮಾನ ನಿಯಂತ್ರಣ ಮಾಡಬಲ್ಲ ಕೋಣೆಯೊಂದರಲ್ಲಿ ಪ್ರಯೋಗ ಮಾಡಿದಾಗ ವಾಯುಭಾರ ಹೆಚ್ಚು ಮಾಡಲ್ಪಟ್ಟಂತೆ ಮಾತಿನ ವೇಗವೂ ಕಡಿಮೆಯಾದದ್ದು ಕಂಡುಬಂತು.

ಹವಾಮಾನದ ಉಷ್ಣತೆಯು ನಮ್ಮ ಕರ್ತೃತ್ವ ಶಕ್ತಿಯ ಮೇಲೆ ಪರಿಣಾಮ ಮಾಡುತ್ತದೆ. ಮಾನಸಿಕ ಕೆಲಸಕ್ಕೆ ತಂಪು ಹವೆ ಹೆಚ್ಚು ಅನುಕೂಲವಾಗಿದ್ದರೆ ಸ್ವಲ್ಪ ಬೆಚ್ಚನ್ನ ಹವೆಯಲ್ಲಿ ಶಾರೀರಿಕ ಕ್ರಿಯೆ ಉತ್ತಮಗೊಳ್ಳುವುದಾಗಿ ಗೊತ್ತಾಗಿದೆ. 50 ಡಿಗ್ರಿಗಳಲ್ಲಿ ಶ್ರವಣ ಶಕ್ತಿ ಚೆನ್ನಾಗಿರುತ್ತದೆಂದೂ ಅದಕ್ಕಿಂತ ಉಷ್ಣತಾಮಾನ ಹೆಚ್ಚು ಕಡಿಮೆಯಾದಾಗ ಕಡಿಮೆಯಾಗುತ್ತದೆಂದೂ ತಿಳಿದುಬಂದಿದೆ.

ಹವಾಮಾನ ದೈಹಿಕ ಬದಲಾವಣೆಯನ್ನೂ ಮಾಡುತ್ತದೆ ಎಂದರೆ ನಿಮಗೆ ಆಶ್ಚರ್ಯವೆನಿಸೀತು. ವಾಯುಭಾರದ ಹೆಚ್ಚು ಕಡಿಮೆಗಳಿಂದ ಟಿಶ್ಯುಗಳು ಉಬ್ಬುತ್ತವೆ. ಸ್ಪಂಜಿನ ತುಂಡನ್ನು ನೀರಲ್ಲಿ ಅದ್ದಿ ಹಿಡಿದು ಮುಷ್ಟಿಯಲ್ಲಿ ಬಿಗಿಯಾಗಿ ಹಿಡಿಯಿರಿ. ಬಿಗಿತವನ್ನು ಕಡಿಮೆ ಮಾಡಿದಾಗ ಸ್ಪಂಜು ನೀರನ್ನು ಹೀರಿಕೊಳ್ಳುತ್ತದೆ. ಬಿಗಿತ ಹೆಚ್ಚಾದಾಗ ನೀರನ್ನು ಹೊರಗೆ ಬಿಡುತ್ತದೆ.

ದೇಹದಲ್ಲೂ ಇಂಥದೇ ಕ್ರಿಯೆ ನಡೆಯುತ್ತದೆ ಎನ್ನುತ್ತಾರೆ ಡಾ. ಮಿಲ್ಸ್‌ರು. ಹವಾಮಾನದ



ಒತ್ತಡ ಕಡಿಮೆಯಾದಾಗ ದೇಹದ ಟಿಶ್ಯುಗಳು ಕರುಳಿನಿಂದ ಹೆಚ್ಚು ನೀರು ಸೆಳೆದುಕೊಳ್ಳುತ್ತವೆ. 24 ತಾಸುಗಳಲ್ಲಿ ಕಾಲಿನ ಮಾಂಸ ಖಂಡದ ಸುತ್ತಳತೆ ಒಂದಿಂಚಿನಷ್ಟು ಹೆಚ್ಚುವ ಮಟ್ಟಿಗೆ ಹೆಚ್ಚು ನೀರನ್ನು ಇವು ಎಳೆದುಕೊಳ್ಳಬಹುದು!

ಟಿಶ್ಯುಗಳು ಹೀಗೆ ಉಬ್ಬಿದಾಗ ಮಿದುಳಿನಲ್ಲಿ ಒತ್ತಡವನ್ನು ಹೆಚ್ಚಿಸುತ್ತವೆ. ಮಿದುಳು ತಲೆಬುರುಡೆಯಲ್ಲಿ ಬಿಗಿಯಾಗಿ ಕುಳಿತಿರುವುದರಿಂದ ರಕ್ತನಾಳಗಳು ಹಿಂಡಲ್ಪಟ್ಟು ರಕ್ತ ಪ್ರವಾಹ ಕಡಿಮೆಯಾಗುತ್ತದೆ. ಆಗ ನೀವು ಸಿಡುಕಿನವರೂ ನಿರಾಶೆಯಿಂದ ಕೂಡಿದವರೂ ಆಗುತ್ತೀರಿ. ಹವಾಮಾನದ ಒತ್ತಡ ಹೆಚ್ಚಿದಾಗ ಟಿಶ್ಯುಗಳಲ್ಲಿನ ಹೆಚ್ಚಿನ ನೀರು ಹೊರತಳ್ಳಲ್ಪಟ್ಟು ಜೀವನ ಹೆಚ್ಚು ಸುಖಕರವೆನಿಸುತ್ತದೆ.

ದೇಹವು ಉಷ್ಣತೆ ಅಥವಾ ಥಂಡಿಗೆ ಬೆವರಿನ ಗ್ರಂಥಿಗಳ ಚಟುವಟಿಕೆಗಳನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಮತ್ತು ಚರ್ಮಕ್ಕೆ ಹೆಚ್ಚು ರಕ್ತವನ್ನು ಒದಗಿಸಿ ಅಥವಾ ಹೆಚ್ಚು ರಕ್ತವನ್ನು ಅದರಿಂದ ಒಳಗೆಳೆದುಕೊಂಡು ತನ್ನನ್ನು ಒಗ್ಗಿಸಿಕೊಳ್ಳುವುದರಿಂದ ಹವಾಮಾನದ ಪರಿಣಾಮ ದೇಹದ ಮೇಲೆ ಸಾಕಷ್ಟು ಆಗುತ್ತದೆ.

ಆದರೆ ಉಷ್ಣ ಹವೆ ಬಹಳ ದಿನಗಳವರೆಗೆ ಇದ್ದಾಗ ದೇಹ ಇನ್ನೂ ಹೆಚ್ಚಿನ ಉಪಾಯಗಳನ್ನು ಯೋಜಿಸಬೇಕಾಗುತ್ತದೆ. ಥಾಯ್ರಾಯ್ಡ್, ಅಡ್ರಿನಲ್ ಮತ್ತು ಇನ್ನಿತರ ಗ್ರಂಥಿಗಳ ಚಟುವಟಿಕೆ ಕಡಿಮೆಯಾಗುತ್ತದೆ. ಏಕೆಂದರೆ ಆಗ ದೇಹದಲ್ಲೇ ಉತ್ಪನ್ನವಾಗುವ ಉಷ್ಣತೆಯ ಪ್ರಮಾಣ ತಗ್ಗುವುದು ಅವಶ್ಯವಿರುತ್ತದೆ. ಇದರ ಅರ್ಥವೆಂದರೆ ವಿಚಾರ ಮಾಡಲು ಮತ್ತು ಕೃತಿಗಳನ್ನೆಸಗಲು ಬೇಕಾಗುವ ಶಕ್ತಿಯ ಉತ್ಪಾದನೆ ಕಡಿಮೆಯಾಗುವುದು.

ಜನನ ಪ್ರಮಾಣದ ಮೇಲೂ ಹವಾಮಾನದ ಪರಿಣಾಮವಾಗುತ್ತದೆ. ದನಗಳನ್ನು ಸಮಶೀತೋಷ್ಣ ಹವೆಯ ಪ್ರದೇಶದಿಂದ ಉಷ್ಣ ಪ್ರದೇಶಗಳಿಗೆ ಒಯ್ದಿಡಿರಿ. ಆಗ ಅವುಗಳ ಪ್ರಜೋತ್ಪತ್ತಿ ಪ್ರಮಾಣ ಕಡಿಮೆ ಆಗಿರುತ್ತದೆ. ಈ ಮಾತು ಮನುಷ್ಯರಿಗೂ ಅನ್ವಯಿಸುತ್ತದೆ ಎಂದು ಅಮೆರಿಕನ್ ವಿಜ್ಞಾನಿ ಡಾ. ಇ. ಡಬ್ಲ್ಯು. ಹಾರ್ಟ್‌ಮನ್ ಹೇಳುತ್ತಾರೆ. ವೀರ್ಯೋತ್ಪಾದನೆಗೆ ಉಷ್ಣ ಒಂದು ಉತ್ತಮ ತಡೆಯಾಗಿದೆ.

ಬೇಸಿಗೆಯಲ್ಲಿ ಗರ್ಭ ನಿಂತು ಚಳಿಗಾಲದಲ್ಲಿ ಹುಟ್ಟುವ ಮಕ್ಕಳ ಬುದ್ಧಿ ಶಕ್ತಿಯ ಮೇಲೆ ಪರಿಣಾಮವಾಗುವ ಸಂಭವವಿದೆಯೆಂದು ಸಂಶೋಧಕರು ಕಂಡುಕೊಂಡಿದ್ದಾರೆ. ಗರ್ಭಧಾರಣೆಯ ಮೂರನೆಯ ತಿಂಗಳಲ್ಲಿ ಕೂಸಿನ ಮಿದುಳಿನ ಮಹತ್ವದ ಭಾಗಗಳು ತಯಾರಾಗುತ್ತವೆ. ಆಗ ಸಂಭವಿಸಿದ ಯಾವುದೇ ದೋಷ ಅಥವಾ ಕೇಡು ಕೂಸಿನ ಬುದ್ಧಿಶಕ್ತಿಯ ಮೇಲೆ ಪರಿಣಾಮ ಮಾಡ

ಬಹುದು. ತಾಯಿ ತನ್ನ ಆಹಾರ ಪ್ರಮಾಣವನ್ನು - ವಿಶೇಷತಃ ಪ್ರೋಟಿನುಗಳು - ಕಡಿಮೆ ಮಾಡಿದರೆ (ಬೇಸಿಗೆಯಲ್ಲಿ ಹಾಗೆ ಮಾಡುವ ಸಂಭವ ವಿಶೇಷವಾಗಿರುತ್ತದೆ) ಇಂಥ ಕೇಡುಂಟಾಗಬಹುದು.

ಉಷ್ಣವಲಯದ ಮಕ್ಕಳು ಬೇಗನೆ ಬೇಗನೆ ಪ್ರಾಯಕ್ಕೆ ಬರುತ್ತಾರೆ ಎಂದು ಸಾಮಾನ್ಯ ನಂಬಿಗೆಯಿದೆ. ಆದರೆ ವಸ್ತುಸ್ಥಿತಿ ವಿರುದ್ಧವಿದೆ. ಈ ಮಕ್ಕಳು ನಿಧಾನವಾಗಿ ಬೆಳೆದು ತಡವಾಗಿ ಪ್ರಾಯಕ್ಕೆ ಬರುತ್ತಾರೆ. ಇಲ್ಲಿಯ ಹುಡುಗಿಯರು ಥಂಡಿ ಪ್ರದೇಶಗಳ ಹುಡುಗಿಯರಿಗಿಂತ ಒಂದೆರಡು ವರ್ಷ ತಡವಾಗಿ ಋತುಮತಿಯರಾಗುತ್ತಾರೆ. ಅವರ ಫಲವತ್ತತೆಯು ನಿಧಾನವಾಗುತ್ತದೆ ಎಂದು ಡಾ. ಮಿಲ್ಸ್ ಹೇಳಿದ್ದಾರೆ. ಇದಕ್ಕೆ ಕಾರಣವೆಂದರೆ ಹೊರಗಿನ ಹವೆ ಉಷ್ಣವಾದಷ್ಟೂ ದೇಹಕ್ಕೆ ತನ್ನಲ್ಲಿಯ ಉಷ್ಣತೆಯನ್ನು ನಿವಾರಿಸಿಕೊಳ್ಳುವುದು ಕಠಿಣವಾಗುವುದು. ಇದರಿಂದ ಕೋಶಗಳ ಮೇಲೆ ಪರಿಣಾಮವಾಗಿ ಬೆಳವಣಿಗೆ ಕುಂಠಿತವಾಗುವುದು.

ಹವಾಮಾನ ಬದಲಾಗಿರುವಾಗ ಅದರ ಕಲ್ಪನೆ ನಮಗೆ ಮೊದಲೇ ಬರುವುದುಂಟು. ಸಂಧಿವಾತವಿರುವವರಿಗೆ ಇದರ ಅನುಭವ ಬರುವುದೆಂಬುದು ಈಗ ಖಂಡಿತವಾದ ಮಾತಾಗಿದೆ. ಪೆನ್ಸಿಲ್ವೇನಿಯ ವಿಶ್ವವಿದ್ಯಾಲಯದ ವೈದ್ಯಕೀಯ ಶಾಲೆಯ ಒಂದು ಕೋಣೆಯಲ್ಲಿ ಕೃತಕವಾಗಿ ಹವಾಮಾನ ಬದಲಾವಣೆ ಮಾಡುವ ವ್ಯವಸ್ಥೆ ಇಟ್ಟು ಅಲ್ಲಿ ಸಂಧಿವಾತದ ರೋಗಿಗಳನ್ನಿಟ್ಟರು. ಅನಂತರ ಅವರಿಗೆ ತಿಳಿಸದೇನೇ ಬಿರುಗಾಳಿಗೆ ಪೂರ್ವ ಭಾವಿಯಾದ ಹವಾಮಾನವನ್ನು ಕೃತಕವಾಗಿ ನಿರ್ಮಿಸಿದರು. ಒಡನೆ ರೋಗಿಗಳು ಸಂಧಿಗಳು ನೋಯುತ್ತವೆಂದು ಹೇಳತೊಡಗಿದರಲ್ಲದೆ ನಿಜವಾಗಿ ಅವರ ಕಾಲು ಕೈಗಂಟುಗಳು ಊದಿಕೊಂಡವು! ವಾತರೋಗಗಳು ಒಟ್ಟಿನಲ್ಲಿ ಬಿರುಗಾಳಿಗೆ ಮೊದಲು ಉಲ್ಬಣಿಸುತ್ತವೆ. ಹಾಗೆಯೇ ಗುಡುಗು ಮಿಂಚು ಮತ್ತು ಸೂರ್ಯನ ಕಲೆಗಳಿಂದ ವಾತಾವರಣದಲ್ಲಿ ವಿದ್ಯುತ್ ಕ್ರಿಯೆ





ಹೆಚ್ಚಾದಾಗ ಬುದ್ಧಿ ಭ್ರಮೆಯಾಗುವವರ ಸಂಖ್ಯೆ ಹೆಚ್ಚುತ್ತದೆಂದು ಡಾ. ಬೇಕರ್ ಹೇಳುತ್ತಾರೆ.

ಎದೆಯ ರೋಗ, ಅಸ್ತಮಾ ಮುಂತಾದ ವಿಕಾರಗಳುಳ್ಳವರಿಗೆ ಯಾವ ಬಗೆಯ ಹವೆಯಿಂದ ಪರಿಣಾಮವಾಗುತ್ತದೆ ಎಂದು ಕಂಡುಹಿಡಿಯಲು ವಿಜ್ಞಾನಿಗಳೀಗ ಪ್ರಯತ್ನಿಸುತ್ತಿದ್ದಾರೆ.

ಹವಾಮಾನ ಪರಿಸ್ಥಿತಿ ರಕ್ತದ ಒತ್ತಡ ಮತ್ತು ಹೃದಯದ ಮೇಲೂ ಪರಿಣಾಮ ಮಾಡುತ್ತದೆ. ಹಾಲಂಡಿನಲ್ಲಿ ರಕ್ತದಾನಿಗಳನ್ನು ಪರೀಕ್ಷಿಸುತ್ತಿದ್ದ ಡಾಕ್ಟರರು ಜನವರಿ ಮತ್ತು ಫೆಬ್ರುವರಿ ತಿಂಗಳುಗಳಲ್ಲಿ ರಕ್ತದಾನಿಗಳಲ್ಲಿ ಶೇಕಡ 77 ಜನರಲ್ಲಿ ಸಾಮಾನ್ಯ ಮಟ್ಟಕ್ಕಿಂತ ಶೇಕಡ 20ರಷ್ಟು ರಕ್ತದ ಒತ್ತಡ ಹೆಚ್ಚಿಗಿರುವುದನ್ನು ಕಂಡುಕೊಂಡರು. ಹವಾಮಾನ ಬದಲಾವಣೆಯಿಂದ ರಕ್ತದಲ್ಲೂ ಬದಲಾವಣೆಯಾಗುವುದು ನಡೆಸಿರುವ ಅಭ್ಯಾಸಗಳಿಂದ ಗೊತ್ತಾಗಿದೆ.

ಕೆಂಪು ರಕ್ತಕಣಗಳಲ್ಲಿದ್ದ ಆಕ್ಸಿಜನ್‌ನ್ನು ಸಂಗ್ರಹಿಸಿ ಅದನ್ನು ದೇಹದ ತುಂಬೆಲ್ಲ ಓಡಾಡಿಸುವ ಹೆಮೊಗ್ಲೋಬಿನ್ ನಮ್ಮ ದೇಹದಲ್ಲಿ ಚಳಿಗಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುತ್ತದೆ. ಆದರೆ ಆಗ ರೋಗಗಳೊಡನೆ ಹೋರಾಡುವ ಗಾಮಾಗ್ಲೋಬಿನ್ ಕಡಿಮೆಯಾಗಿರುತ್ತವೆ. ನ್ಯೂಯಾರ್ಕಿನ ಡಾಕ್ಟರರೊಬ್ಬರ ಅಭಿಪ್ರಾಯದಂತೆ ಹೃದಯ ವಿಕಾರಗಳು ಬೇಸಿಗೆಗಿಂತ ಚಳಿಗಾದಲ್ಲೆ ಹೆಚ್ಚಾಗಿ ಸಂಭವಿಸುತ್ತವೆ. ಉಷ್ಣಹವೆಯ ದೇಶಗಳಿಗಿಂತಲೂ ಸಮಶೀತೋಷ್ಣ ಪ್ರದೇಶಗಳಲ್ಲಿ ರಕ್ತನಾಳಗಳು ಗಟ್ಟಿಯಾಗುವುದು ಹೆಚ್ಚೆಂದೂ ಹವಾಮಾನದಲ್ಲಿನ ಅತಿರೇಕ ಬದಲಾವಣೆ ಹೃದಯದ ಬಡಿತವನ್ನು ವಿಪರೀತ ಹೆಚ್ಚಿಸಬಹುದು ಅಥವಾ ಬಂದು ಮಾಡಿಬಿಡಬಹುದೆಂದೂ ಈ ಡಾಕ್ಟರರು ಹೇಳುತ್ತಾರೆ.

ಅತಿ ಉಷ್ಣತೆ ಅಥವಾ ಅತಿ ಚಳಿ ಹೃದಯ ರೋಗವಿರುವವರಿಗೆ ಗಂಡಾಂತರಕಾರಿಯಾಗಬಲ್ಲದು. ದೇಹ ಬದಲಾದ ಹವಾಮಾನಕ್ಕೆ ಹೊಂದಿಕೊಳ್ಳಲು ತುಂಬ ಯತ್ನ ಮಾಡಬೇಕಾಗುತ್ತದೆ. ಹೀಗೆ ಮಾಡುವಾಗ ಮೊದಲಿನ ದಿನಗಳಲ್ಲಿ ಹೃದಯ ಎಂದಿಗಿಂತ ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಹವೆಯು ತಂಪಾಗಿದ್ದಷ್ಟೂ ಜನ ಶರ್ಕರಾಪಿಷ್ಟ ಪದಾರ್ಥಗಳನ್ನು ತಿನ್ನುವುದು ಹೆಚ್ಚು. ಇದೇ ಬಹುಶಃ ಚಳಿ ದೇಶಗಳ ಜನರ ಹಲ್ಲುಗಳು ಹೆಚ್ಚಾಗಿ ಕೆಡುವುದಕ್ಕೆ ಕಾರಣವಾಗಿರಬೇಕು.

ಉಷ್ಣವಲಯದಲ್ಲಿ ಬಹುಮೂತ್ರ ರೋಗವನ್ನು ಹೆಚ್ಚು ಸುಲಭದಲ್ಲಿ ನಿಗ್ರಹಿಸಬಹುದು ಎಂದು ಕೆಲ ತಜ್ಞರು ಅಭಿಪ್ರಾಯ ಪಡುತ್ತಾರೆ. ಉಷ್ಣತಾಮಾನ ಒಮ್ಮೆಲೆ ತಗ್ಗಿದಾಗ ದಮ್ಮಿನ ರೋಗಿಗಳು ಚಡಪಡಿಸಹತ್ತುತ್ತಾರೆ. ಉಷ್ಣತಾಮಾನ ಒಮ್ಮೆಲೆ ಹೆಚ್ಚಿ ವಾಯುಭಾರ ಕಡಿಮೆಯಾದಾಗ ಅಪೆಂಡಿಸ್ಯಾಟಿಸ್ ರೋಗದ ಭಯ ಹೆಚ್ಚಾಗಿರುತ್ತದೆ. ರಕ್ತನಾಳಗಳು ರಕ್ತದ ಗಟ್ಟಿಗಳಿಂದ ಬಂದಾಗುವುದು ಬಿಸಿ ತೇವ ಹವೆಯಲ್ಲಿ ಹೆಚ್ಚಾದರೆ ತಂಪು ಹವೆ ಅರೆ ತಲೆ ನೋವು, ಅಪಸ್ಮಾರ, ಹೊಟ್ಟೆ ನೋವು, ಮಿದುಳಿನ ಆಘಾತಗಳಿಗೆ ಹೆಚ್ಚು ಅವಕಾಶ ಕೊಡುತ್ತದೆ.

ಅಂದರೆ ಹವಾಮಾನ ಬದಲಾವಣೆ ಎಲ್ಲರ ಮೇಲೂ ಒಂದೇ ರೀತಿಯ ಪರಿಣಾಮ ಮಾಡುತ್ತದೆಯೇ? ಇಲ್ಲ. ಸಾಮಾನ್ಯವಾಗಿ ಆರೋಗ್ಯವಂತರ ಮೇಲೆ ರೋಗಪ್ರಕೃತಿಯವರ ಮೇಲಾದಷ್ಟು ಪರಿಣಾಮ ಆಗುವುದಿಲ್ಲ. ಗಂಡಸರಿಗಿಂತಲೂ ಹೆಂಗಸರು ಹೆಚ್ಚು ಚೆನ್ನಾಗಿ ಹವಾಮಾನ ಬದಲಾವಣೆಗೆ (ವಿಶೇಷತಃ ಚಳಿಗೆ) ಒಗ್ಗಿಕೊಳ್ಳುವಂತೆ ಕಾಣಿಸುತ್ತದೆ.

ಮನುಷ್ಯನ ಆರೋಗ್ಯ ಮತ್ತು ಚಟುವಟಿಕೆಗಳ ಮೇಲೆ ಹವೆಯಲ್ಲಿನ ಆಯೋನುಗಳು ಸಾಕಷ್ಟು ಪರಿಣಾಮ ಮಾಡುತ್ತವೆಂದು ಊಹಿಸಲು ಅವಕಾಶವಿದೆ. ರಶಿಯನ್ ವಿಜ್ಞಾನಿಗಳು ಜಟ್ಟಿಗಳ ಸಹನಾಶಕ್ತಿಯನ್ನು ಹೆಚ್ಚಿಸಲು ನೆಗೆಟಿವ್ ಆಯೋನುಗಳನ್ನು ಉಪಯೋಗಿಸಿದರೆಂಬ ವರದಿಗಳಿವೆ. ದಿನಕ್ಕೆ 15 ನಿಮಿಷಗಳಂತೆ 15 ದಿವಸಗಳ ಅವಧಿ ಆಯೋನುಗಳನ್ನು ಆಘ್ರಾಣಿಸಿದ ಜಟ್ಟಿಗಳು ಶಕ್ತಿಮಾಪಕ ಯಂತ್ರದಲ್ಲಿ ಶೇಕಡಾ 44ರಷ್ಟು ಹೆಚ್ಚು ಶಕ್ತಿ ತೋರಿಸಿದರೆಂದು ಅವರು ಹೇಳುತ್ತಾರೆ. ಆದರೆ ಇದಕ್ಕೆ ವಿರುದ್ಧವಾದ ಸಂಗತಿಗಳು ಬೆಳಕಿಗೆ ಬಂದಿವೆ. ಅಮೆರಿಕದ ಡಾ. ಇಗೊ ಕಾರ್ನ್‌ಬ್ಲೂ ಅವರು ನೆಗೆಟಿವ್ ಆಯೋನುಗಳಿಂದ ಪ್ರಯೋಜನ ಹೊಂದದ ರೋಗಿಗಳಿಗೆ ಪೊಜಿಟಿವ್ ಆಯೋನುಗಳಿಂದ ಲಾಭವಾಗಬಹುದು ಎಂದಿದ್ದಾರೆ.

ಔಷಧಿಗಳ ಶಕ್ತಿ ಮೇಲೆ ಹವಾಮಾನದ ಪರಿಣಾಮ ವಿಚಾರವಾಗಿ ಸಂಶೋಧನೆ ನಡೆಸಬೇಕಾದ ಅಂಶ ಮಹತ್ವದ್ದಾಗಿದೆ. ಒಂದೇ ಔಷಧಿ ಬೇರೆ ಬೇರೆ ಹವಾಮಾನದಲ್ಲಿ ಒಬ್ಬನೇ ವ್ಯಕ್ತಿಯ ಮೇಲೆ ಬೇರೆ ಬೇರೆ ರೀತಿಯಲ್ಲಿ ಪರಿಣಾಮ ಮಾಡಬಹುದು ಎಂದು ಅಮೆರಿಕನ್ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಕ್ಲೈಮೆಟಾಲಜಿ ಹೇಳಿದೆ. (ಆಯುರ್ವೇದದಲ್ಲಿ ಒಂದೇ ಔಷಧಿಯನ್ನು ಕೊಡುವಾಗ ಆ ಆ ಋತುಮಾನಕ್ಕನುಗುಣವಾದ ಪಥ್ಯ ಮತ್ತು ಅನುಪಾನಗಳಿಂದ ಕೊಡುವ ರೂಢಿಯಿದೆ.)

ಹವಾಮಾನದ ಪರಿಣಾಮದಿಂದ ನಮ್ಮನ್ನು ರಕ್ಷಿಸಿಕೊಳ್ಳಲು ನಾವೇನು ಮಾಡಬಲ್ಲೆವು? ಯಾವುದೊಂದು ವಿಶಿಷ್ಟ ರೋಗದ ಮೇಲೆ ಹವಾಮಾನದ ಪರಿಣಾಮವಾಗಿದ್ದರೆ ಡಾಕ್ಟರರು ಪರಿಹಾರ ಸೂಚಿಸಬಲ್ಲರು. ಆದರೆ ಒಟ್ಟಿನಲ್ಲಿ ಸಾಮಾನ್ಯವಾದ ಪರಿಣಾಮವಾಗಿದ್ದರೆ ಹವಾಮಾನಕ್ಕೆ ಹೊಂದಿಕೊಳ್ಳಲು ನಾವು ಕಲಿಯಬೇಕಾಗುವುದು. ಯಾವ ಬಗೆಯ ಹವೆ ನಮ್ಮ ಮೇಲೆ ಯಾವ ಬಗೆಯ ಪರಿಣಾಮ ಮಾಡುತ್ತದೆಂದು ನಿರೀಕ್ಷಣೆಯಿಂದ ತಿಳಿದುಕೊಳ್ಳಬೇಕು. ಆಗ ಉತ್ಸಾಹವಿಲ್ಲದಿರುವ ಪ್ರಸಂಗಗಳಲ್ಲಿ ಹಗುರ ಕೆಲಸಗಳನ್ನು ಮಾಡುವ ಕಾರ್ಯಕ್ರಮವಿಟ್ಟುಕೊಂಡು ಹೆಚ್ಚಿನ ತೊಂದರೆಯಿಂದ ಉಳಿದುಕೊಳ್ಳಲು ಬರುತ್ತದೆ.

ಆದರೆ ಒಂದು ಮಾತು ಮಾತ್ರ ಎಲ್ಲರೂ ನೆನಪಿಟ್ಟುಕೊಳ್ಳಬೇಕು. ಇಂದು ಹವಾಮಾನ ಕೆಟ್ಟಿದ್ದರೆ ನಾಳೆ ಚೆನ್ನಾಗಿ ಆಗೇ ಆಗುತ್ತದೆ. ಅದರಂತೆ ಇಂದು ಕಷ್ಟವೆನಿಸಿದರೆ ನಾಳೆ ಸುಖ ಅನಿಸುತ್ತದೆ. ●

## ಸಿನಿಕರು :

ಜನರು ಬಹುತೇಕ ಕಾರ್ಯಗಳನ್ನು ಸ್ವಾರ್ಥಕ್ಕಾಗಿ ಮಾಡುತ್ತಾರೆ, ಇತರರಿಗೆ ಒಳ್ಳೆಯದಾಗಲಿ ಎಂದು ಪ್ರಾಮಾಣಿಕತೆಯಿಂದ, ಘನೋದ್ದೇಶದಿಂದ ಕೆಲಸ ಮಾಡುವವರು ಇಲ್ಲವೇ ಇಲ್ಲ ಎಂದು ನಂಬುವ ಗ್ರೀಕ್ ತಾತ್ವಿಕ ಪಂಥದವರೇ ಸಿನಿಕರು. ಅರಾಮು, ಭೋಗ, ಸಿರಿವಂತಿಕೆ ಹಾಗೂ ಸಂಪ್ರದಾಯಗಳನ್ನು ತೀವ್ರವಾಗಿ ಟೀಕಿಸುತ್ತಿದ್ದ ಈ ಪಂಥದವರಲ್ಲಿ ಡಯೋಜನಿಸ್ ಪ್ರಮುಖ ಹೆಸರು. ಅವನು ಹಗಲು ಹೊತ್ತಿನಲ್ಲೇ ದೀಪವನ್ನು ಹಿಡಿದು ಪ್ರಾಮಾಣಿಕರಿಗಾಗಿ ಹುಡುಕಾಡುತ್ತಿದ್ದನಂತೆ. ಆತ ಸುಖಜೀವನದ ಸಮಸ್ತ ವಸ್ತುಗಳನ್ನು ತ್ಯಜಿಸಿ ಟಬ್ಬೊಂದರಲ್ಲಿ ಜೀವಿಸುತ್ತಿದ್ದನಂತೆ. ಗ್ರೀಕ್ ಭಾಷೆಯ ಕುನಾಸ್ (Kunos) ಎಂಬ ಪದದ ಆಂಗ್ಲ ರೂಪಾಂತರವೇ ಸಿನಿಕ್. ಹಾಗೆಂದರೆ ನಾಯಿ ಎಂಬ ಅರ್ಥವಂತೆ. ಗ್ರೀಕ್ ಸಿನಿಕರು ನಾಯಿಗಳು ಗುರುಗುಟ್ಟುವಂತೆ, ಕಡಿಯುವಂತೆ ಎದುರಾಳಿಗಳನ್ನು ಟೀಕಿಸುತ್ತಿದ್ದರಂತೆ.

● ಕೆ.ವೆಂಕಣ್ಣಾಚಾರ್




ಓಲ್ಗಾ ಇವನೋವ್ನಾಳ ಮದುವೆಗೆ ಆಕೆಯ ಗೆಳೆಯ ಗೆಳತಿಯರೆಲ್ಲಾ ಬಂದಿದ್ದರು. ಆಕೆ ತನ್ನ ಇನಿಯನನ್ನು ಅವರಿಗೆ ಪರಿಚಯ ಮಾಡಿಸುತ್ತಿದ್ದ ಬಗೆ ವಿಚಿತ್ರ-

''ನೋಡಿ! ಈತನಲ್ಲೇನೋ ಅದ್ಭುತವಿದೆ ಎಂದು ನಿಮಗೆ ಅನಿಸುವುದಿಲ್ಲವೇ?''

ವರ ಓಸಿಪ್ ಸ್ಟಿಪನೋವಿಚ್ ಡಿಮೋವ್ ಒಬ್ಬ ವೈದ್ಯ. ಎರಡೆರಡು ಆಸ್ಪತ್ರೆಗಳಲ್ಲಿ ದುಡಿಯುತ್ತಿದ್ದಾತ. ಸ್ವಂತ ಸಂಪಾದನೆ ವರ್ಷಕ್ಕೆ ಐನೂರು ರೂಬಲ್ಸ್ ಮೀರದು. ಹೀಗಿರುವಾಗ ಅವನ ಬಗ್ಗೆ ಹೇಳಲು ಏನಿದೆ? ಓಲ್ಗಾಳ ಗೆಳೆಯ ಗೆಳತಿಯರೆಲ್ಲಾ ಅಸಾಮಾನ್ಯ ವ್ಯಕ್ತಿಗಳು, ಪ್ರತಿಷ್ಠಿತರು, ಗೌರವಾನ್ವಿತರು, ಪ್ರತಿಭಾವಂತರು. ಒಬ್ಬಾತ ಒಳ್ಳೆಯ ನಟ, ಜೊತೆಗೆ ನಾಟಕಶಾಲೆಯ ಹಾಡುಗಾರ. ಈತನಲ್ಲೇ ಓಲ್ಗಾ ಸುಶ್ರಾವ್ಯವಾಗಿ ಹಾಡಲು ಕಲಿತದ್ದು. ಆತ ಹೇಳುತ್ತಿದ್ದ-

''ಓಲ್ಗಾ, ಸೋಮಾರಿತನ ಬಿಟ್ಟರೆ ನಿನ್ನಂತಹ



ರಷ್ಯನ್ ಮೂಲ:
ಆಂಟನ್ ಚೆಕಾಫ್

೦

ಕನ್ನಡಕ್ಕೆ:
ಎಚ್. ಆರ್. ಚಂದ್ರವದನರಾವ್



ಗಾಯಕಿ ಮತ್ತೆಲ್ಲೂ ಸಿಗಲಾರಳು.''

ಇನ್ನೊಬ್ಬ ರಿಯೋಬಾವ್‌ಸ್ಕಿ. ಅವನೊಬ್ಬ ಪ್ರತಿಭಾವಂತ ಚಿತ್ರಗಾರ. ತನ್ನ ಇತ್ತೀಚಿನ ಚಿತ್ರವನ್ನು ಐನೂರು ರೂಬಲ್ಸ್‌ಗೆ ಮಾರಿದ್ದ. ಇಪ್ಪತ್ತೈದು ವರ್ಷದ ಚೆಲುವ ರಿಯೋಬಾವ್‌ಸ್ಕಿ ಓಲ್ಗಾಳ ಕಲೆಯ ಬಗ್ಗೆ ದೊಡ್ಡ ಭವಿಷ್ಯವನ್ನೇ ನುಡಿದಿದ್ದ. ಆ ಪಿಟೀಲು ವಾದಕ ಅಭಿಪ್ರಾಯದಲ್ಲಿ ಓಲ್ಗಾಳಂತಹ ಸಹಜ ಸಂಗಾತಿ ಯಾರಿಗೂ ದೊರೆಯಲಾರದೆಂದು. ಇವರುಗಳಲ್ಲದೆ ಕತೆಗಳನ್ನು ಬರೆದು ಸಾಕಷ್ಟು ಪ್ರಸಿದ್ಧನಾದ ಕತೆಗಾರನೊಬ್ಬನೂ ಆ ಗುಂಪಿನಲ್ಲಿದ್ದ. ಈ ಕಲಾ ಜಗತ್ತಿಗೆ ರೋಗ ಬಂದಾಗಷ್ಟೆ ವೈದ್ಯರ ನೆನಪು. ಇವರುಗಳ ನಡುವೆ ಆ ಎತ್ತರದ, ಅಗಲ ಭುಜದ ಡಿಮೋವ್ ಪೂರಾ ಹೊರಗಿನವ. ಅವನ ಗಡ್ಡ ಜೋಲಾನ ದಾಡಿಯನ್ನು ಹೋಲುತ್ತಿದ್ದರೂ ಅವನೇನು
ಬರಹಗಾರನೇ?

ಕಲಾವಿದ ರಿಯೋಬಾವ್‌ಸ್ಕಿ ಓಲ್ಗಾಳ ಉಡುಪನ್ನು, ಅವಳ ಸೌಂದರ್ಯವನ್ನು ಮನದುಂಬಿ ಹೊಗಳಿದ. ಆದರೆ ಓಲ್ಗಾಳಿಗೆ ಅತ್ತ ಕಡೆ ಗಮನವೇ ಇಲ್ಲ. ಆತನ ಕೈಯನ್ನು ಎಳೆಯುತ್ತಾ ಆಕೆ ಹೇಳಿದಳು,

''ಆದರೆ, ಇಲ್ಲಿ ಕೇಳು ರಿಯೋಬಾವ್‌ಸ್ಕಿ! ಎಲ್ಲಾ ಅಚ್ಚರಿಯಂತೆ ನಡೆದುಹೋಯ್ತು ... ಅಪ್ಪನಿಗೆ ಖಾಯಿಲೆಯಾಗಿ ಡಿಮೋವ್ ಇದ್ದ ಆಸ್ಪತ್ರೆಯಲ್ಲೇ ಇದ್ದರು .... ಆಗ ಡಿಮೋವ್

ಹಗಲಿರುಳೆನ್ನದೆ ಅವನ ಸೇವೆ ಮಾಡಿದರು. .... ಅಪ್ಪನನ್ನು ನೋಡುವುದಕ್ಕೆ ಒಂದು ರಾತ್ರಿ ಬಂದಾಗ, ನನ್ನನ್ನು ಕಂಡ ಆತ, 'ನಿನ್ನಲ್ಲಿ ನಾನು ಪೂರ್ಣವಾಗಿ ವಶವಾಗಿ ಬಿಟ್ಟಿದ್ದೇನೆ' ಎಂದು ಹೇಳಿದ. ನಂತರ ನಡೆದದ್ದು ಅದ್ಭುತವೇ ಸರಿ. ಅಪ್ಪ ಸತ್ತು ಕೆಲವು ದಿವಸಗಳಲ್ಲಿ ಇದ್ದಕ್ಕಿದ್ದಂತೆ ಒಂದು ದಿನ ನನ್ನ ಕೈ ಹಿಡಿಯಲು ಅನುಮತಿ ಕೇಳಿದ. ಅಂದು ರಾತ್ರಿ ನಾನೆಷ್ಟು ಅತ್ತೆ ಅಂದರೆ ಅದು ನನ್ನ ದಿಂಬಿಗೇ ಗೊತ್ತು. ಆ ಕ್ಷಣ ನಾನು ಅವನವಳಾಗಿ ಬಿಟ್ಟೆ ...... ಈಗ ನೋಡು, ನಮ್ಮ ಮದುವೆಯಾಗುತ್ತಲಿದೆ .... ಆತನಲ್ಲಿ ನಿನಗೇನೂ ಅದ್ಭುತ ಕಾಣಸುತ್ತಿಲ್ಲವೇ? ಛೆ! ದೀಪ ಬಹು ಮಂಕು. ಅಲ್ಲದೆ ಅವನ ಪಾರ್ಶ್ವ ಮುಖ ಮಾತ್ರ ಕಾಣಸುತ್ತಿದೆ. ಈ ಕಡೆ ತಿರುಗಿ ದಾಗ ನೋಡು, ಏ ರಿಯೋಬಾವ್‌ಸ್ಕಿ ನೋಡು, ಆತನ ಸುಂದರ ಹಣೆ ಏನೋ ಸೋಜಿಗ ಸೂಚಿಸು ತ್ತಿದೆ, ನೋಡು.''

ಅದೇ ಉತ್ಸಾಹದಿಂದ ಆಕೆ ಪತಿಯನ್ನು ಕೂಗಿ ಹೇಳಿದಳು.

''ಓ, ಡಿಮೋವ್, ನಿನ್ನ ವಿಷಯವನ್ನೇ ಹೇಳುತ್ತಿದ್ದೆ. ಇತ್ತ ಬಾ. ಇವನು ರಿಯೋಬಾ ವ್‌ಸ್ಕಿ. ಹಸ್ತಲಾಘವ ಕೊಡು. ನೀವಿಬ್ಬರೂ ಗೆಳ ಯರಾಗಬೇಕು.''

ಡಿಮೋವ್ ಸರಳ ಸುಂದರ ನಗೆಯೊಡನೆ ಆ ಕಲಾವಿದನಿಗೆ ಹಸ್ತಲಾಘವ ಕೊಟ್ಟು ಮೃದು ವಾಗಿ-

''ತಮ್ಮ ಪರಿಚಯವಾದದ್ದು ಸಂತೋಷ. ನನ್ನ ಸಂಗಡಿಗನೊಬ್ಬ 'ರಿಯೋಬಾವ್‌ಸ್ಕಿ' ಅಂತ ಇದ್ದಾನೆ. ನಿಮ್ಮ ನೆಂಟನೇನು ಆತ?'' ಎಂದು ಕೇಳಿದ.

ಓಲ್ಗಾ ಇಪ್ಪತ್ತೆರಡರ ಸುಂದರ ತರುಣಿ. ಡಿಮೋವ್ ಮೂವತ್ತೊಂದರ ಯುವಕ. ಮದು ವೆಯ ನಂತರ ಅವರು ತುಂಬಾ ಸುಖವಾಗಿ ಕಾಲ ಕಳೆದರು. ಓಲ್ಗಾ ತನ್ನ ಮನೆಯನ್ನೆಲ್ಲ ತನ್ನ, ತನ್ನ ಗೆಳೆಯರ ಮುಗಿದ, ಮುಗಿಯದ ಚಿತ್ರಗಳಿಂದ ಅಲಂಕರಿಸಿದಳು. ಊಟದ ಮನೆ ತೈಲ ಚಿತ್ರಗ ಳಿಂದ ಕಂಗೊಳಿಸುವಂತೆ ಮಾಡಿದಳು. ತನ್ನ ಮಲ ಗುವ ಕೋಣೆ ಕಲಾತ್ಮಕವಾಗಿ ಕಾಣುವಂತೆ ಮಂದ ಪ್ರಕಾಶ ಬೀರುವ ಪರದೆಗಳನ್ನು ಹಾಕಿ ಮಂಚದ ಮೇಲೆ ತೂಗುದೀಪಗಳನ್ನು ಇಳಿಬಿಟ್ಟಳು. ಒಟ್ಟಿ ನಲ್ಲಿ ನೂತನ ದಂಪತಿಗಳನ್ನು ಭೇಟಿ ಮಾಡಿದವ ರೆಲ್ಲಾ ಅವರದು ಸುಂದರ ಗೃಹವೆಂದು ಹೊಗಳು ತ್ತಿದ್ದರು.

ಬೆಳಗ್ಗೆ ಹನ್ನೊಂದು ಘಂಟೆಗೆ ಏಳುತ್ತಿದ್ದ ಓಲ್ಗಾ ಕೊಂಚ ಹೊತ್ತು ಪಿಯಾನೋ ನುಡಿಸು ವಳು. ವಾತಾವರಣ ಚೆನ್ನಾಗಿದ್ದಲ್ಲಿ ಸ್ವಲ್ಪ ಹೊತ್ತು ತೈಲ ಚಿತ್ರಾಭ್ಯಾಸ ಮಾಡುವಳು. ಒಂದು ಗಂಟೆಯ ಹೊತ್ತಿಗೆ ತನ್ನ ಡ್ರೆಸ್ ಮೇಕರ್ ಬಳಿ ಹೋಗುವಳು. ಇಲ್ಲಿ ಈಕೆ ಬಲು ಕುಶಲಮತಿ. ಓಲ್ಗಾ ಆಗಲೀ, ಡಿಮೋವ್ ಆಗಲೀ ಅಂತಹ ಶ್ರೀಮಂತರಲ್ಲದಿದ್ದರೂ ಡ್ರೆಸ್ ಮೇಕರ್ ಬಳಿ ಈಕೆ ಕೊಡುವ ಸಲಹೆಗಳಿಂದ ಹಳೆಯ ರೇಷ್ಮೆ ತುಂಡು, ಹರಿದ ಲೇಸು ಇವುಗಳು ಓಲ್ಗಾಳ ಮೈ ಮೇಲೆ ಬರೀ ಬಟ್ಟೆಗಳಂತೆ ಕಾಣುತ್ತಿರಲಿಲ್ಲ; ಒಂದೊಂದೂ ಸುಂದರ ಸ್ವಪ್ನದಂತೆ ತೋರು ತ್ತಿತ್ತು. ಅಲ್ಲಿಂದ ಆಕೆ ನಟ ಗೆಳತಿಯರ ಬಳಿ ಬಿಸಿ ಬಿಸಿ ಸುದ್ದಿಗಳನ್ನು ಸಂಗ್ರಹಿಸಲೆಂದೋ, ಅಥವಾ ಅಂದಿನ ಆಟದ ಫ್ರೀ ಟಿಕೆಟ್ ಪಡೆಯಲೋ ಹೋಗುವಳು. ಕೊನೆಯಲ್ಲಿ ಯಾವುದಾದರೂ ಸ್ಟುಡಿಯೋದ ಪ್ರವೇಶ. ಯಾರನ್ನು ಅವಳು ಪ್ರತಿ ಷ್ಠಿತ ವ್ಯಕ್ತಿ ಎಂದು ಭಾವಿಸಿದ್ದಳೋ ಅವರು ಇವ ಳನ್ನು ಸಮಾನಳಂತೆ ಗೌರವಿಸುವರು. ಅವಳ ಅಭಿರುಚಿ, ಕುಶಲತೆ, ಜಾಣ್ಮೆ ಇವನ್ನು ಹೊಗಳು ವರು. ಎಂದಾದರೊಮ್ಮೆ ಈ ಗುಣಗಳು ತಕ್ಕ ಫಲ ಕೊಡುವವು ಎಂದು ಖಚಿತವಾಗಿ ಹೇಳುವರು. ಅವಳು ಹಾಡಿ, ನಟಿಸಿ, ಚಿತ್ರಿಸಿ, ಚಿತ್ರಗಳಿಗೆ ರೂಪದರ್ಶಿಯಾಗಿ ಎಲ್ಲದರಲ್ಲೂ ಅದ್ವಿತೀಯ ವ್ಯಕ್ತಿ ಎನಿಸಿಕೊಳ್ಳುವಳು. ಎಲ್ಲಕ್ಕಿಂತ ಜಾಣ್ಮೆಯ ಸಂಗತಿ ಎಂದರೆ ಆಕೆ ಹೊಸ ಮುಖಗಳನ್ನು ಪರಿ ಚಯ ಮಾಡಿಕೊಳ್ಳುವ ಸೊಬಗು. ಆಕೆಯನ್ನು ಒಮ್ಮೆ ನೋಡಿ, ಎರಡು ಮಾತನಾಡಿದರೆ ಸಾಕು ಆತ ಪೂರ್ಣ ಪರಿಚಿತನಾಗುವನು. ಅವಳ ಮನೆಗೆ

ಆಹ್ವಾನಿತನಾಗುವನು. ಆಕೆಗೆ ಪ್ರತಿಷ್ಠಿತ ವ್ಯಕ್ತಿಗಳೆಂದರೆ ಅತ್ಯಂತ ಹೆಮ್ಮೆ. ರಾತ್ರಿಯಲ್ಲಿ ಅವರದೇ ಕನಸು. ಇಂತಹ ಹೊಸ ಪರಿಚಯ ದಾಹ ಆಕೆಗೆ ಅಡಗದು. ಹೊಸ ಹೊಸ ಸ್ನೇಹವಾದಂತೆಲ್ಲಾ ಹಳಬರನ್ನು ಅಷ್ಟೇ ಬೇಗ ಮರೆತೂ ಬಿಡುವಳು.

ಮನೆಗೆ ಹಿಂತಿರುಗಿ ಐದು ಘಂಟೆಗೆ ಗಂಡನೊಡನೆ ಊಟ. ಗಂಡನ ಬುದ್ಧಿ, ಸಾಮರ್ಥ್ಯ, ಹಾಸ್ಯ ಮನೋಭಾವ, ಆತನ ಸರಳತೆ ಇವುಗಳ ಬಗ್ಗೆ ಆಕೆಗೆ ಹುಚ್ಚು ಪ್ರೇಮ.

''ಡಿಮೋವ್, ನೀನೆಂತಹ ಜಾಣ, ಎಂತಹ ಸಹೃದಯಿ ಗೊತ್ತೆ? ನಿನ್ನ ಒಂದೇ ಕೊರತೆಯೆಂದರೆ ಕಲೆಯ ಬಗ್ಗೆ ನಿನ್ನ ನಿರಾಸಕ್ತಿ. ಸಂಗೀತ, ಚಿತ್ರವೆಂದರೆ ನೀನು ಮೂಗು ಮುರಿಯುವಿ.''

''ನಾನೇನು ಮಾಡಲಿ ಓಲ್ಗಾ? ಅವುಗಳು ನನಗೆ ಅರ್ಥವೇ ಆಗುವುದಿಲ್ಲ'' ಮೃದುವಾಗಿ ನಗುತ್ತಾ ಉತ್ತರಿಸುತ್ತಿದ್ದ ಡಿಮೋವ್. ''ನನ್ನ ಓದು ವಿಜ್ಞಾನ, ಔಷಧ ಇವುಗಳಲ್ಲೇ ಮುಗಿಯಿತು. ಕಲೆಗೆ ನನ್ನ ಬಳಿ ವೇಳೆಯೇ ಇಲ್ಲ'' ಎಂದ ಮಾತು ಮುಂದುವರಿಸುತ್ತಾ -

''ಆದರೆ ಇದು ತೀರಾ ಭಯಂಕರ'' ಓಲ್ಗಾ ಪ್ರತಿಭಟಿಸುತ್ತಿದ್ದಳು.

''ನಿನ್ನ ಗೆಳೆಯರಿಗೆ ವಿಜ್ಞಾನದ ಬಗ್ಗೆ ತಿಳುವಳಿಕೆ ಇದೆಯೇನು? ಪ್ರತಿಭಾವಂತರು ತಮ್ಮ ಜೀವನವನ್ನೇ ಮುಡಿಪಾಗಿಟ್ಟು ಕಲಾತ್ಮಕವಾದ ಕೃತಿಗಳನ್ನು ರಚಿಸಿ, ಧನಿಕ ಬುದ್ಧಿವಂತರು ತಮ್ಮ ಅಪಾರ ಹಣವನ್ನು ಅವುಗಳಿಗಾಗಿ ವ್ಯಯ ಮಾಡಿದಲ್ಲಿ, ಎರಡು ವಿರುದ್ಧ ಧೃವಗಳಿಗೆ ಹೊಂದಾಣಿಕೆಯಾದಂತಾಗುತ್ತದೆ, ಅಲ್ಲವೇ? ನನಗೆ ಗೊತ್ತಿಲ್ಲ ಅಂದ ಮಾತ್ರಕ್ಕೆ ನಾನು ಅವನ್ನು ತಿರಸ್ಕರಿಸುತ್ತೇನೆ ಎಂದಲ್ಲ.''

ಆಗ ಓಲ್ಗಾ ಸಂತಸ ಭರಿತಳಾಗುತ್ತಿದ್ದಳು. ತನ್ನ ಗಂಡನ ಪ್ರಾಮಾಣಿಕತನ ಮತ್ತು ಹೃದಯ ಶ್ರೀಮಂತಿಕೆ ಬಗೆಗೆ. ಊಟವಾದೊಡನೆ ಸಂಗೀತ ಕಚೇರಿಗೆಂದು ಹೊರಡುತ್ತಿದ್ದ ಓಲ್ಗಾ ವಾಪಸ್ಸಾಗುವುದು ಮಧ್ಯ ರಾತ್ರಿಗೇ.

ಪ್ರತಿ ದಿನವೂ ಇದೇ ರೀತಿ.



ಪ್ರತಿ ಬುಧವಾರ ಸಂಜೆ ಪಾರ್ಟಿ. ನೃತ್ಯವಾಗಲೀ, ಇಸ್ಪೀಟಾಗಲಿ, ಅಂದು ಇಲ್ಲ. ಓಲ್ಗಾ, ಅವಳ ಅತಿಥೇಯರು ಆ ಸಂಜೆಯನ್ನು ಕಲೆಗೆ ಮುಡಿಪಾಗಿಡುವರು. ಹಾಡು, ಚಿತ್ರ, ಪುಸ್ತಕ ವಿಮರ್ಶೆ .... ಡಿಮೋವ್ ಯಾರ ಕಣ್ಣಿಗೂ ಬೀಳನು. ಕೆಲವರಿಗೆ ಅವನ ನೆನಪೂ ಇಲ್ಲ. ಆದರೆ 11.30ಕ್ಕೆ ಸರಿಯಾಗಿ ಊಟದ ಮನೆ ಬಾಗಿಲು ತೆರೆಯುವುದು. ಗಂಭೀರವಾಗಿ ಮುಗುಳ್ನಗೆಯಿಂದ ಡಿಮೋವ್,

''ಗೆಳೆಯರೇ, ಉಪಾಹಾರಕ್ಕೆ ದಯಮಾಡಿಸಿ'' ಎಂದು ಆಹ್ವಾನಿಸುವನು.

ಪ್ರತಿವಾರವೂ ಅದೇ ತಿನಿಸುಗಳ ಪುನರಾವರ್ತನೆ. ಓಡ್ಕಾ, ಆಯಸ್ಟರ್ಸ್, ಚೀಸ್, ವೈನ್ ಊಟದ ನಡುವೆ ಕೇಳಿಸುತ್ತಿದ್ದ ಓಲ್ಗಾಳ ಇನಿದನಿ,

''ಓ, ಡಿಮೋವ್, ನೀನು ಎಷ್ಟು ಚೆನ್ನಾಗಿ ಕಾಣಿಸುತ್ತಿರುವೆ ಗೊತ್ತೇ? ಗೆಳೆಯರೇ, ಒಮ್ಮೆ ಇತ್ತ ಕಡೆ ತಿರುಗಿ ಡಿಮೋವ್‌ನನ್ನು ನೋಡಿ. ಡಿಮೋವ್, ನಿನ್ನ ಮುಖ ಪೂರಾ ತೋರಿಸು. ಬಂಗಾಳದ ಹುಲಿಯ ಮುಖದಂತೆ ಸೌಂದರ್ಯ ಮತ್ತು ಕರುಣೆಗಳ ಆಗರ ನನ್ನ ಡಿಮೋವ್‌ನ ಮುಖ.''

ಗೆಳೆಯರು ಮೌನವಾಗಿ ಒಂದು ಕ್ಷಣ ಡಿಮೋವ್‌ನ ಮುಖ ನೋಡುವರು, ಮರುಕ್ಷಣ ಮರೆಯುವರು.

ತರುಣ ದಂಪತಿಗಳ ಜೀವನ ಸೊಗಸಾಗಿತ್ತು. ಮಧ್ಯೆ ಮಧ್ಯೆ ಕೊಂಚ ಏರು ಪೇರು. ಆಸ್ಪತ್ರೆಯಲ್ಲಿನ ಅಂಟು ಜಾಡ್ಯ ಸೋಂಕಿಸಿಕೊಂಡು ಡಿಮೋವ್ ತನ್ನ ಸಾಗರದ ಅಲೆಗಳಂತಿದ್ದ ಕಪ್ಪು ಕೂದಲನ್ನು ಕಳೆದುಕೊಳ್ಳಬೇಕಾಯಿತು. ಆಗ

ಓಲ್ಗ್ಗ್ಳ ಕಣ್ಣೀರೆಷ್ಟು? ಎರಡು ದಿನಗಳ ನಂತರ ಆತನ ಎರಡು ಬೆರಳುಗಳಿಗೆ ನಂಜು. ಓಲ್ಗಾ ಭಯಪಟ್ಟು ದೇವರಲ್ಲಿ ಪ್ರಾರ್ಥನೆ ಮಾಡಿದಳು.

* * *

ವಸಂತ ಋತುವಿನ ನಿರೀಕ್ಷೆಯಲ್ಲಿದ್ದಾಳೆ ಓಲ್ಗಾ. ವಸಂತವೆಂದರೆ ಸಾವಿರ ಹಿಗ್ಗು ಅವಳಿಗೆ! ಏಪ್ರಿಲ್, ಮೇ, ಜೂನ್, ತಿಂಗಳುಗಳಲ್ಲಿ 'ಕಲಾವಿದರ ಪ್ರವಾಸ'. ಕಲಾವಿದೆ ಓಲ್ಗಾ ಕೂಡಾ ಮುಖ್ಯ ಪಾಲುಗಾರಳು. ಕಲಾವಿದರುಗಳಿಗಾಗಿಯಂದೇ ಜನ ಜಂಗುಳಿಯಿಂದ ದೂರವಾಗಿ ನಿರ್ಮಿಸುವ ಶಾಂತವಾದ ಪರ್ಣಕುಟೀರ, ತಂಗಾಳಿಯಲ್ಲಿ ವಾಯು ಸೇವನೆ, ತಿಳಿ ಸಮುದ್ರದಲ್ಲಿ ಮೀನುಗಳ ಬೇಟೆ, ಕಾಡು ಹಕ್ಕಿಗಳ ಉನ್ಮತ್ತ ಉಲಿತ ..... ಒಂದೇ, ಎರಡೇ ಆಕರ್ಷಣೆಗಳು? ಓಲ್ಗಾ ತನ್ನ ಪ್ರಯಾಣಕ್ಕೆಂದು ಉತ್ತಮವಾದ ಉಡುಪುಗಳನ್ನು ತಯಾರಿಸಲು ಹೇಳಿದ್ದಾಳೆ; ಹಾಗೆಯೇ, ತನ್ನ ಅವಶ್ಯಕ ಸಾಮಗ್ರಿಗಳನ್ನು ಜೋಡಿಸಿಕೊಳ್ಳುತ್ತಿದ್ದಾಳೆ. ದಿನ ದಿನವೂ ಅವಳ ತೈಲ ಚಿತ್ರಗಳನ್ನು ನೋಡಿ, ಟೀಕಿಸಿ, ಕೊನೆಯಲ್ಲಿ ಹೊಗಳಿ ಹೋಗುತ್ತಿದ್ದಾನೆ ರಿಯೋಬಾವ್‌ಸ್ಕಿ.

ಡಿಮೋವ್ ತನ್ನ ಓಲ್ಗಾಳನ್ನು ಕಂಡು ಆಗಲೇ ಎರಡು ವಾರಗಳು ಕಳೆದಿವೆ. ಆತನದು ಬಿಡುವಿಲ್ಲದ ದುಡಿತ. ಇಂದೇ ಅನಿರೀಕ್ಷಿತವಾಗಿ ಬಿಡುವು ಸಿಕ್ಕಿರುವುದು. ಅಂತೆಯೇ ಮತ್ತೆ ಆಕೆಯೊಡನೆ ಕೂಡಿಯಾಡಿ, ತನ್ನ ದೇಹಾಲಸ್ಯವನ್ನು ಮರೆಯಬೇಕೆಂಬ ಹೆಬ್ಬಯಕೆಯಿಂದ ಬರುತ್ತಿದ್ದಾನೆ. ಆತನ ಕೈ ಪದೇ ಪದೇ ತಿಂಡಿ ಹಣ್ಣುಗಳ ಪೊಟ್ಟಣಗಳನ್ನು ಸವರುತ್ತಿದೆ. ಪ್ರಯಾಣ ಆತನನ್ನು ಆಯಾಸಗೊಳಿಸಿದೆ. ಕಲಾವಿದರುಗಳೊಡನೆ ಅವಳು ಇಳಿದುಕೊಂಡಿರುವ ಕುಟಿರವನ್ನು ಕಂಡೊಡನೆ ಅವನಲ್ಲಿ ನವ ಚೇತನ ಉಕ್ಕುತ್ತಿದೆ. ನೇರವಾಗಿ ಅವನು ಮನೆಯೊಳಗೆ ನುಗ್ಗುತ್ತಾನೆ. ಮೌನ ಆವರಿಸುತ್ತಿದೆ. ಒಡತಿ ಮನೆಯಲ್ಲಿಲ್ಲವೆಂದೂ, ಇನ್ನೇನು ಬರುವಳೆಂದೂ ಓಲ್ಗಾಳ ಪರಿಚಾರಿಕೆ ಹೇಳುತ್ತಾಳೆ. ಡಿಮೋವ್ ನಿಟ್ಟುಸಿರುಬಿಟ್ಟು, ಕುಳಿತು ಸುತ್ತೆಲ್ಲಾ ಅವಲೋಕಿಸುತ್ತಾನೆ.

ಅತ್ಯಂತ ಅಸಹ್ಯವಾದ ಆ ಕುಟಿರ, ಅದರಲ್ಲಿರುವ ಮೂರೇ ಮೂರು ಕೋಣೆ, ಓರಣವಿಲ್ಲದ ಗಂಡಸರ ಬಟ್ಟೆ ಬರೆಗಳು ..... ಇದ್ದಕ್ಕಿದ್ದಂತೆ ಕೇಳಿ ಬಂದ ಅಪರಿಚಿತ ಗಂಡಸಿನ ಧ್ವನಿ,

''ತಮಗೆ ಓಲ್ಗಾ ಇವನೋವ್ನಾ ಬೇಕೇನು? ಇನ್ನೇನು ಬರಬಹುದು ..... ಕೊಂಚ ಟೀ ಕೊಡಲೇ?''

ಡಿಮೋವ್ ಬೇಡವೆಂದ. ನಂತರ ಓಲ್ಗಾಳೊಂದಿಗೆ ತಿಂಡಿ ತಿನ್ನುವಾಗ ಹೊಟ್ಟೆಯ ಗತಿ? ಡಿಮೋವ್ ಕಾದಿದ್ದು ಎರಡೇ ನಿಮಿಷ. ದೊಡ್ಡ ಹ್ಯಾಟು ಧರಿಸಿ, ಕುಲು ಕುಲು ನಗುತ್ತಾ ರಿಯೋಬಾವ್‌ಸ್ಕಿಯೊಂದಿಗೆ ಒಳ ಬಂದ ಓಲ್ಗಾಳಿಗೆ ಮೊದಲು ಕಂಡಿದ್ದು ಪತಿಯೇ. ಸಂತಸದಿಂದ ಆಕೆಯ ಕಣ್ಣುಗಳು ಮಿನುಗಿದವು. ಮುಖ ಆರಕ್ತವಾಯಿತು.

''ಅರೆ, ಡಿಮೋವ್! ನೀನೇ ಏನು ಬಂದದ್ದು! ಇಷ್ಟು ದಿನ ಬಾರದೇ ಉಳಿದದ್ದು ಏಕೆ ಹೇಳು, ಡಿಮೋವ್?''

''ನನ್ನದು ಮುಗಿಯದ ಕೆಲಸ ಓಲ್ಗಾ. ಅದು ಮುಗಿದಾಗ ರೈಲು ಸಿಗುವುದಿಲ್ಲ'' ಒಮ್ಮೆಲೇ ಆಯಾಸವೆಲ್ಲಾ ಪರಿಹಾರವಾಗಿ, ತಾನೊಂದು ಬಿಳೀ ಮೋಡದಲ್ಲಿ ತೇಲುತ್ತಿರುವಂತೆ ಕಲ್ಪಿಸಿಕೊಳ್ಳುತ್ತಾ ಡಿಮೋವ್ ಹೇಳಿದ.

''ನನಗೆಂತಹ ಸಂತಸ ಈಗ! ನಿನ್ನದೇ ಸ್ವಪ್ನವಾಗಿ ಬಿಟ್ಟಿತ್ತು ನನಗೆ. ನಾನೆಷ್ಟು ನಿನ್ನನ್ನು ಪ್ರೀತಿಸ್ತೀನಿ ಅನ್ನುವುದು ನಿನಗೆ ಗೊತ್ತಿದ್ದರೆ ..... ಈಗ ನೀನೇ ನನಗೆ ದಾರಿ ತೋರಿಸಬೇಕು,'' ಮುದ್ದಾಗಿ ನಗುತ್ತಾ, ಗಂಡನ ಕೈನೊಡನೆ ತನ್ನದನ್ನು ಸೇರಿಸುತ್ತಾ, ಬಿಡುತ್ತಾ ಓಲ್ಗಾ ಮುಂದುವರಿಸಿದಳು.

''ನಿನಗೆ ಗೊತ್ತೇ? ನಾಳೆ ನಾವೆಲ್ಲಾ ಗೆಳೆಯ ನೋರ್ವನ ಮದುವೆಗೆ ಹೋಗಬೇಕು. ಚರ್ಚಿನಲ್ಲಿ ಮದುವೆ ಮುಗಿದೊಡನೆ, ಹುಡುಗಿಯ ಮನೆಗೆ. ಎಲ್ಲಾ ಪ್ರಕೃತಿಯ ಹಿನ್ನೆಲೆಯಲ್ಲಿ. ಹಸಿರು ಹುಲ್ಲು, ಹಾಡುವ ಹಕ್ಕಿಗಳು, ಹೊಂಬಿಸಿಲು ಇವುಗಳ ನಡುವೆ. ಆದರೆ, ಅಯ್ಯೋ ದೇವರೆ, ನನಗೆ ತೊಡಲು ಒಂದೇ ಒಂದು

ಸುಂದರ ಉಡುಪೂ ಇಲ್ಲಿಲ್ಲ! ಡಿಮೋವ್, ನೀನು ಬಂದದ್ದು ಎಷ್ಟು ಸಮಯೋಚಿತವಾಗಿದೆ ಗೊತ್ತಾ! ನೋಡು, ಈ ಬೀಗದ ಕೈ ತೆಗೆದುಕೋ. ನನ್ನ ವಾರ್ಡ್ ರೋಬ್ ನಿನಗೆ ಗೊತ್ತೇ ಇದೆ. ಅಲ್ಲಿ ಕೆಳಗಿನ ಅಂತಸ್ತಿನಲ್ಲಿ ಎಡಗಡೆ ನನ್ನ ಗುಲಾಬೀ ಬಣ್ಣದ ಉಡುಪುಗಳಿವೆ. ಅವುಗಳಿಗೆ ಹೊಂದುವ ಕೈ ಚೀಲಗಳನ್ನು ನೀನು ಕೊಂಡೇ ತರಬೇಕು. ಹೂವುಗಳು ..... ಯಾವುದು? ಎಲ್ಲಾ ಬಣ್ಣದ್ದೂ ತೆಗೆದುಕೊಂಡು ಬಾ ನಾನೇ ಆರಿಸಿಕೊಳ್ಳುತ್ತೇನೆ ....''

''ನಾಳೆ ತಂದರೆ ಆದೀತು, ಅಲ್ವೇ ಓಲ್ಗಾ?''

''ನಾಳೆ! ಅಬ್ಬ !! ನಿನಗೆ ಅರ್ಥವೇ ಆಗುವುದಿಲ್ಲವಲ್ಲ? ಮದುವೆ ನಾಳೆ ಹನ್ನೊಂದು ಗಂಟೆಗೆ. ಈಗಲೇ ಇರುವ ರೈಲಿನಲ್ಲಿ ನೀನು ಹೋಗದೇ ಇದ್ದರೆ, ನಾಳೆ ಸಕಾಲದಲ್ಲಿ ಬರಲಾಗುವುದಿಲ್ಲ. ಬೇಗ ಸಿದ್ಧನಾಗು, ಡಿಮೋವ್. ಪ್ಲೀಸ್ .....''

ಡಿಮೋವ್ ನಿಧಾನವಾಗಿ ಏಳುತ್ತಾ ಅಂದ-

''ಹಾಗೇ ಆಗಲಿ.''

''ನಿನ್ನನ್ನು ಹೀಗೆಯೇ ಕಳುಹಿಸಲು ನನಗೆ ಎಷ್ಟು ದುಃಖ ನಿನಗೆ ಗೊತ್ತೇ?'' ಕಣ್ಣೀರು ತೊಟ್ಟಿಕ್ಕಿತು. ಓಲ್ಗಾಳ ಚಿಗುರೆ ಕಣ್ಣುಗಳಿಂದ.

ಡಿಮೋವ್ ಆತುರದಲ್ಲಿ ಟೀ ಕುಡಿದು ರೈಲು ಹಿಡಿಯಲು ಓಡಿದ. ಓಲ್ಗಾ ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ, ತನ್ನ ಗೆಳೆಯರನ್ನು ಡಿಮೋವ್ ತಂದಿದ್ದ ತಿಂಡಿಗಳನ್ನು ತಿನ್ನಲು ಆಹ್ವಾನಿಸಿದಳು.

★ ★ ★

ಜುಲೈ ತಿಂಗಳ ಹುಣ್ಣಿಮೆ ರಾತ್ರಿ. ಓಲ್ಗಾ, ಓಲ್ಗಾ ನದಿಯ ಮೇಲೆ ದೋಣಿಯಲ್ಲಿ ನಿಂತು ಒಮ್ಮೆ ಪ್ರಶಾಂತವಾದ ನೀಲಿ ಆಕಾಶವನ್ನೂ, ಮತ್ತೊಮ್ಮೆ ಚೆಲುವಾದ ನೀರನ್ನೂ ನಿಟ್ಟಿಸುತ್ತಿದ್ದಾಳೆ. ಆಕೆಯ ಪಕ್ಕದಲ್ಲಿ ಮೌನವಾಗಿ ರಿಯೋಬಾವ್‌ಸ್ಕಿ ನಿಂತಿದ್ದಾನೆ.

ಮಧ್ಯ ರಾತ್ರಿಯ ಆ ತಣ್ಣನೆಯ ನೀರವತೆ, ರಿಯೋಬಾವ್‌ಸ್ಕಿಯ ಸಾನಿಧ್ಯ ಓಲ್ಗಾಳಿಗೆ ತಾನು ಚಿರನೂತನಳೆಂದೂ, ತನಗೆ ಸಾವು ಇಲ್ಲವೆಂದೂ ಭ್ರಮೆ ಪಡುವಂತಾಗಿದೆ. ಪೂರ್ಣ ಚಂದ್ರ, ನೀಲ ನದಿ, ಕಪ್ಪಾದ ನೆರಳುಗಳು ಅವಳ ಕವಿ ಹೃದಯ



ವನ್ನು ತುಂಬಿ ಪಿಸುಗುಟ್ಟಿದವು - 'ಓಲ್ಗಾ, ನೀನು ಎಂದಾದರೊಮ್ಮೆ ಮಹಾನ್ ಕಲಾವಿದೆಯಾಗು ವಿ.' ಗಂಭೀರವಾದ ಆಗಸವನ್ನು ನೋಡುತ್ತಾ ಓಲ್ಗಾ ತನ್ನ ಜೊತೆ ನಿಂತ ರಿಯೋಬಾವ್‌ಸ್ಕಿ ಯನ್ನು ಒಮ್ಮೆ ನೆನೆದಳು. ಪ್ರಕೃತಿಯ ಪೂರ್ಣ ಚೆಲುವಿನಂತಿದ್ದ ಅವನು. ಆತನಲ್ಲಿ ಅಸಾಮಾನ್ಯ ವ್ಯಕ್ತಿತ್ವವನ್ನು ಆಕೆ ಕಂಡುಕೊಂಡಿದ್ದಾಳೆ. ಸಂಕೋಲೆಗಳಿಗೆ ಸಿಲುಕದೆ ದೂರ ನಿಂತು ನಗುವಂತೆ ತೋರುವ ಅವನು ಹಕ್ಕಿಯಂತಿದ್ದಾನೆ. ಆತನ ಪ್ರತಿಭೆ ಆಕೆಗೆ ಸಹಸ್ರ ಮುಡಿಯಾಗಿ ಕಾಣಿಸಿತು.

''ಅಬ್ಬಾ! ಎಂತಹ ಛಳಿ!'' ಇದ್ದಕ್ಕಿದ್ದಂತ ಓಲ್ಗಾ ನಡುಗಿದಳು. ತಕ್ಷಣ ತನ್ನ ಉಣ್ಣೆಯ ಕೋಟನ್ನು ತೆಗೆದು ಆಕೆಗೆ ಹೊದಿಸುತ್ತ ರಿಯೋಬಾವ್‌ಸ್ಕಿ ಹೇಳಿದ,

''ಓಲ್ಗಾ, ನಿನ್ನ ಮಂತ್ರಶಕ್ತಿಗೊಳಗಾಗಿ ನನ್ನನ್ನು ನಿನಗೆ ಅರ್ಪಿಸಿಕೊಳ್ಳುತ್ತಾ ಇದ್ದೇನೆ. ನಾನು ನಿನ್ನ ದಾಸ, ಓಲ್ಗಾ. ನೀನೇಕೆ ಇಂದು ನನ್ನ ಕಣ್ಣಿಗೆ ಇಷ್ಟು ಚೆಲುವಾಗಿ ಕಾಣಿಸುತ್ತಾ ಇರುವೆ?''

ತನ್ನ ಕಣ್ಣಲ್ಲಿ ನೆಟ್ಟ ಅವನ ನೋಟವನ್ನು ಅರ್ಥ ಮಾಡಿಕೊಂಡಳು ಓಲ್ಗಾ.

''ನಿನ್ನನ್ನು ತುಂಬಾ ಪ್ರೀತಿಸುವೆ, ಓಲ್ಗಾ. ಹಾಗೆಂದು ನೀನೂ ಒಮ್ಮೆ ಹೇಳಿಬಿಡು. ಆಗ ನನ್ನ ಜನ್ಮ ಸಾರ್ಥಕವಾಯಿತು ಅಂದುಕೊಳ್ಳುವೆ'' ಎಂದು ಪಿಸುಗುಟ್ಟಿದ ರಿಯೋಬಾವ್‌ಸ್ಕಿ.

''ಛೆ! ಏನು ಹೇಳುತ್ತಿರುವೆ ರಿಯೋಬಾವ್‌ಸ್ಕಿ. ನನ್ನ ಡಿಮೋವ್‌ನನ್ನು ಮರತೆಯೇನು?'' ಓಲ್ಗಾ ಸಿಡುಗುಟ್ಟಿದಳು.

''ಡಿಮೋವ್, ಡಿಮೋವ್, ಅವನ ಹೆಸರೂ

ಬೇಡ ನನಗೆ .... ಈ ಓಲ್ಗಾ ನದಿ, ತಿಳಿ ಆಗಸ, ಪೂರ್ಣ ಚಂದಿರ, ನೀನು, ನಿನ್ನ ಸೌಂದರ್ಯ ಇವುಗಳಿಗೆ ನನ್ನಲ್ಲಿ ಅರ್ಥವಿದೆ. ಮತ್ತೆ ಇವುಗಳಿಗಾಗಿಯೇ ನನ್ನ ಹಂಬಲ .... ಡಿಮೋವ್ ನನ್ನ ಪಾಲಿಗೆ ಶೂನ್ಯ.'' ಓಡ್ಕಾದಿಂದ ಪ್ರಭಾವಿತನಾದ ರಿಯೋಬಾವ್‌ಸ್ಕಿ ಹುಸಿ ಕೋಪದಿಂದ ಹೇಳಿದ.

ಕೃತಘ್ನತೆ, ಕಳಂಕ ಇವುಗಳ ಬಗ್ಗೆ ದಂಗೆ

''ನಿನಗೊಂದು ಆನಂದದ ಸುದ್ದಿ, ಓಲ್ಗಾ. ನನ್ನನ್ನು ಜನರಲ್ ಪೆಥಾಲಜಿಯಲ್ಲಿ 'ಡೊಸೆಂಟ್' ಮಾಡಬಹುದು. (Docent in General Pathology) ನನ್ನ ಥೀಸಿಸ್ ಎಲ್ಲರಿಂದ ಮೆಚ್ಚುಗೆ ಗಳಿಸಿದೆ.''

ಡಿಮೋವ್ ಹೇಳಿದ್ದು ಏನು ಎಂದು ಅವಳಿಗೆ ಗೊತ್ತಾಗಲೇ ಇಲ್ಲ. ಜನರಲ್ ಪೆಥಾಲಜಿ, ಡೊಸೆಂಟ್ ಈ ಪದಗಳಿಗೆ ಅವಳಲ್ಲಿ ಅರ್ಥವಿರಲಿಲ್ಲ. ನಾಟಕ ಶಾಲೆಗೆ ತಡವೂ ಆದೀತು. ಆಕೆ ಏನೂ ಹೇಳದೆ ಸುಮ್ಮನೆ ನಿಂತಳು. ಕೈಗಳು ಮಾತ್ರ ಅತ್ಯಂತ ಕುಶಲತೆಯಿಂದ ಹೊಂಗೂದಲನ್ನು ಕಲಾತ್ಮಕವಾಗಿ ಕಟ್ಟತೊಡಗಿದವು. ನಿಶ್ಶಬ್ದವಾಗಿ ಎರಡು ನಿಮಿಷ ಕುಳಿತ ಡಿಮೋವ್ ನಂತರ ಮೆಲ್ಲನೆದ್ದು ಹೋದ. ಓಲ್ಗಾ ತನ್ನ ಸಂತಸದಲ್ಲಿ ಭಾಗಿಯಾಗಿದ್ದರೆ ಅವಳ ಎಲ್ಲಾ ತಪ್ಪುಗಳನ್ನು ಕ್ಷಮಿಸಿ, ಹಿಂದೆ ಅವಳು ಮಾಡಿದ್ದೆಲ್ಲವನ್ನು ಮರೆತು ಬಿಡುತ್ತಿದ್ದ. ಆದರೆ ಆಕೆ ಡಿಮೋವ್‌ನನ್ನು ಹೇಗೆ ಅರ್ಥ ಮಾಡಿಕೊಳ್ಳಬಲ್ಲಳು?

ಡಿಮೋವ್‌ಗೆ ಇಂದು ದುರ್ದಿನ. ತಲೆನೋವಿನಿಂದ ಆಸ್ಪತ್ರೆಗೂ ಹೋಗದೆ ಮಲಗಿಬಿಟ್ಟ. ಆದರೆ ಓಲ್ಗಾ ಪತಿಯ ಕಡೆ ಗಮನ ಕೊಡದೆ ಒಂದು ಗಂಟೆ ಸುಮಾರಿಗೆ ರಿಯೋಬಾವ್‌ಸ್ಕಿ ಮನೆಗೆ ಹೊರಟಳು. ನೆಪ ಮಾತ್ರಕ್ಕೆ ಚಿತ್ರಿಸಿದ ಚಿತ್ರವೊಂದನ್ನು ಕೈಯಲ್ಲಿ ಹಿಡಿದು ನೆನ್ನೆ ಆತ ಭೇಟಿಯಾಗದುದರ ಕಾರಣ ತಿಳಿಯಬೇಕಷ್ಟೆ.

ಸುಳಿವು ಕೊಡದೆ, ಸಲುಗೆಯಿಂದ ಹಜಾರದವರೆಗೆ ಬಂದು ನಿಂತ ಆಕೆಗೆ ಹುಡುಗಿಯೊಬ್ಬಳ ಲಂಗದ ಸರಸರ ಶಬ್ದ, ಹೆಜ್ಜೆಯ ಸಪ್ಪಳಗಳು ಕೇಳಿಸಿದವು. ಅವ್ಯಕ್ತ ಸಂಶಯದಿಂದ ಚಿತ್ರಶಾಲೆಯೊಳಗೆ ನುಗ್ಗಿದ ಓಲ್ಗಾಳ ಚುರುಕು ಕಣ್ಣುಗಳಿಗೆ ಓಡಿ ಹೋದ ಹುಡುಗಿ ದೊಡ್ಡ ತೈಲ ಚಿತ್ರ ಒಂದರ ಹಿಂಭಾಗದಲ್ಲಿ ಅಡಗಿ ಕುಳಿತಿರುವುದು ಕಾಣುತ್ತಿತ್ತು. ಮಂಕು ಕವಿದ ಓಲ್ಗಾಳನ್ನು ಕೈನೀಡಿ ಸ್ವಾಗತಿಸುತ್ತಾ ರಿಯೋಬಾವ್‌ಸ್ಕಿ ಗಲಿಬಿಲಿಯಿಂದ ಕೇಳಿದ-

''ಅರೆ! ಓಲ್ಗಾ, ಬಾ, ಬಾ, ...... ಏನು ಸಮಾಚಾರ?''

ಓಲ್ಗಾಳ ಕಣ್ಣುಗಳು ತುಂಬಿದವು. ಅವಮಾನ, ಲಜ್ಜೆ ಆಕೆಯ ಮನವನ್ನು ದಾಳಿ ಮಾಡಿದವು. ಬಿಗಿದ ಕೊರಳನ್ನು ಸರಿಪಡಿಸಿಕೊಳ್ಳಲೆತ್ನಿಸುತ್ತಾ ಆಕೆ ತೊದಲಿದಳು.

''ಅಂ? ಏನಿಲ್ಲ. ಮತ್ತೆ ...... ಈ ಚಿತ್ರ?''

ಅದನ್ನು ಆಕೆಯ ಕೈಯಿಂದ ಪಡೆದ ರಿಯೋಬಾವ್‌ಸ್ಕಿ ಅದನ್ನು ತದೇಕ ಚಿತ್ತದಿಂದ ನೋಡುತ್ತಿರುವಂತೆ ನಟಿಸುತ್ತಾ, ಬದಿಯ ಕೋಣೆಗೆ ಹೋದ. ಓಲ್ಗಾ ವಿಧೇಯಳಾಗಿ ಅವನನ್ನು ಹಿಂಬಾಲಿಸಿ ಉಸಿರು ಹಿಡಿದು ಆಲಿಸಿದಳು. ಅದೇ ಆತುರ ಆತುರವಾದ ಹೆಜ್ಜೆಗಳ ಸಪ್ಪಳ, ಲಂಗದ ಸರಸರ ಶಬ್ದ. ಆ ಹುಡುಗಿ ಹಾಗಾದರೆ ಹೊರಟು ಹೋದಳು. ಹಿಂದೆ ಇದೇ ರೀತಿ ತನ್ನನ್ನು ರಿಯೋಬಾವ್‌ಸ್ಕಿ ಎಷ್ಟು ಬಾರಿ ಅಡಗಿಸಿಟ್ಟಿಲ್ಲ? ಓಲ್ಗಾಳ ಮೊಟ್ಟ ಮೊದಲ ಪ್ರತಿಕ್ರಿಯೆ ರಿಯೋಬಾವ್‌ಸ್ಕಿ ಮತ್ತೆ ಮೇಲೇರದಂತೆ ಆತನ ತಲೆಯ ಮೇಲೆ ಭಾರಿ ಕಲ್ಲೊಂದನ್ನು ಅಪ್ಪಳಿಸುವುದು. ಮರುಕ್ಷಣ ಅವಳಿಗೆ ಅವಮಾನ ಮಾಡಿಸಿಕೊಂಡಂತಾಗಿ ಸುಮ್ಮನೆ ಕುಳಿತಳು.

''ಚಿತ್ರವೇನೋ ಸುಮಾರಾಗಿದೆ ..... ಇಂದೇಕೋ ನನಗೆ ತುಂಬಾ ಆಲಸ್ಯ. ನಿನಗೆ ಬೇಸರಿಕೆ ಇಲ್ವೇ ಓಲ್ಗಾ? ಚಿತ್ರ ನಿನಗೆ ಒಲಿಯದು. ಸಂಗೀತ ಕಲೀಬಾರದೇ ಓಲ್ಗಾ ನೀನು? ನಾನು ನೀನಾಗಿದ್ರೆ ಇಂತಹ ಚಿತ್ರಗಳನ್ನು ಬಿಡಿಸುವ ಗೋಜಿಗೇ ಹೋಗುತ್ತಿರಲಿಲ್ಲ .... ಹೋಗಲಿ ಸ್ವಲ್ಪ ಟೀ ತೆಗೆದುಕೊಳ್ಳುತ್ತೀಯಾ?''

ಒಳ ಹೋದ ರಿಯೋಬಾವ್‌ಸ್ಕಿ ಹೊರ ಬರುವ ಮುನ್ನ ಓಲ್ಗಾ ಹೊರಟು ಹೋಗಿದ್ದಳು.

ಎಲ್ಲಾ ಮುಗಿಯಿತು, ಎಲ್ಲಾ. ರಿಯೋಬಾವ್‌ಸ್ಕಿ ಮತ್ತು ತನ್ನ ಸಂಬಂಧ ಇಲ್ಲಿಗೆ ಮುಗಿಯಿತು. ಆತ ತನ್ನ ಜೀವನದ ಗತ ನೆನಪು ಮಾತ್ರ, ಅದೊಂದು ದುಃಸ್ವಪ್ನ. ಅವನ ಋಣಾನುಬಂಧ ಇಲ್ಲಿಗೆ ಕಡಿಯಿತು.

ರಿಯೋಬಾವ್‌ಸ್ಕಿಗೆ ತಾನು ಬರೆಯಲಿದ್ದ ಪತ್ರವನ್ನು ಮನದಲ್ಲೇ ರಚಿಸಿಕೊಳ್ಳುತ್ತಾ ಓಲ್ಗಾ ಮನೆ ಸೇರಿದಾಗ ಎಂದಿನಂತೆ ತಡವಾಗಿತ್ತು. ಬಟ್ಟೆಯನ್ನು ಕೂಡ ಬದಲಾಯಿಸದೆ ಆಕೆ ಪತ್ರ ಬರೆಯಲು ಕುಳಿತಳು.

''ಮಮೋ'' ತನ್ನ ಕೋಣೆಯ ಬಾಗಿಲನ್ನು ತೆಗೆಯದೆ ಡಿಮೋವ್ ಕೂಗಿದ.

''ಏನು?'' ಅಸಹನೆಯಿಂದ ಓಲ್ಗಾ ಕೇಳಿದಳು.

''ಒಳಗೆ ಬರದೆ ಅಲ್ಲೇ ನಿಲ್ಲು. ವಿಷಯ ಇಷ್ಟು. ನಿನ್ನೆ ಆಸ್ಪತ್ರೆಯಲ್ಲಿ ನಾನು 'ಡಿಫ್ತೀರಿಯಾ' ಅಂಟಿಸಿಕೊಂಡಿರುವೆ. ತಕ್ಷಣ ಗೆಳೆಯ ಕೊರೋಸ್ಟೆಲೇವ್‌ಗೆ ಹೇಳಿ ಕಳಿಸುತ್ತಿಯಾ?''

''ಓಸಿಪ್, ಏನು ಹೇಳುತ್ತಿರುವಿ? ಸುಳ್ಳು, ಸುಳ್ಳು!'' ಓಲ್ಗಾ ಕಿರುಚಿದಳು.

''ಬೇಗನೆ ಕಳುಹಿಸು. ನನ್ನ ಕೈಲಿ ಸಾಧ್ಯವಿಲ್ಲ'', ಎನ್ನುತ್ತಾ ಆತ ನಡೆದು ಹೋಗಿ ಮಂಚವೇರಿದ ಸದ್ದನ್ನಾಲಿಸಿದಳು ಓಲ್ಗಾ.

ಮೇಣದ ಬತ್ತಿಯನ್ನು ಹೊತ್ತಿಸಿಕೊಂಡು ತನ್ನ ಕೋಣೆಗೆ ಬಂದ ಓಲ್ಗಾ ನಡುಗತೊಡಗಿದಳು. ಏಕೋ, ಆಕೆಯ ಹೃದಯ ಡಿಮೋವ್‌ಗಾಗಿ, ಆತನ ಅಲೌಕಿಕ ಪ್ರೇಮಕ್ಕಾಗಿ, ಮಿಡುಕಿತು. ಆತನ ವೇದನಾಪೂರ್ಣ ಸುಂದರವದನ ಅವಳ ಮನೋನೇತ್ರಗಳ ಮುಂದೆ ಮಿಂಚಿತು. ಓಲ್ಗಾ ನಿಧಾನವಾಗಿ ಬಿಕ್ಕತೊಡಗಿದಳು. ಬೆಳಗಿನ ಎರಡು ಗಂಟೆ. ಓಲ್ಗಾ ಡಾ. ಕೋರೋಸ್ಟೆಲೇವ್‌ಗೆ ಕರುಣಾಪೂರಿತ ಪತ್ರವೊಂದನ್ನು ಬರೆದು ಕಳುಹಿಸಿದಳು.

ಮೂರನೇ ಬೆಳಿಗ್ಗೆ ಎಂಟು ಗಂಟೆಗೆ ಆಯಾಸದಿಂದ ಎದ್ದ ಓಲ್ಗಾ ಕರಿಯ ಗಡ್ಡದ ಅಪರಿಚಿತ ವ್ಯಕ್ತಿಯೊಂದನ್ನು ಕಂಡಳು. ವೈದ್ಯನೇ ಇರಬೇಕು



ಆತ. ಔಷಧಗಳ ವಾಸನೆ ಕೊಠಡಿಯಲ್ಲೆಲ್ಲಾ ಹರಡಿತ್ತು. ಡಿಮೋವ್‌ನ ಕೊಠಡಿಯ ಮುಂದೆ ಕೊರೋಸ್ಟೆಲೇವ್ ಉಗುರು ಕಡಿಯುತ್ತಾ ನಿಂತಿದ್ದ. ಕೋಣೆಯ ಒಳಗೆ ಹೋಗಲು ಬಯಸಿದ ಓಲ್ಗಾಳನ್ನು ನಿರ್ದಾಕ್ಷಿಣ್ಯವಾಗಿ ತಡೆಯುತ್ತಾ ಆತನೆಂದ-

''ಕ್ಷಮಿಸಿ, ನಿಮ್ಮನ್ನು ಒಳಗೆ ಬಿಡಲಾರೆ, ನಿಮಗೂ ಸೋಂಕು ತಟ್ಟೀತು'' ಸ್ವಲ್ಪ ತಡೆದು, ನಂತರ ಹೇಳಿದ.

''ಇಷ್ಟಕ್ಕೂ ನೀವು ಒಳ ಹೋಗಿ ಏನು ಮಾಡಬಲ್ಲಿರಿ? ಡಿಮೋವ್ ಜ್ವರದ ಬೇಗೆಯಿಂದ ಕನವರಿಸಿಕೊಳ್ಳುತ್ತಿದ್ದಾನೆ.''

''ಮೂರ್ಖ ಕೆಲಸ ಮಾಡುವ ಜನರು ಅದರ ಫಲವನ್ನು ಉಣ್ಣದೇ ಇದ್ದಾರೆಯೇ? ಡಿಮೋವ್‌ಗೆ ಇಂದು ಡಿಫ್ತೀರಿಯಾ ಬಂದದ್ದಾದರೂ ಹೇಗೆ ನೀವು ಬಲ್ಲಿರೇನು? ಡಿಮೋವ್ ಒಬ್ಬ ಮತಿಹೀನ. ಮೊನ್ನೆ ಆ ಹುಡುಗನನ್ನು ಬದುಕಿಸಲು ಹೋಗಿ ಇಂದು ತಾನು ಮೃತ್ಯುವನ್ನು ಬರಮಾಡಿಕೊಂಡಿದ್ದಾನೆ. ಆತ ಬದುಕಿದ, ಇವನು ಸಾಯುತ್ತಿದ್ದಾನೆ, ಇದೆಂತಹ ತ್ಯಾಗ?'' ಎಂದೂ ಹೇಳಿದ.

''ತುಂಬಾ ಅಪಾಯಕಾರಿಯೇ ಇದು?'' ಕೇಳಿದಳು ಓಲ್ಗಾ.

''ಹಾಗೇ ಕಾಣುವುದು ....... ನಾವು ತಕ್ಷಣ ತಜ್ಞರನ್ನು ಕರೆಸಬೇಕು ...... ಜಾಗ್ರತೆ ....'' ಮಾತು ಮುಗಿಯುವ ಮುನ್ನ ಕೆಂಪುಗೂದಲಿನ, ಉದ್ದವಾದ ಮೂಗಿರುವ ವ್ಯಕ್ತಿಯನ್ನು ಹಿಂಬಾಲಿಸುತ್ತಾ, ಬೆನ್ನು ಬಾಗಿದ ಕೊಳಕು ಬಟ್ಟೆ ಉಟ್ಟ ಒಬ್ಬ ಮನುಷ್ಯ ಒಳ ಬಂದ. ನಂತರ ಬಂದವನು ಬಲಿಷ್ಠ ತರುಣ. ವೈದ್ಯರೆಲ್ಲಾ ತಮ್ಮ ಸಹೋ

ದ್ಯೋಗಿ ರೋಗಿಯ ಸೇವೆಗೆ ಬದ್ಧಕಂಕಣರಾಗಿ ನಿಂತರು. ತನ್ನ ಭಾಗದ ಕೆಲಸ ಮುಗಿದರೂ ಕೊರೋಸ್ಟೆಲೇವ್ ಗೆಳೆಯನ ಬಳಿಯೇ ಉಳಿದು ಶತಪಥ ತಿರುಗಿದ. ದಾಸಿ ಬಳಲಿದ ವೈದ್ಯರಿಗೆ ಚಹ ಹಂಚುತ್ತಲೇ ಇದ್ದಳು. ಎಲ್ಲೆಲ್ಲೂ ಅವ್ಯವಸ್ಥೆ, ಎಲ್ಲೆಲ್ಲೂ ಬರಡು. ಕೋಣೆಯಲ್ಲಿ ಕುಳಿತು ಈ ಮೂಕಶೋಕವನ್ನಾಲಿಸುತ್ತಿದ್ದ ಓಲ್ಗಾ ದೇವರು ತನ್ನ ಮೋಸಕ್ಕೆ ತಕ್ಕ ಶಿಕ್ಷೆ ನೀಡುತ್ತಿರುವನೆಂದು ಭ್ರಮಿತಳಾದಳು. ಯಾರಿಗೂ ತೊಂದರೆ ಕೊಡದ, ದಯಾಮಯನಾದ ಡಿಮೋವ್ ನೋಪು ಅನುಭವಿಸುತ್ತಾ ಇದ್ದಾನೆ, ಜೋರಾಗಿ ನರಳಲೂ ಆಗದೆ. ಆತನ ಕನವರಿಕೆಯ ಬಡಬಡಿಕೆಯನ್ನೇನಾದರೂ ವೈದ್ಯರು ಕೇಳಿದ್ದರೆ ಡಿಮೋವ್‌ನ ರೋಗಕ್ಕೆ ಡಿಫ್ತೀರಿಯಾ ಮಾತ್ರವಲ್ಲ, ಅಗೋ ಅಲ್ಲಿದ್ದಾಳಲ್ಲಾ ಆ ವಂಚಕಿ ಅವಳೂ ಕಾರಣ ಎಂಬಂತೆ ಓಲ್ಗಾ ಕಡೆಗೆ ದೃಷ್ಟಿ ಹರಿಸುತ್ತಿದ್ದರು.

ಓಲ್ಗಾ ಈಗ ಯಾವ ಬೆಳದಿಂಗಳನ್ನೂ, ಯಾವ ಓಲ್ಗಾ ನದಿಯನ್ನೂ, ಯಾವ ಗತ ಪ್ರಣಯವನ್ನೂ ಕುರಿತು ಯೋಚಿಸುತ್ತಿಲ್ಲ. ಎಂದೆಂದೂ ಅಳಿಸಲಾಗದ ತನ್ನ ಮೈಮನಗಳ ಮಲಿನವನ್ನು ಕುರಿತು ಯೋಚಿಸುತ್ತಾಳೆ.

'ಡಿಮೋವ್ ನೀನೊಮ್ಮೆ ಆರೋಗ್ಯವಂತನಾಗು, ನಾನು ನಿನ್ನ ದಾಸಾನುದಾಸಿಯಾಗುವೆ, ಎಂದೆಂದೂ, ಎಂದೆಂದೂ' 'ಆತನ ಕೋಣೆಯೊಳಗೆ ಹೋಗಲಾರದೆ, ತನ್ನ ಹೇಡಿತನಕ್ಕೆ ದೇವರು ತನ್ನನ್ನು ಶಿಕ್ಷಿಸುವುದಿಲ್ಲವೇ?' ಎನಿಸಿತು ಓಲ್ಗಾಗೆ. ಹಾಳಾದ ತನ್ನ ಬಾಳು ಪುನಃ ಚಿಗುರಬಲ್ಲದೇ?

★ ★ ★

ತಿರುಗಿ ಕತ್ತಲೆ ಆವರಿಸತೊಡಗಿದೆ. ಅಲ್ಲೇ ಬೆಂಚೊಂದರ ಮೇಲೆ ಕುಳಿತು ದಣಿದ ಡಾ. ಕೊರೋಸ್ಟೆಲೇವ್ ವಿಶ್ರಾಂತಿ ಪಡೆಯುತ್ತಿದ್ದಾನೆ. ಸರದಿಯಂತೆ ವೈದ್ಯರು ಬಂದು ತಮ್ಮ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಅವರಲ್ಲೊಬ್ಬನ ನಗು ಓಲ್ಗಾಳಿಗೆ ಬಂದು ಅಪ್ಪಳಿಸುತ್ತದೆ. ಮತ್ತೆ ಹಜಾರಕ್ಕೆ ಬಂದಾಗ ಕೊರೋಸ್ಟೆಲೇವ್ ಸಿಗರೇಟು ಸೇದುತ್ತಾ ಕುಳಿತಿರುವುದು ಅವಳಿಗೆ ಕಾಣಿಸಿತು.

''ಅವನಿಗೆ ಡಿಫ್ತೀರಿಯಾ ಅಂತ ಖಚಿತವಾಯಿತು. ಹೃದಯ ಬೇರೆ ತೀರ ದುರ್ಬಲವಾಗಿದೆ'' ಎಂದ ಕೊರೋಸ್ಟೆಲೇವ್.

''ತಜ್ಞರು ಬಂದರೇನು?'' ಓಲ್ಗಾಳ ಆತುರದ ಪ್ರಶ್ನೆ.

ಏಳಲು ಹವಣಿಸಿತು ಓಲ್ಗಾಳ ಹೃದಯ ಒಮ್ಮೆ ಪಟಪಟನೆ ಬಡಿಯಿತು. ಆದರೆ ಓಲ್ಗಾ ಅದನ್ನು ಬಹು ಬೇಗನೇ ಅಡಗಿಸಿದಳು. ಮನದಲ್ಲಿ ಮೋಸಗಳಿಂದ ಬಲ್ಲೆ ಎಂಬ ಹೆಮ್ಮೆ ಅವಳಿಗೆ. ಪ್ರಪಂಚವನ್ನೆಲ್ಲಾ ಅನುಭವಿಸಲೆಂದಲ್ಲವೇ ಆಕೆ ಹುಟ್ಟಿರುವುದು? ಈ ಕಾವ್ಯಮಯವಾದ ಅನುಭವಕ್ಕೆ ತನ್ನ ಜೀವನದಲ್ಲಿ ಎಂಥ ಮೌಲ್ಯ ಕೊಟ್ಟರೂ ಕಡಿಮೆಯೆಂದೇ ಅವಳ ವಾದ, ನಂಬಿಕೆ.

★ ★ ★

ಜುಲೈ ತಿಂಗಳು. ಭೂಮಿಗೆ ಬಂದ ಮಾಯಾ ಸೌಂದರ್ಯವೆಲ್ಲಾ ಕಣ್ಮರೆಯಾಗಿ ಬಿಟ್ಟಿದೆ. ಎಲ್ಲೆಲ್ಲೂ ಬರಡು, ಬರೀ ಬಂಜೆಬರಡು. ರಿಯೋಬಾವ್‌ಸ್ಕಿಗೆ ಏನೂ ಚಿತ್ರಿಸಲಾರೆ ಎನ್ನಿಸಿದೆ. ತನ್ನನ್ನು ಒಬ್ಬ ಚಿತ್ರಗಾರ ಎನ್ನುವವರು ಮೂರ್ಖರೇ ಸರಿ ಎಂದು ಒಮ್ಮೊಮ್ಮೆ ಹಳಿದುಕೊಳ್ಳುತ್ತಾನೆ. ಸ್ಫೂರ್ತಿಯಿಲ್ಲದೆ, ಕಳಾಹೀನನಾದ ಅವನಿಗೆ ಓಲ್ಗಾಳ ಸಾಮೀಪ್ಯ ಬೇಡವಾಗಿದೆ, ಅವಳು ತೊಲಗಿದರೆ ಸಾಕು ಎನ್ನಿಸಿದೆ.

ಹಗಲೆಲ್ಲಾ ಸುಮ್ಮನೆ ಕುಳಿತು ಓಲ್ಗಾ ತನ್ನ ಮನೆ, ತನ್ನ ಕಲೆ, ತನ್ನ ಡಿಮೋವ್‌ನನ್ನು ಕುರಿತು ಕನಸು ಕಾಣುವಳು. ಅತೀ ಸಾಮಿಪ್ಯದಿಂದ ಉಂಟಾದ ಒಂದು ಬಗೆಯ ಕಂಡೂ ಕಾಣದಂತಹ ನೀರಸತೆ ಈಗ ಅವರಿಬ್ಬರಲ್ಲೂ ಮೆಲ್ಲಗೆ ದ್ವೇಷಕ್ಕೆ ತಿರುಗಿಸುತ್ತಿದೆ. ಕ್ಷುಲ್ಲಕ ಕಾರಣಗಳಿಗೂ ಅವರಲ್ಲಿ ಜಗಳ. ಕೊನೆಯಲ್ಲಿ ಓಲ್ಗಾಳ ಹೃದಯ ಬಿರಿಯುವಂತಹ ಅಳು. ಮತ್ತೆ,

''ರಿಯೋಬಾವ್‌ಸ್ಕಿ, ನೀನೇಕೆ ಬದಲಾಯಿಸಿ ಹೋದೆ?'' ಎಂಬ ಆರ್ತನಾದ.

ಕೊನೆಗೊಮ್ಮೆ ಇಬ್ಬರೂ ತೀರ್ಮಾನಿಸಿದರು. ಇಬ್ಬರಿಗೂ ಮನಸ್ಸ್ವಾಸ್ಥ್ಯ ಬೇಕಾದಲ್ಲಿ, ಕೊಂಚ

ಕಾಲ ಇಬ್ಬರೂ ವಿರಹಿಗಳಾಗಿರುವುದು ಅವಶ್ಯಕ.

ಓಲ್ಗಾ ತನ್ನ ಸೂಟ್‌ಕೇಸಿನೊಂದಿಗೆ ನಗೆಮೊಗದಿಂದಲೇ ಮನೆಗೆ ಹಿಂದಿರುಗಿದಳು. ನಿಷ್ಕಪಟಿಯಾದ ತನ್ನ ಪತಿಯನ್ನು ಜಾಣೆಯಾದ ತಾನು ಎಷ್ಟು ಸುಲಭವಾಗಿ ಮೋಸಗೊಳಿಸಬಲ್ಲೆನೆಂದು ಯೋಚಿಸುತ್ತಾ ಬಂದ ಓಲ್ಗಾಳಿಗೆ ಗಂಡನನ್ನು ನೋಡಿದೊಡನೆ ಅಳುಕು ಉಂಟಾಯಿತು. ಅವನ ನಿರ್ಮಲ ಕಣ್ಣುಗಳು, ತೇಜಸ್ವಿಯಾದ ಮುಖ ಅವಳಿಗೆ ತಪ್ಪೊಪ್ಪಿಕೋ- ಎಂದು ಹೇಳಿತು. ಆತನ ದೃಷ್ಟಿ ಇವಳನ್ನು ಸಂಧಿಸಿದೊಡನೆ ಓಲ್ಗಾ ಓಡಿ ಬಂದು ಆತನ ಮೊಣಕಾಲುಗಳ ಮಧ್ಯೆ ಮುಖ ಹುದುಗಿಸಿದಳು.

''ಏನಾಯ್ತು? 'ಪಿಕ್‌ನಿಕ್' ಬೇಸರ ತರಿಸಿತೇ?'' ಮೃದುವಾಗಿ ಕೇಳಿದ ಡಿಮೋವ್. ಓಲ್ಗಾ ಅಪಮಾನ, ನಾಚಿಕೆಗಳಿಂದ ಪತಿಯನ್ನು ನೋಡಿದಳು. ಧೈರ್ಯ ಕುಸಿಯಿತು, ಬಾಯಿ ತೊದಲಿತು. ''ಆ, ಏನಿಲ್ಲ, ಆದರೆ ಏಕೋ ..''

ಡಿಮೋವ್ ಆಕೆಯನ್ನು ಮೆಲ್ಲಗೆ ಎತ್ತಿ ಕುರ್ಚಿಯಲ್ಲಿ ಕೂರಿಸುತ್ತಾ ಹೇಳಿದ-

''ಹಸಿವೆಯಿಂದ ಕಂಗೆಟ್ಟು ಹೋಗಿರುವಿಯಲ್ಲಾ, ಮಗು. ಇಕೋ, ಮೊದಲು ಇದು ತಿನ್ನು. ಕೊಂಚ ಗೆಲವು ಬಂದೀತು.''

ಓಲ್ಗಾ ನಿಜವಾಗಿ ಹಸಿದಿದ್ದಳು. ಡಿಮೋವ್ ಕೊಟ್ಟ ತಿನಿಸುಗಳನ್ನು ಗಬಗಬನೆ ತಿನ್ನತೊಡಗಿದಳು. ಡಿಮೋವ್‌ನ ಮುಖ ಅವ್ಯಾಜ ಪ್ರೇಮ, ಕರುಣೆ, ಸಂತೃಪ್ತಿಯಿಂದ ಬೆಳಗಿತು.

★ ★ ★

ಛಳಿಗಾಲದ ಮಧ್ಯೆ, ಡಿಮೋವ್‌ಗೆ ಓಲ್ಗಾಳ ಪಾತೀವ್ರತ್ಯದ ಕಟು ಸತ್ಯ ಗೋಚರಿಸಿತು. ಆಗ ತನ್ನದೇ ಅಪರಾಧವೆಂಬಂತೆ ಮನದಲ್ಲೇ ಮಿಡುಕಿದ. ಹೆಂಡತಿಯ ಕಣ್ಣಲ್ಲಿ ಕಣ್ಣಿಟ್ಟು ನೋಡಲಾರದೆ ಹೋದ. ಅವಳ ಜೊತೆ ಇರಬಹುದಾದ ಕೆಲವೇ ಗಂಟೆಗಳ ಕಾಲಕ್ಕೂ ತನ್ನ ವೈದ್ಯ ಮಿತ್ರ ಕೊರೋಸ್ಟೆಲೇವ್‌ನನ್ನು ಕರೆತರಲು ಶುರು ಮಾಡಿದ. ಊಟ ಮುಗಿಯುವವರೆಗೂ ತನ್ನೊಂದಿಗೆ ತನ್ನ ಗೆಳೆಯನನ್ನು ಔಷಧ ಪ್ರಪಂಚಕ್ಕೆ ಒಯ್ಯುವನು. ಅಲ್ಲಿಗೆ, ಸದ್ಯ, ಓಲ್ಗಾ ಬಚಾ



ರಳು. ಊಟದ ನಂತರ ಕೊರೋಸ್ಟೆಲೇವ್ ಪಿಯಾನೋ ನುಡಿಸತೊಡಗಿದರೆ, ಡಿಮೋವ್ ಕಣ್ಮುಚ್ಚಿ ಕುಳಿತು ಶೋಕಗೀತೆಗಳನ್ನು ನುಡಿಸುವಂತೆ ಆತನನ್ನು ಪ್ರಾರ್ಥಿಸುವನು. ಆತನ ಗೀತೆ ಮುಂದುವರೆದಂತೆ ಡಿಮೋವ್ ಯೋಚನೆಯಲ್ಲಿ ಮುಳುಗಿ ಹೋಗುವನು ......

ಇತ್ತೀಚೆಗೆ ಓಲ್ಗಾಳ ಮನ ಡೋಲಾಯಮಾನವಾಗಿದೆ. ತನ್ನ ಮೇಲಿದ್ದ ಪ್ರೇಮ ರಿಯೋಬಾವ್‌ಸ್ಕಿಗೆ ಮುಗಿಯಿತೆಂದು ಕೊರಗುವಳು. ಮರುಕ್ಷಣ ಆದದ್ದೆಲ್ಲಾ ಒಳಿತೇ ಆಯಿತೆಂದು ನಿಟ್ಟುಸಿರು ಬಿಡುವಳು. ಆದರೆ ರಿಯೋಬಾವ್‌ಸ್ಕಿ ತನ್ನಿಂದ ತನ್ನ ಪತಿಯನ್ನು ಕದ್ದೊಯ್ದು ಬಿಟ್ಟ, ಈಗ ತಾನು ಯಾರಿಗೂ ಸೇರದವಳು ಎಂದು ಹಲವು ಬಾರಿ ಕೊರಗುವಳು. ಚಿತ್ರ ಪ್ರದರ್ಶನಕ್ಕೆ ಸಿದ್ಧವಾಗುತ್ತಿರುವ ರಿಯೋಬಾವ್‌ಸ್ಕಿಯ ಚಿತ್ರಗಳನ್ನು ಕುರಿತು ಗೆಳೆಯರು ಆನಂದದ ಉದ್ಗಾರ ತೆಗೆದಾಗ, ಇದಕ್ಕೆ ತನ್ನ ಸಂಗ, ಒಲವು, ಪ್ರಭಾವಗಳೇ ಕಾರಣ, ತನಗವನು ಕೃತಜ್ಞನಾಗಿರಬೇಕು ಎಂದು ಭ್ರಮಿಸುವಳು. ಆ ಭ್ರಮೆಯಲ್ಲಿ ಆತನ ಶಾಲೆಗೆ ಹೋಗುವಳು. ತನ್ನ ಉತ್ತಮ ಕೃತಿಯಿಂದ ಸಂತೋಷಚಿತ್ತನಾದ ರಿಯೋಬಾವ್‌ಸ್ಕಿಯನ್ನೂ, ಅವನ ಸೊಗಸಾದ ಕೃತಿಗಳನ್ನೂ ನೋಡಿ ಅಸೂಯೆ ಪಡುವಳು. ಮರುಕ್ಷಣ ತನ್ನ ಭಾವನೆಗಳನ್ನು ಮರೆಮಾಚಿ, ತನ್ನನ್ನು ಪ್ರೀತಿಸಬೇಕೆಂದೂ, ಕರುಣೆ ತೋರಿಸಬೇಕೆಂದೂ ಅವನಲ್ಲಿ ಅಂಗಲಾಚುವಳು. ತಾನಿಲ್ಲದಿದ್ದಲ್ಲಿ ಅಂತಹ ಕೃತಿ ರಚನೆಗೆ ಆತನಿಗೆ ಸ್ಫೂರ್ತಿಯೇ ಬರುತ್ತಿರಲಿಲ್ಲವೆಂದು ಒಣ ಹೆಮ್ಮೆಯಿಂದ ಹೇಳಿ ಅವನ ಸಂತಸವನ್ನೂ ಗಾಳಿಪಾಲು ಮಾಡಿ, ಅಲ್ಲಿಂದ ಅಂದಿನ ನಾಟಕದ ಫ್ರೀ ಟಿಕೆಟ್ ಪಡೆ

ಯಲು ನಟಿ ಗೆಳತಿಯರ ಬಳಿಗೆ ಓಡುವಳು.

ಒಮ್ಮೆ ಇದೇ ರಿಯೋಬಾವ್‌ಸ್ಕಿ ಮನೆಗೆ ಹೋದ ಓಲ್ಗಾ ಆತನಲ್ಲಿಲ್ಲದ್ದನ್ನು ಕಂಡು, ತನ್ನನ್ನು ನೋಡಲು ತಕ್ಷಣ ಬಾರದಿದ್ದಲ್ಲಿ ತಾನು ಆತ್ಮಹತ್ಯೆ ಮಾಡಿಕೊಳ್ಳುವೆನೆಂದು ಬೆದರಿಸಿ ಪತ್ರ ಬರೆದಿಟ್ಟು ಬಂದಳು. ಮನೆಗೆ ಹಿಂತಿರುಗಿದ ರಿಯೋಬಾವ್‌ಸ್ಕಿ ಪತ್ರ ಓದಿ ಭಯಪಟ್ಟು ಓಡಿ ಬಂದ. ಊಟಕ್ಕೂ ನಿಂತ. ಡಿಮೋವ್‌ನ ಇರುವನ್ನೂ ಲೆಕ್ಕಿಸದೆ ಓಲ್ಗಾಳೊಂದಿಗೆ ಕಟು ಮಾತನ್ನಾಡಿದ. ಆಕೆ ಅದೇ ಧ್ವನಿಯಲ್ಲಿ ಉತ್ತರಿಸಿದಳು. ಇಬ್ಬರೂ ಶತ್ರುಗಳಂತೆ ಕಾದಾಡಿದರು. ಈ ಲಜ್ಜೆಗೆಟ್ಟ ನಾಟಕಕ್ಕೆ ಕೊರೋಸ್ಟೆಲೇವ್ ಕೂಡ ಒಬ್ಬ ಪ್ರೇಕ್ಷಕ. ಊಟವಾದೊಡನೆ ಆತುರದಿಂದ ಹೊರಟ ರಿಯೋಬಾವ್‌ಸ್ಕಿಯನ್ನು ತಡೆಯುತ್ತಾ, ''ಎಲ್ಲಿಗೆ ಹೊರಟೆ, ರಿಯೋಬಾವ್‌ಸ್ಕಿ?'' ಎಂದು ಪ್ರಶ್ನಿಸಿದಳು ಓಲ್ಗಾ ತಿರಸ್ಕಾರಭರಿತ ವ್ಯಂಗ್ಯ ಧ್ವನಿಯಲ್ಲಿ.

ರಿಯೋಬಾವ್‌ಸ್ಕಿ ಹಿಂದೆ ಬೀಳಲಿಲ್ಲ. ಆಕೆಗೆ ಪರಿಚಯವಿರುವ ಒಬ್ಬ ಹುಡುಗಿಯ ಹೆಸರು ಹೇಳಿ ಅಲ್ಲಿಗೆ ಹೋಗುತ್ತಿರುವೆನೆಂದ. ಓಲ್ಗಾಳ ಅಸೂಯೆಯಿಂದ ಖುಷಿಪಡುವ ಮನಸ್ಸಾಗಿತ್ತು ಅವನಿಗೆ.

ಓಲ್ಗಾ ತನ್ನ ಕೋಣೆಗೆ ಹೋಗಿ ಹಾಸಿಗೆ ಮೇಲೆ ಬಿದ್ದಳು. ಅಸೂಯೆ, ತಿರಸ್ಕಾರ, ದುಃಖ, ಅವಮಾನ, ಕೋಪ ಇವುಗಳಿಂದ ತಪ್ತಳಾದ ಅವಳು ದಿಂಬನ್ನು ಕಡಿಯುತ್ತಾ ಬಿಕ್ಕಿ ಬಿಕ್ಕಿ ಅತ್ತಳು. ಡಿಮೋವ್ ತನ್ನ ಗೆಳೆಯನನ್ನು ಅಲ್ಲೇ ಬಿಟ್ಟು ಪತ್ನಿಯ ಕೋಣೆಯ ಬಾಗಿಲಿಗೆ ಬಂದು ನೀಳವಾಗಿ ಉಸಿರುಬಿಟ್ಟು ಹೇಳಿದ.

''ಮಮೋ, (ಆತ ಆಕೆಯನ್ನು ಮುದ್ದಿಗಾಗಿ

ಕರೆಯುತ್ತಿದ್ದ ಹೆಸರು) ಆದದ್ದು ಆಗಿ ಹೋಯಿತು. ದುಃಸ್ವಪ್ನವೆಂದು ಮರೆತು ತಾಳ್ಮೆ ತೆಗೆದುಕೋ. ಜೋರಾಗಿ ಏಕೆ ಅಳು?'' ಗಲಿಬಿಲಿ, ಲಜ್ಜೆ, ಕಾರುಣ್ಯಗಳಿಂದ ಕೂಡಿದ್ದ ಆ ಧ್ವನಿ ಕೂಡ ಭಗ್ನ ಹೃದಯಿಯ ಕೋಪ ಅಸೂಯೆಗಳನ್ನಡಗಿಸಲಾರದೆ ಹೋಯಿತು.

ಮುಖ ತೊಳೆದು, ಉಡುಪು ಸರಿಪಡಿಸಿಕೊಂಡ ಓಲ್ಗಾ ತಕ್ಷಣ ರಿಯೋಬಾವ್‌ಸ್ಕಿ ಹೇಳಿದ್ದ ಆ ಹುಡುಗಿಯ ಮನೆಗೆ ಹೋದಳು. ಅಲ್ಲಿ ರಿಯೋಬಾವ್‌ಸ್ಕಿ ಇಲ್ಲದಿದ್ದುದನ್ನು ಕಂಡು, ಮತ್ತೊಬ್ಬಳ ಮನೆಗೆ, ಅಲ್ಲಿಂದ ಮಗದೊಬ್ಬಳ ಮನೆಗೆ. ಮೊದಮೊದಲು ಈ ಬಗ್ಗೆ ಲಜ್ಜೆ ಎನಿಸಿದರೂ ಅದನ್ನು ಅವಳು ಬೇಗನೆ ಹೋಗಲಾಡಿಸಿಕೊಂಡಳು. ಆ ಒಂದು ರಾತ್ರಿ ತನಗೆ ಪರಿಚಯವಿರುವ ಪ್ರತಿಯೊಬ್ಬ ಹುಡುಗಿಯ ಮನೆಗೂ ಹೋಗಿ ಅವಳು ರಿಯೋಬಾವ್‌ಸ್ಕಿಯನ್ನು ಹುಡುಕಿದ್ದಾಳೆ. ಮತ್ತು ಅವರೆಲ್ಲರಿಗೂ ಅವಳ ಬಗ್ಗೆ 'ಅರ್ಥ'ವಾಗಿದೆ.

ಒಮ್ಮೆ ಆಕೆ ರಿಯೋಬಾವ್‌ಸ್ಕಿ ಬಳಿ ತನ್ನ ಪತಿಯನ್ನು ಕುರಿತು- 'ಈತ ನನ್ನನ್ನು ತನ್ನ ಸಹೃದಯತೆಯಿಂದಲೇ ಕೊಲ್ಲುತ್ತಾನೆ' ಎಂದಿದ್ದಳು. ಆ ಪದಗಳು ಅವಳಿಗೆ ಎಷ್ಟು ಪ್ರಿಯವಾಯಿತೆಂದರೆ ತನಗೆ ಅರಿವಿದ್ದ ಎಲ್ಲರ ಬಳಿಯಲ್ಲೂ ಇದನ್ನೇ ಹೇಳಲು ಶುರು ಮಾಡಿದಳು- 'ಈತ ನನ್ನನ್ನು ತನ್ನ ಸಹೃದಯತೆಯಿಂದಲೇ ಕೊಲ್ಲುತ್ತಾನೆ.'

ಅವಳ ದಿನಚರಿ ಏರುಪೇರಿಲ್ಲದೆ ಸಾಗುತ್ತಿದೆ. ಪ್ರತಿ ಬುಧವಾರ ಪಾರ್ಟಿ ಇದ್ದೇ ಇರುತ್ತದೆ. ಹಾಡು, ಚಿತ್ರ, ವಾದ್ಯ, ಪುಸ್ತಕ ವಿಮರ್ಶೆ. ಮಧ್ಯರಾತ್ರಿಗೆ ಅರ್ಧ ಗಂಟೆ ಇದೆ ಎನ್ನುವಾಗ ಊಟದ ಮನೆ ಬಾಗಿಲು ತೆರೆಯುವುದು. ಡಿಮೋವ್ ಶುಷ್ಕ ನಗೆಯೊಂದಿಗೆ 'ಗೆಳೆಯರೇ, ಊಟಕ್ಕೆ ಬನ್ನಿ' ಎಂದು ಆಹ್ವಾನಿಸುವನು.

ಗಣ್ಯ ವ್ಯಕ್ತಿಗಳ ಬಗ್ಗೆ ಓಲ್ಗಾಳ ಆಸಕ್ತಿ ಹೆಚ್ಚುತ್ತಿದೆ. ಎಲ್ಲಿ ಹೋದರೂ ಅವಳಿಗೆ ತೀರದ ದಾಹ, ಅಡಗಿಸಲಾರದ ಅತೃಪ್ತಿ. ಮನೆಗೆ ಎಂದಿನಂತೆಯೇ ತಡವಾಗಿ ಬರುವಳು. ಆದರೆ ಡಿಮೋವ್ ಹೆಚ್ಚು ಹೆಚ್ಚು ಓದುತ್ತಾ ಕಡಿಮೆ ನಿದ್ರಿಸಲು ಅಭ್ಯಸಿಸಿದ. ರಾತ್ರಿ ಮೂರಕ್ಕೆ ಮಲಗಿ ಬೆಳಗ್ಗೆ ಎಂಟಕ್ಕೆ ಏಳುತ್ತಿದ್ದ.

ಒಂದು ಸಂಜೆ ನಾಟಕಕ್ಕೆ ಹೋಗಲು ಅಣಿಯಾಗುತ್ತಿದ್ದ ಪತ್ನಿಯ ಬಳಿ ಬಂದು ನಿಂತ ಡಿಮೋವ್. ಸಂತೋಷದಿಂದ, ಒಂದು ಬಗೆಯ ಆತ್ಮತೃಪ್ತಿಯಿಂದ ಆತನ ಕಣ್ಣುಗಳು ನೀಲಾಂಜನಗಳಂತೆ ಬೆಳಗುತ್ತಿದ್ದವು.

ಕನ್ನಡಿಯಲ್ಲೇ ತನ್ನ ಮಡದಿಯ ಭಾವವನ್ನು ಅರಿಯಲು ಪ್ರಯತ್ನಿಸುತ್ತಾ ಆತ ಹೇಳಿದ-

''ಅವರೇ ಡಯಾಗ್ನೈಸ್ ಮಾಡಿರುವುದು. ಯಾರು ಬಂದರೇನು? ನನ್ನಂತೆಯೇ ಅವರು ಕೂಡ.''

ಓಲ್ಗಾಳ ಹೃನ್ಮನಗಳ ಮುಂದೆ ಡಿಮೋವ್‌ನ ರೋಗ ಕಪ್ಪು ನೆರಳಿನಂತೆ ಕುಣಿಯುತ್ತಿದೆ. ಹುಚ್ಚಿಯಂತೆ ಆಕೆ ತನಗೆ ತಾನೇ ಮಾತನಾಡಿಕೊಳ್ಳುತ್ತಾಳೆ-

''ದೇವರೇ, ನಮ್ಮನ್ನು ಉಳಿಸು, ನಮ್ಮಿಬ್ಬರನ್ನೂ ಉಳಿಸು.''

ಗಂಟೆಗಳು ಒಂದನ್ನೊಂದು ಅಟ್ಟಿಸಿಕೊಂಡು ಹೋಗುತ್ತಿವೆ. ಆದರೆ ಅವು ಓಲ್ಗಾಳಿಗೆ ಅನಂತವಾದ ಕಾಲವಾಗಿ ಬಿಟ್ಟಿದೆ. ವೈದ್ಯರ ಓಡಾಟ ಜಾಸ್ತಿಯಾಗಿದೆ. ಪರಿಚಾರಕಿ ಬಂದು 'ಹಾಸಿಗೆ ಹಾಸಲೇ?' ಎಂದು ಮೃದುವಾಗಿ ಕೇಳುತ್ತಾಳೆ. ಒಡತಿಯಿಂದ ಉತ್ತರ ಸಿಗದೆ, ಮೌನವಾಗಿ ಹಿಂತಿರುಗುತ್ತಾಳೆ. ಗಡಿಯಾರದಿಂದ ತಿರುಗಿ ಗಂಟೆ ಹೊಡೆಯುವ ಶಬ್ದ .... ಓಲ್ಗಾ ನದಿಯ ಮೇಲೆ ಮಳೆ ಸುರಿಯುತ್ತಿರುವಂತೆ ಸ್ವಪ್ನ ಮತ್ತೆ ಎಚ್ಚರ .... ಕೊರೋಸ್ಟೆಲೇವ್‌ನನ್ನು ಆಕೆ ಗುರ್ತಿಸುತ್ತಾಳೆ. ಎಷ್ಟು ವೇಳೆ ಎಂದು ತಿಳಿಯಲು ಇಷ್ಟಪಡುತ್ತಾಳೆ. ವೇಳೆ ಎಷ್ಟಾಗಿದೆ ಎಂಬುದನ್ನು ಹೇಳಿ, ನಂತರ 'ಡಿಮೋವ್, ಸಾಯುತ್ತಿದ್ದಾನೆ' ಎಂದು ಒಂದೇ ಉಸಿರಿನಲ್ಲಿ ಒದರಿದ.

ಓಲ್ಗಾಳಿಗೆ ಅರೆ ಕ್ಷಣ ಏನೂ ಗೊತ್ತಾಗಲಿಲ್ಲ. ಮತ್ತೆ ಹೇಳಿದ ಕೊರೋಸ್ಟೆಲೇವ್ ''ಹೌದು, ನಿಜ, ಡಿಮೋವ್‌ನ ಅಂತ್ಯ ಸಮೀಪಿಸುತ್ತಿದೆ.''

ನಂತರ ನಿರ್ಲಜ್ಜನಾಗಿ ಅಳತೊಡಗಿದ ಅವನು.

''ನಮ್ಮೆಲ್ಲರ ಮಧ್ಯೆ ಅವನೊಬ್ಬ ಮಹಾ ಪುರುಷನಾಗಿದ್ದ. ನಮ್ಮ ಮಧ್ಯೆದಲ್ಲಿದ್ದೂ ಅವನೊಬ್ಬ ಭಿನ್ನ ವ್ಯಕ್ತಿಯಾಗಿದ್ದ. ಓ, ದೇವಾ, ಇಂತಹ ಮೇಧಾವಿ ನಮಗೆ ಇನ್ನೊಬ್ಬ ಸಿಗ ಲಾರ'' ಎಂದು ಹೃದಯವಿದ್ರಾವಕವಾಗಿ ಗೋಳಿಟ್ಟ ಆ ಅಂತರಂಗದ ಗೆಳೆಯ.

''ಓಸಿಪ್, ಏನು ಮಾಡಿಕೊಂಡೆಯಪ್ಪ, ವಿಜ್ಞಾನದ ಸೇವೆ ಮಾಡಿ, ಇಂದು ಅದಕ್ಕಾಗಿಯೇ ಜೀವ ಕೊಡುತ್ತಿದ್ದೀಯಲ್ಲವೇ? ನಿನ್ನ ಕಾರ್ಯ ದಕ್ಷತೆ, ಸೇವಾ ಮನೋಭಾವ, ಎತ್ತಿನಂತೆ ಹಗಲಿ ರುಳು ದುಡಿಯುವ ಛಲ ಇನ್ನಾರಿಗಿದೆ? ಇಷ್ಟೆಲ್ಲಾ ತ್ಯಾಗ ಏಕೆ ಮಾಡಿದೆ? ಯಾರಿಗಾಗಿ? ಹೇಳು ಗೆಳೆಯಾ .....?'' ಕೊರೋಸ್ಪೆಲೇವ್ ಗೋಳಿ ಡುತ್ತಾ ಮುಂದುವರಿಸಿದ.

ಹೌದು! ನೂರರಲ್ಲಿ ಒಬ್ಬ ಡಿಮೋವ್, ಅಲ್ಲ ಸಾವಿರಕ್ಕೆ ಒಬ್ಬ. ವಿಜ್ಞಾನ ಪ್ರಪಂಚದ ಧ್ರುವ ತಾರೆ. ಮಾನವ ಕೋಟಿಯ ಮಹಾತ್ಮ. ಆ ಕ್ಷಣ ದಲ್ಲಿ ಡಿಮೋವ್‌ನ ವ್ಯಕ್ತಿತ್ವ ನೆನಪಾಗುತ್ತಿದೆ, ತನ್ನ ಡಿಮೋವ್ ಒಬ್ಬ ಅಸಾಧಾರಣ, ಇತರರಿಗಿಂತ ಭಿನ್ನವ್ಯಕ್ತಿ ಅಂದು ಅಪ್ಪನಿಗೆ ಮಾಡಿದ ಸೇವೆ .... ಆತ ಬಲಿದಾನಿ.

'ನೀನೇ ನಿನ್ನ ಸೌಭಾಗ್ಯವನ್ನು ಕಳೆದುಕೊಂಡೆ ಯಲ್ಲಾ' ಕಿಟ್ಟನೆ ಕಿರುಚಿ ಓಲ್ಗಾ ಗಂಡನ ಕೋಣೆಗೆ ನುಗ್ಗಿದಳು.

ನಿಶ್ಶಬ್ದವಾಗಿ ಅವನು ಮಲಗಿದ್ದ. ಮುಖ ಬಿಳಚಿಕೊಂಡಿತ್ತು. ಯಾವ ನಗೆಯನ್ನು ಜೀವನ ವಿಡೀ ಅರ್ಥ ಮಾಡಿಕೊಳ್ಳದೆ ಹೋದಳೋ ಆ ನಗು- ಆ ಕಳಂಕ ರಹಿತ ನಿರ್ಮಲ ನಗು ಅವನ ತುಟಿಯಲ್ಲಿ ಲಾಸ್ಯವಾಡುತಿತ್ತು. ಹೃದಯ ಬೆಚ್ಚ ಗಿದ್ದರೂ, ಹಣೆ ಮಾತ್ರ ಮಂಜಿನಂತೆ ತಣ್ಣಗಿರು ವುದನ್ನು ಕಂಡ ಓಲ್ಗಾ 'ಡಿಮೋವ್' ಎಂದು ಚೀರಿದಳು.

ತಾನು ಮಾಡಿದ್ದು ದೊಡ್ಡ ತಪ್ಪೆಂದೂ, ತಪ್ಪಿಗೆ ಏನು ಬೇಕಾದರೂ ಶಿಕ್ಷೆಯನ್ನು ಅನುಭವಿಸಲು ಸಿದ್ಧವಾಗಿದ್ದೇನೆಂದೂ, ಆತನ ಚರಣಗಳ ಅನು ಗಾಲದ ದಾಸಿ ತಾನೆಂದೂ ಓಲ್ಗಾ ಪತಿಗೆ ಹೇಳ ಬಯಸಿದಳು.

ಆದರೆ ಪಕ್ಕದ ಕೋಣೆಯಲ್ಲಿ ಕೊರೋಸ್ಪೆ ಲೇವ್ ಗಟ್ಟಿಯಾಗಿ ಹೇಳುತ್ತಿದ್ದ ''ಮಾತು ಬೇಡ, ಚರ್ಚಿಗೆ ಹೋಗಬೇಕು ..... ಮುಂದಿನ ಕಾರ್ಯ ಬೇಗ ಸಾಗಬೇಕು.''

●

''ಕ್ವಿಜ್'' ಎನ್ನುವ ಪದ ಎಷ್ಟೋ ಸಲ ಕೇಳಿದ್ದೀರಿ. ಆದರೆ ಅದಕ್ಕೆ ಅರ್ಥ ಏನು ಎಂದು ಆಲೋಚಿಸಿದ್ದೀರಾ?

ನಿಜಗವಾಗಿ ಹೇಳಬೇಕೆಂದರೆ ಆ ಪದಕ್ಕೆ ಅರ್ಥ ಇಲ್ಲ. ಅದು ಒಬ್ಬ ಐರಿಷ್ ವ್ಯಕ್ತಿ ಕಂಡುಹಿಡಿದ ಅರ್ಥವಿಲ್ಲದ ಪದ. 1780ರಲ್ಲಿ ಡಬ್ಲಿನ್ ನಗರದಲ್ಲಿ ಒಂದು ಥಿಯೇಟರ್‌ನ ಮಾಲಿಕ ದಿನಕ್ಕೊಂದು ಹೊಸ ಪದವನ್ನು ಕಂಡು ಹಿಡಿದು ಆ ಭಾಷೆಯಲ್ಲಿ ಅದನ್ನು ಸೇರಿಸುವೆನೆಂದು ಪಣ ತೊಟ್ಟನು. ಅದು ಸಾಧ್ಯವಾಗದ ಕೆಲಸವೆಂದು ಅನೇಕರು ಹೇಳಿದರು. ಮಾಲಿಕ ಆ ರಾತ್ರಿ, ಕೆಲಸ ಇಲ್ಲದೆ ತಿರುಗುತ್ತಿದ್ದ ಕೆಲ ಹುಡುಗರಿಗೆ ಸ್ವಲ್ಪ ಹಣ ಕೊಟ್ಟು, ''ಕ್ವಿಜ್'' (Quiz) ಅನ್ನುವ ಪದವನ್ನು ಡಬ್ಲಿನ್ ನಗರದ ಎಲ್ಲಾ ಬೀದಿಯಲ್ಲಿನ ಗೋಡೆಗಳ ಮೇಲೆ ಬರೆಯುವಂತೆ ಹೇಳಿದನು. ಮರುದಿವಸ ಎಲ್ಲಿ ನೋಡಿದರೂ ''ಕ್ವಿಜ್'' ಎನ್ನುವ ಪದ ಕಾಣಿಸಿಕೊಂಡಿತು. ಅದರ ಅರ್ಥದ ಬಗ್ಗೆ ಎಲ್ಲರಲ್ಲೂ ಚರ್ಚೆ ಆರಂಭವಾಯಿತು. ಆ ರೀತಿ ವಿಚಿತ್ರ ರೀತಿಯಲ್ಲಿ ಬಳಕೆಗೆ ಬಂದ ಈ ''ಕ್ವಿಜ್'' ಇಂದು ನಿಘಂಟು ಸೇರಿಕೊಂಡಿದ್ದು ವಿಚಿತ್ರವೇ ಅಲ್ಲವೇ?

● ಸಂಗ್ರಹ : ಉಮಾ



## ಪುಸ್ತಕ ವಿಭಾಗ



# ಗುಬ್ಬಿ ವೀರಣ್ಣನವರ ಕಲೆಯು ಕಾಯಕ

ಕಲಾವಿದನೊಬ್ಬ ತನ್ನ ಪಾಡಿಗೆ ತಾನು ಕಲೆಯ ಸೇವೆ ಮಾಡುವುದು ಸಾಮಾನ್ಯವಾದರೂ ಕಲಾವಿದರ ಕುಲವನ್ನೇ ನಿರ್ಮಿಸುವುದು ಅಪರೂಪದ-ಅಸಾಮಾನ್ಯದ ಸಂಗತಿ. ಅಂಥ ಕೆಲಸ ಮಾಡಿದವರು ಗುಬ್ಬಿ ವೀರಣ್ಣ. ಕರ್ನಾಟಕದ ರಂಗಭೂಮಿ- ಚಲನಚಿತ್ರ ರಂಗದ ಪ್ರಗತಿಗೆ ಅಹರ್ನಿಶಿ ದುಡಿದ ಅವರು ಅಕ್ಷರಶಃ 'ಕಲೆಯೆ ಕಾಯಕ'ವನ್ನಾಗಿ ಮಾಡಿಕೊಂಡವರು.

ಇಂದಿನ ರಂಗ- ಚಿತ್ರರಂಗದ ಪ್ರಮುಖರಲ್ಲಿ ಅನೇಕರು ವೀರಣ್ಣನವರ ಸಂಪರ್ಕವನ್ನು- ಸಹಾಯವನ್ನು ಒಂದಿಲ್ಲೊಂದು ರೀತಿಯಲ್ಲಿ ಹೊಂದಿದವರೆ. ಇಂದಿನ ಪೀಳಿಗೆಗೆ ವೀರಣ್ಣ ನಿಜವಾಗಿಯೂ ದಂತ ಕಥೆಯೆ. ಈಗ ವೀರಣ್ಣನವರ ಜನ್ಮಶತಮಾನೋತ್ಸವ ವರ್ಷ. ಅವರ ಕಲೆಯು ಕಾಯಕದ ಅಷ್ಟಿಷ್ಟು ಪರಿಚಯ ಈ ಮುಂದಿನ ಪುಟಗಳಲ್ಲಿದೆ.

ಗೋನಾ

ಅನಾಥ ಎಳೆ ಬಳ್ಳಿಯೊಂದು ಗಿಡದ ಆಶ್ರಯ ಪಡೆಯುತ್ತದೆ. ಅದರ ನೆರಳ ನಲ್ಲಿ ನಳನಳಿಸುತ್ತ ಬೆಳೆದು ಹಲವು ಟಿಸಿಲುಗಳಾಗಿ ಹಬ್ಬಿ ಗಿಡವನ್ನು ಸಿಂಗರಿ ಸುತ್ತದೆ. ಕಾಲಕ್ರಮದಲ್ಲಿ ಗಿಡ ಯಾವುದು ಬಳ್ಳಿ ಯಾವುದೆಂದು ಗೊತ್ತಾಗದ ಹಾಗೆ ಆಕಾಶಕ್ಕೆ ಎಲೆಗ ಳನ್ನೂ ಆಳಕ್ಕೆ ಬೇರುಗಳನ್ನೂ ಬಿಟ್ಟು ಗಟ್ಟಿ ಮರವಾಗಿ ನಿಲ್ಲುತ್ತದೆ. ಈ ಮರ ದಲ್ಲಿ ಹತ್ತು ಬಗೆಯ ಹೂಗಳು ನೂರು ರುಚಿಯ ಹಣ್ಣುಗಳು....

ನಾಡಿನಗಲ ನಾಲ್ದೆಸೆಗೂ ಚಾಚಿದ ಅದರ ರೆಂಬೆಗಳಲ್ಲಿ ಗಿಳಿ-ಕೋಗಿಲೆ-ರತುನ ಪಕ್ಷಿಗಳು. ಶಕುನ ನುಡಿವ ಹಾಲಕ್ಕಿ, ಬಿಂಕದ ಬೆಳ್ಳಕ್ಕಿ, ನಾಟ್ಯವಾಡುವ ನವಿಲು ಕೂಡ. ಉದ್ದಗಲ ವ್ಯಾಪಿಸಿದ ನೆರಳಲ್ಲಿ ಜಿಂಕೆ ಗಳ ಚಿನ್ನಾಟ, ಮೊಲಗಳ ಮೇಲಾಟ, ಕೃಷ್ಣ ಮೃಗಗಳ ಹುಸಿ ಕಾದಾಟ...

ಬೆಳೆ ಬೆಳೆಯುತ್ತಲೆ ಮರ ಅಮರ ವಾಗುತ್ತದೆ, ಅಶ್ವತ್ಥವಾಗುತ್ತದೆ, ಕಲ್ಪವೃ ಕ್ಷವಾಗುತ್ತದೆ...

ಗುಬ್ಬಿ ವೀರಣ್ಣನವರ ಬದುಕನ್ನು ನಾವು ಈ ಮೇಲಿನ 'ಅನಾಥ ಬಳ್ಳಿ ಅಮರ ಮರವಾಗಿ ನಿಂತ ಕಥೆ' ಯೊಂದಿಗೆ ಸಮೀಕರಿಸಬಹುದು.

ವಾರಾನ್ನ-ಕೋರಾನ್ನಗಳ ಹುಡು ಗರೇ ಹಾಗೆ. ಅಸಾಮಾನ್ಯರಾಗಿ ಬೆಳೆ ಯುತ್ತಾರೆ. ಬೆವರಿನ ಬೆಲೆಯನ್ನು ಬಾಲ್ಯದಲ್ಲೇ ಬಲ್ಲವರು ಮುಂದೆ ಮಹಾನುಭಾವರಾಗುತ್ತಾರೆ.

ಕಿರಿರಾಣಿಯ ಮೋಹಕ್ಕೆ ಸಿಲುಕಿ ಹಿರಿ ರಾಣಿಯನ್ನೂ ಆಕೆಯ ಮಕ್ಕಳನ್ನೂ ತೊರೆದು ನಿಂತ ರಾಜನಂತೆ ಗುಬ್ಬಿ ಊರಿನ ಬೀಗದ ವ್ಯಾಪಾರಿ ಹಂಪಣ್ಣ ವರ್ತಿಸತೊಡಗಿದರು. ರುದ್ರಮ್ಮ



ಮತ್ತು ಆಕೆಯ ಮೂವರು ಮಕ್ಕಳಿಗೆ ಅನ್ನಾನ್ನ ಗತಿ. ಚರಿತಾರ್ಥಕ್ಕೆ ಅವರಿವರ ಮನೆಗೆಲಸ. ಹಸುಗೂಸುಗಳ ಹಸಿವು ಹಿಂಗಿಸಲು ತಂಗಳನ್ನ ತನ್ನ ಹೊಟ್ಟೆಗೆ ತಂಬಿಗೆ ನೀರು. ಈ ದುಃಖವನ್ನು ಯಾರಿಗೂ ತೋರಗೊಡದೆ, ಗಂಡನ ಕುರಿತು ಯಾರಲ್ಲೂ ದೂರು ಕೊಡದೆ ಇದ್ದವಳು ಆ ತಾಯಿ. ಐದಾರು ವರ್ಷದ 'ಈರಣ್ಣ' ನಿಗೆ ಕಷ್ಟ ಸಹಿಷ್ಣು ತೆಯ ಪಾಠ ಹೇಳಿದ ಮೊದಲ ಗುರು ಆಕೆ.

ಆತ್ತಿಗೆ ಮತ್ತು ಆಕೆಯ 'ಮೂಗು ಕಣ್ಣುಗಳ' ನೋವನ್ನು ಕಂಡು ಮರುಗಿ ದರು ಈರಣ್ಣನ ಚಿಕ್ಕಪ್ಪ ವೀರಣ್ಣ. ಆಗ ವರು 'ಗುಬ್ಬಿ ಶ್ರೀ ಚೆನ್ನಬಸವೇಶ್ವರ ನಾಟಕ ಸಭಾ'ದ ವ್ಯವಸ್ಥಾಪಕ. ಆ ಕಾಲದಲ್ಲಿ ಊರ ಹೋಬಳಿಯ ಲಿಂಗಾಯತ-ಮುಸ ಲ್ಮಾನ-ಜೈನರೇ ಮೊದಲಾದ ವರ್ತಕರು ಸೇರಿ ಗಲ್ಲಗಳಲ್ಲಿ ಐನೂರು ರೂಪಾಯಿ ಹಾಕಿ ಪುರದೈವದ ಹೆಸರಿ ನಲ್ಲಿ ಸ್ಥಾಪಿಸಿದ್ದ ಕಂಪನಿ ಅದು. ಮಳೆ ಗಾಲವೊಂದನ್ನುಳಿದು ವರ್ಷದುದ್ದಕ್ಕೂ ಸುತ್ತಮುತ್ತ ನಾಟಕಗಳನ್ನು ಪ್ರದರ್ಶಿ ಸುತ್ತ ಸಂಚರಿಸುತ್ತಿತ್ತು. ಎಂಥ ಎಡ ರನ್ನೂ ಎಂಟೆದೆಯಿಂದ ಎದುರಿಸಬಲ್ಲ ಗಟ್ಟಿಗ ಚಂದಣ್ಣ ಎಂಬವರಿಗೆ ವರ್ತಕ

ವರ್ಗದವರು ಕಂಪನಿಯ ಉಸ್ತುವಾರಿ ವಹಿಸಿದ್ದರು. ಪ್ರತಿಸ್ಪರ್ಧಿ ಸಂಸ್ಥೆಗಳಿಲ್ಲದ್ದ ರಿಂದ ಕಂಪನಿಯ ಆದಾಯ ಚೆನ್ನಾಗಿತ್ತು. ವೀರಣ್ಣನವರು ತನ್ನಣ್ಣನ ಮಗನನ್ನು ಕಂಪನಿಯಲ್ಲಿ ಸೇರಿಸಿಕೊಳ್ಳುವಂತೆ ಚಂದಣ್ಣನವರ ಮನವೊಲಿಸಿದರು.

ಅನಾಥ ಎಳೆ ಬಳ್ಳಿ ಗಿಡದ ಆಸರೆ ಪಡೆಯಿತು.

ಚುರುಕು ಬುದ್ಧಿಯ ಚಂದನ್ನ ಹುಡುಗ ಚಂದಣ್ಣನವರ ಮನವನ್ನು ಗೆದ್ದ. ಬಾಲ ನಟನ ಕೊರತೆ ನೀಗಿದ ಹಿಗ್ಗು ಅವರಿಗೆ. ಅಕ್ಷರಾಭ್ಯಾಸದೊಂದಿಗೆ ಅಭಿನಯಾಭ್ಯಾಸ. ವೀರಪ್ಪ ಶಾಸ್ತ್ರಿಗಳೆಂಬ ಕವಿಗಳು ಆ ಕಂಪನಿಯ ಪ್ರಾರಂಭದಿಂದಲೂ ಇದ್ದವರು. ಅವರು ಬರೆದ ನಾಟಕಗಳೇ ಆಗ ಸಂಸ್ಥೆಯ ಹೆಮ್ಮೆಯ ನಿರ್ಮಿತಿಗಳು. ಪೌರಾಣಿಕ-ಜಾನಪದ ವಸ್ತುಗಳ ಆ ಪ್ರಯೋಗಗಳಲ್ಲಿ ಹೊಸ ಹುಡುಗನಿಗೆ ಬಾಲ ಚಿಲ್ಲಾಳ, ಸತ್ಯರಥ, ರೋಹಿತಾಶ್ವನಂಥ ಮುದ್ದು ಮುದ್ದು ಪಾತ್ರಗಳು.

ಹತ್ತರೊಳಗಿನ ಹುಡುಗನಿಗೆ ಸಂಗೀತ ಪಾಠವೂ ಸಾಗಿತು. ಬಾಲಕ ವೀರಣ್ಣ ತಬಲಾ, ಪಿಟೀಲು, ಹಾರ್ಮೋನಿಯಂ ವಾದನದಲ್ಲೂ ಪ್ರಾವೀಣ್ಯ ಮೆರೆದ. ಕಂಪನಿಗೆ ಉಪಯುಕ್ತ ಎಂದು ಕಂಡು ಬಂದರೆ ಮಾತ್ರ ಉಂಬಳದ ಜತೆ ಸಂಬಳ ನೀಡುವುದು ಚಂದಣ್ಣನವರ ರೂಢಿ. ರಾಜ-ರಾಣಿ-ಕೋಡಂಗಿ ಪಾತ್ರ ಮಾಡುವವರಿಗೆ ಆಗ ಹೆಚ್ಚಿನ ಸಂಬಳ. ವಾದ್ಯಗಾರರಿಗೂ ಅಷ್ಟೆ. ಉಳಿದವರಿಗೆ ಆದರರ್ಥ ಅಂದರೆ ಎಂಟ್ಹತ್ತು ರೂಪಾಯಿಗಳು ಮಾತ್ರ. ವೀರಣ್ಣನ ಬ್ಬಿಯ ಪ್ರತಿಭೆಯನ್ನು ಕಂಡ ಚಂದಣ್ಣ ತಿಂಗಳಿಗೆ ಐದು ರೂ. ಗಳ ಪಗಾರ



ಗೊತ್ತು ಮಾಡಿದರು.

ಮಳೆಗಾಲ ಬಂದರೆ ಕಂಪನಿಗೆ ಬಿಡುವು. ವೀರಣ್ಣ ಈ ಬಿಡುವಿನ ವೇಳೆಯಲ್ಲಿ ನಾಲ್ಕು ತಿಂಗಳ ಅಕ್ಷರಾಭ್ಯಾಸಕ್ಕೆ ತೊಡಗಬೇಕು. ಆದರೆ ಅದಕ್ಕೆ ಅನೇಕ ಅಡ್ಡಿಗಳು. ಹೀಗಾಗಿ ಓದಲು-ಬರೆಯಲು ಬರುವಷ್ಟು ಅಕ್ಷರ ಜ್ಞಾನ ಮಾತ್ರ ಬಂತು ಹುಡುಗನಿಗೆ. ಎರಡನೆ ಈಯತ್ತೆಯವರೆಗೆ ಓದಿ, ಅಪಾರ ವ್ಯವಹಾರ ಜ್ಞಾನ ಪಡೆದಿದ್ದ ಚಂದಣ್ಣ ಈ ವೇಳೆಗಾಗಲೇ ಕಂಪನಿಯ ಮಾಲಿಕರೇ ಆಗಿದ್ದರು. ಅವರೇ ಆಗೀಗ ವೀರಣ್ಣನಿಗೆ ಲೆಕ್ಕ-ಗಿಕ್ಕ ಹೇಳಿಕೊಡಬೇಕು.

ಕಂಪನಿಯ ಯಾವ ಕೆಲಸವಾದರೂ ಶ್ರದ್ಧೆ ಮತ್ತು ಭಕ್ತಿಯಿಂದ ಮಾಡುತ್ತಿದ್ದರು ವೀರಣ್ಣ. ತಮ್ಮ ಆತ್ಮ ಚರಿತ್ರೆ ("ಕಲೆಯೇ ಕಾಯಕ") ಯಲ್ಲಿ ಅವರು ಬರೆಯುತ್ತಾರೆ. "ಊರೊಳಗೆ ಒಬ್ಬ ತಮಟೆಯುವನನ್ನು ಹಿಂದಿಟ್ಟುಕೊಂಡು ಹೋಗಿ ಅಲ್ಲಲ್ಲಿ ನಿಂತು ತಮಟೆ ಬಾರಿಸುವುದನ್ನು ಬಾಯಿಂದ ಶೀಟಿ ಹಾಕಿ ನಿಲ್ಲಿಸಿ, ಕಂಪನಿ-ನಾಟಕ, ಆಡುವ ಸ್ಥಳ, ಟಿಕೀಟು ದರ ಇತ್ಯಾದಿಗಳನ್ನು ಬಾಯಲ್ಲಿ ಕೂಗಿ ಹೇಳಿ ಪುನಃ ಶೀಟಿ ಹಾಕಿ ತಮಟೆ ಬಾರಿಸಿಕೊಂಡು ಪ್ರಚಾರ ಕಾರ್ಯವನ್ನು ಮುಗಿಸುತ್ತಿದ್ದೆ...

"ನಾಟಕಕ್ಕೆ ದೀಪ ವ್ಯವಸ್ಥೆಗೆ ಆಗ್ ಲ್ಯಾಂಪುಗಳ ಚಿಮಣಿ ಒರೆಸಿ ಶುಭ್ರ ಮಾಡಿ ಸೀಮೆಯೆಣ್ಣೆ ಹಾಕಿ ಉರಿಸಿ ಇಡುವ ಮಾಡುತ್ತಿದ್ದೆನು...

"ಕ್ರಮೇಣ ಗ್ರೀನ್ ರೂಂನಲ್ಲಿ ಕಸ ಗುಡಿಸಿ ಹೊಸದಾಗಿ ಬಂದ ನಟರಿಗೆ ಮುಖಕ್ಕೆ ಬಣ್ಣ ಹಾಕುವುದಲ್ಲದೆ ಅವರಿಗೆ ನಾಟಕದ ಉಡುಪುಗಳನ್ನು ಕೊಡುವುದು, ನಾಟಕವಾದ ನಂತರ ಉಡುಪುಗಳನ್ನು ಸರಿಯಾಗಿ ಮಡಿಸಿ ಇಡುವುದು ಅಂದರೆ ಡ್ರೆಸ್ ಕೀಪರ್ ಕೆಲಸದ ಮಟ್ಟಕ್ಕೇರಿದೆ...

"ಕೆಲವು ಕಾಲ ನನಗೆ ನಮ್ಮ ಯಜಮಾನರು ಸ್ಟೋರ್ ಕೀಪರ್ ಕೆಲಸಕ್ಕೆ ನೇಮಿಸಿದ್ದರು. ಅದನ್ನು ಬಜಾರ್ ಮಾಸ್ಟರ್ ಎಂದೂ ಕರೆಯುತ್ತಿದ್ದರು. ಈ ಕೆಲಸ ಮಾಡುತ್ತಿದ್ದುದೇ ಅಲ್ಲದೆ ಅಡಿಗೆ ಭಟ್ಟರಿಗೆ ಅಸಿಸ್ಟೆಂಟ್ ಆಗಿ ಊಟಕ್ಕೆ ಬಡಿಸುವುದು, ಸಂದರ್ಭಾನುಸಾರ ನೀರು ತರುವುದು, ಅಡಿಯವನು ಖಾಯಿಲೆ ಬಿದ್ದಾಗ 'ಸೌಟ್ ರೈಟರ್' ಆಗಿ ಅಡಿಗೆ ಕೆಲಸವನ್ನೂ ಮಾಡಿದ್ದೇನೆ...

"ಗೇಟ್ ಕೀಪರ್, ಬುಕ್ಕಿಂಗ್ ಕ್ಲಾರ್ಕ್, ಮತ್ತು ವ್ಯವಸ್ಥಾಪಕರ ಕೆಲಸಗಳನ್ನು ಸಂದರ್ಭಾನುಸಾರ ಮಾಡಿದೆನಲ್ಲದೆ ವಾದ್ಯದವರ ಗೈರು ಹಾಜರಿಯಲ್ಲಿ ತಬಲಾ, ಹಾರ್ಮೋನಿಯಂ, ಪಿಟೀಲು ವಾದ್ಯಗಳನ್ನು ನಾಟಕಗಳಿಗೆ ನುಡಿಸುತ್ತಿದ್ದ ಸಂದರ್ಭಗಳಿಗೇನೂ ಕಮ್ಮಿಯಿರುತ್ತಿರಲಿಲ್ಲ..."

ಸ್ವರ ಭಂಗವಾಗುವವರೆಗೂ ವೀರಣ್ಣ ಬಾಲ ಪಾತ್ರಗಳಲ್ಲಿ ಮೆರೆದರು. ನಂತರ ಪಾಲಿಗೆ ಬಂದದ್ದು ಸಖಿ ಮುಂತಾದ ಚಿಲ್ಲರೆ ಪಾತ್ರಗಳು. ಅಥವಾ ಬದಲಿ ನಟನಾಗಿ, ಬಾರದ ಪಾತ್ರಧಾರಿಯ ಕೆಲಸವನ್ನು ನಿರ್ವಹಿಸುವುದು. ಒಂದು ರೀತಿಯಲ್ಲಿವರು 'ಎಲ್ಲಿ ಅವಶ್ಯವೋ ಅಲ್ಲಿ ಹೇಗೆ ಬೇಕೋ ಹಾಗೆ' ಬಳಸಲ್ಪಡುವ ಸಾಧನವಾದರು. ಸಾಧನೆ ಸಾಧ್ಯವಾಗಬೇಕಾದರೆ ಸಾಧಕ ಸಾಧನವಾಗಲೇಬೇಕು. ಆದರೆ ಸಮಯಸಾಧಕ ಆಗಬಾರದು. (ವೀರಣ್ಣನವರ ಶಬ್ದಕೋಶದಲ್ಲಿ ಸಮಯ ಸಾಧಕವೆಂಬ ಪದವೇ ಇರಲಿಲ್ಲ). ಸಣ್ಣ ಕೆಲಸವನ್ನು 'ಅರಿಯಲು ಸದವಕಾಶ' ಎಂದೇ ಬಗೆದು ಬೆಳೆದರು ವೀರಣ್ಣ.

ಕಂಪನಿಯೀಗ ಸೀಮೋಲ್ಲಂಘನ ಮಾಡಿತ್ತು. 'ಪಾಂಡವ ವಿಜಯ' ದಂಥ ನಾಟಕಗಳು ಕಂಪನಿಗೆ ಕೀರ್ತಿಕಲಶದಂತೆ. ಸುತ್ತಲಿನ ಜಿಲ್ಲೆಗಳಲ್ಲೆಲ್ಲ ಗುಬ್ಬಿ ಕಂಪನಿಯದೇ ಜಯಭೇರಿ. ಈ ವೇಳೆಗಾಗಲೇ ಮೈಸೂರು, ಬೆಂಗಳೂರುಗಳಲ್ಲದೆ ಬಳ್ಳಾರಿ, ಧಾರವಾಡಗಳಲ್ಲಿ ಹೊಸ 'ನಾಟಕ ಸಭಾ' ಗಳು ಹುಟ್ಟಿಕೊಂಡಿದ್ದವು. ಮೈಸೂರಲ್ಲಂತೂ ಅರಮನೆ ಕಂಪನಿ ರಾಜಾಶ್ರಯದಲ್ಲಿ ರಂಗೇರಿತ್ತು. ರಾಜಾಪಾರ್ಟು-ರಾಣಿ ಪಾರ್ಟುಗಳವರು 'ಬೇರೆ ರಾಜ್ಯ'ಗಳನ್ನರಿಸಿಕೊಂಡು ಹೋಗಲಾರಂಭಿಸಿದ್ದು ಇದೇ ಸಂದರ್ಭದಲ್ಲಿ. 'ಸಾರಂಗಧರ ಚರಿತ್ರೆ' ನಾಟಕದ ತಾಲೀಮಿನ ಹೊತ್ತಿಗಾಗಲೇ ಇಲ್ಲಿಯ ಒಂದಿಬ್ಬರು ರಾಜ-ರಾಣಿಯರು ವರದಾಚಾರ್ಯರ ಕಂಪನಿಗೂ, ಅಲ್ಲಿಂದ ಮುಂದೆ ಅರಮನೆ ಕಂಪನಿಗೂ ಹೋಗಿಯಾಗಿತ್ತು. ಮತ್ತೊಬ್ಬ ನಟ'ರಾಜ'ನಿಗೆ ಪಟ್ಟಾಭಿಷೇಕ ಆಗಲೇಬೇಕಲ್ಲ.

ಆಗ ನಾಟಕವಾಡುವ ಖಾಯಂ ರಂಗಮಂದಿರಗಳಾದರೂ ಎಲ್ಲಿ ಬರಬೇಕು? ಕಂಪನಿಯೇ ಹೋದಲ್ಲೆಲ್ಲ ಟೆಂಟು ಹಾಕಬೇಕು. ಸಾಮಾನ್ಯವಾಗಿ ಒಂದೂರಿಂದ ಕ್ಯಾಂಪು ಹೊರಟರೆ

ಮಾರನೆದಿನ ಕ್ಯಾಂಪು ಹದಿನೈದಿಪ್ಪತ್ತು ಮೈಲುಗಳ ಅಂತರದಲ್ಲೇ. ಬೆಳಿಗ್ಗೆ ಟೆಂಟು ಬಿಚ್ಚಿ ಚಕ್ಕಡಿ ತುಂಬಿ, ರಾತ್ರಿ ಹೊರಟರೆ ಮರುದಿನ ಮುಂಜಾನೆ ನಿಶ್ಚಿತ ಸ್ಥಳ ಸೇರಬೇಕು. ರಾತ್ರಿ ಹತ್ತಕ್ಕೆ ಆಟ ಆರಂಭವಾಗುವಂತೆ ರಂಗಮಂದಿರ ಸಹಿತ ಎಲ್ಲ ವ್ಯವಸ್ಥೆಯಾಗಬೇಕು. ಮಧ್ಯಾಹ್ನವೆ ಹುಡುಗರು ಊರವರಿಗೆ ನಾಟಕದ ಸುದ್ದಿ ಬಿತ್ತರಿಸುತ್ತಿದ್ದರು. (ಕುರ್ಚಿ ದರವನ್ನು ಪ್ರಚಾರದಲ್ಲಿ ಹೇಳುತ್ತಿದ್ದರಾದರೂ ಕಂಪನಿಯಲ್ಲಿ ಖುರ್ಚಿಗಳೇ ಇರಲಿಲ್ಲ. ಗಣ್ಯರೋ, ಅಧಿಕಾರಿಗಳೋ ಮೊದಲ ದಿನದ ನಾಟಕ್ಕೆ ಆಮಂತ್ರಿತರಾಗಿದ್ದರೆ ತಮ್ಮ ಕುರ್ಚಿಯೊಂದಿಗೇ ಅವರು ಬರುವಂತೆ ವಿನಂತಿಸಲಾಗುತ್ತಿತ್ತು.)

ಸೀಮೆಯೆಣ್ಣೆಯ ದೊಡ್ಡ ಚಿಕ್ಕ ಲಾಂದ್ರಗಳೇ ಆಗ ಪಾತ್ರಧಾರಿಗಳ ಮುಖತೋರಿಸುವ ಪ್ರಕಾಶ ಮೂಲಗಳು. ಹೀಗಾಗಿ ಥಾಳಾದ ಬಣ್ಣ ಮತ್ತು ಚಮಕಿನ ಉಡುಪುಗಳು ಅನಿವಾರ್ಯವಾಗಿದ್ದವು. ಬಣ್ಣದ ಬೆಳಕಿನ ಪರಿಣಾಮವುಂಟುಮಾಡಬೇಕಾದಾಗೆಲ್ಲ ಹಸುರು, ಕೆಂಪು ಮತಾಪು ಕಡ್ಡಿಗಳನ್ನು ಉರಿಸುತ್ತಿದ್ದರು. ಹಾರ್ಮೋನಿಯಂ-ಪಿಟೀಲುಗಳ ನಾದಕ್ಕಿಂತ ಎತ್ತರದ ಧ್ವನಿಯಲ್ಲಿ ನಟರು ಹಾಡಬೇಕಾಗುತ್ತಿತ್ತು. ಮಾತನಾಡುವಾಗಲೂ ಅಷ್ಟೆ. (ಗುಟ್ಟು-ಪಿಸುಮಾತುಗಳನ್ನು ಹೇಗ ಹೇಳುತ್ತಿದ್ದಿರಬೇಕೆಂಬುದನ್ನು ಊಹಿಸಿಕೊಳ್ಳಿ.)

ಗ್ಯಾಸ್ ಲೈಟುಗಳ ಉಪಯೋಗ ಆರಂಭವಾದದ್ದು ೧೯೧೦ರ ಸುಮಾರಿಗೆ. ಪ್ರಕಾಶವನ್ನು ನಿಯಂತ್ರಿಸಲು ಗ್ಯಾಸ್‌ಲೈಟಿಗೆ ತಗಡು ಕಟ್ಟಿ ಹಗ್ಗದ ಮೂಲಕ ಎತ್ತಿ ಬಿಟ್ಟು ಮಾಡುತ್ತಿದ್ದವು. ಅವುಗಳನ್ನೋಡಿಸುತ್ತಲೆ ಆಳಬೇಕು,



ಮಾತಾಡಬೇಕು, ಕುಣಿಯಬೇಕು, ಸ್ತ್ರೀ ಪಾತ್ರಧಾರಿ ನಟರ ವಿಗ್ಗುಗಳಲ್ಲಿ, ರವಿಕೆಯಲ್ಲಿ ಈ ಹುಳುಗಳು ಹೊಕ್ಕು ಕಚಗುಳಿ ಇಡುತ್ತಿದ್ದರೆ ಅವರ ಪಾಡು ಏನಾಗಬೇಡ ? 'ಆss' ಹಾಡುವಾಗಲಂತೂ ಧ್ವನಿ ಎಲ್ಲಿಂದ ಬರುತ್ತಿದೆ ಎಂದು ನೋಡಲೆಂಬಂತೆ ಸೀದಾ ಗಂಟಲಿಗಿಳಿಯುತ್ತಿದ್ದವಂತೆ ಅವು !

ಆದಾಗಲೇ ಸ್ತ್ರೀ ಪಾತ್ರಗಳನ್ನು ಸ್ತ್ರೀಯರೇ ಮಾಡಲು ಆರಂಭವಾಗಿತ್ತು. ಗಾಯನ ನರ್ತನ ಕಲಿತ ವೇಶ್ಯೆಯರವರು. ಮಾಲಿಕರ ಮನದನ್ನೆಯರಾಗಿಯೂ ಇವರು ಕೆಲವು ಸಲ ಕಂಪನಿಗಳನ್ನು ಆಳಿದ್ದುಂಟು.

ವೀರಣ್ಣನವರಿಗೆ ಆಗ ಕುಡಿಮೀಸೆಯೊಡೆಯುತ್ತಿದ್ದ ಕಾಲ. ಮೂಗು-ಕೆನ್ನೆಗಳ ಮೇಲೆ ಹೊಳಪು ಕಾಣಿಸಿಕೊಳ್ಳುತ್ತಿತ್ತು. ಚಿಕ್ಕ ಪುಟ್ಟ ಪಾತ್ರಗಳನ್ನು ಅನಿವಾರ್ಯವಾಗಿ ಆಡಿಕೊಂಡು ಕಂಪನಿಯ ಆಗುಹೋಗುಗಳತ್ತಲೇ ಅವರು ಹೆಚ್ಚು ಗಮನ ಹರಿಸುತ್ತಿದ್ದ ದಿನಗಳವು. ಆದವಾನಿ ತಾಲೂಕಿನ ಒಳಗುಂದಿ ಕ್ಯಾಂಪು.

ಸದಾರಮೆ ನಾಟಕ. 'ಕಳ್ಳ' ನಾಗುತ್ತಿದ್ದ ಸುಬ್ಬಯ್ಯನೆಂಬ ಹಾಸ್ಯ ನಟ ಊರಿಗೆ ಹೋಗಿದ್ದ. ಯಾರ್‍ಯಾರನ್ನೋ ಆ ಪಾತ್ರ ಮಾಡಿಸಿ ನೋಡಿದರೂ ಕಳೆ ಕಟ್ಟಲಿಲ್ಲ. ವೀರಣ್ಣನವರು ಮಾಲಿಕರ ಬಳಿ ಹೋಗಿ 'ಕಳ್ಳನಾಗುತ್ತೇನೆ ಅವಕಾಶ ಮಾಡಿ ಕೊಡಿ' ಎಂದು ದುಂಬಾಲುಬಿದ್ದರು. ಚಂದಣ್ಣ ಸಂತಸದಿಂದ ಒಪ್ಪಿದರು. ಅಂದಿನ ಆಟದಲ್ಲಿನ ಕಳ್ಳ ಇಡಿ ರಂಗ ಮಂದಿರದ ಮನಸ್ಸನ್ನೇ ತನ್ನ ಅಭಿನಯ ಚಾತುರ್ಯದಿಂದ ಅಪಹರಿಸಿಬಿಟ್ಟ! ವೀರಣ್ಣ ಖಾಯಂ 'ಕಳ್ಳ' ಆದದ್ದು ಅಂದಿನಿಂದಲೆ. ಜತೆಗೆ ಸಂಬಳ ಹದಿನೈದು ರೂಪಾಯಿಗೆ ಬಡ್ತಿ.

ಗಿಡದ ನೆರಳಲ್ಲಿ ನಳನಳಿಸುತ್ತ ಬೆಳೆದ ಬಳ್ಳಿ ಹಲವು ಟಿಸಿಲುಗಳಾಗಿ ಹಬ್ಬಿ ಗಿಡವನ್ನು ಸಿಂಗರಿಸಿತ್ತು.

ಶಿರಹಟ್ಟಿ ಮೊಕ್ಕಾಮು. ಮತ್ತೊಬ್ಬ ರಂಗ ಶ್ರೇಷ್ಠ ವೆಂಕೋಬರಾಯರ ತಾಣ ಅದು. ಒಂದು ರಾತ್ರಿ ಟೆಂಟೆಲ್ಲ ಅಗ್ನಿಗಾಹುತಿಯಾಗಿ ಚಂದಣ್ಣ ತಲೆ ಮೇಲೆ ಕೈ ಹೊತ್ತು ಕುಳಿತು ಬಿಟ್ಟರು. ಆಟವಿಲ್ಲದಿದ್ದರೆ ಊಟವೆಲ್ಲಿಯದು? ಬದುಕಿಗೇ ಬೆಂಕಿ ಬಿದ್ದಂತೆ ಕಲಾವಿದರೆಲ್ಲ ಕಂಗೆಟ್ಟರು. ವೀರಣ್ಣನವರು ಧೈರ್ಯಗೆಡಲಿಲ್ಲ. ಆದವಾನಿಗೋಡಿದರು. ನಾಟಕ ಖಯಾಲಿಯ ಶ್ರೀಮಂತ ಗೆಳೆಯ ಮಿಠಾಯಿ ಚೆನ್ನಬಸವಯ್ಯನವರಿಂದ ಐದುನೂರು ರೂಪಾಯಿಗಳ ಸಾಲ ತಂದು ಕಂಪನಿ ಗಡಿನಾಡಿನ ಉರವಕೊಂಡದಲ್ಲಿ ನಾಟಕ ಆಡಲು ಅನುವು ಮಾಡಿದರು. ಆದರೆ ಸೀನರಿಗಳು ಮೊದಲಾಗಿ ಎಲ್ಲವನ್ನೂ ಹೊಸದಾಗಿ ತಂದುಕೊಳ್ಳಬೇಕಾದ್ದು ಅನಿವಾರ್ಯವಾಗಿತ್ತು. ಸರಿ, ಹೊಸತನದೊಂದಿಗೆ ಹುರುಪಿನಿಂದ ರಾಯದುರ್ಗ, ಬಳ್ಳಾರಿಗಳಲ್ಲಿ 'ಸದಾರಮೆ' 'ಗುಲೇಬಕಾವಲಿ'ಯರು ಮೆರೆದರು.

ವೀರಣ್ಣನಿಗೀಗ ಕಂಕಣ ಬಲ. ಊರಿಗೆ ಹೋಗಿ ಗಂಗಮ್ಮನೊಂದಿಗೆ ಗಾರ್ಹಸ್ಥ್ಯಕ್ಕೆ ಕಾಲಿರಿಸಿದರು ವೀರಣ್ಣ. ಗದಗಿನ ಕ್ಯಾಂಪಿನಲ್ಲಿ ಕಂಪನಿಯನ್ನು ಕೂಡಿಕೊಂಡು ಜತೆಗಾರರಿಗೆಲ್ಲ ಮದುವೆಯ ಸಿಹಿಯೆಂದು ಮೃಷ್ಟಾನ್ನ ಭೋಜನ ಹಾಕಿ ಅವರ ಆಶೀರ್ವಾದ ಪಡೆದರು.

ವೀರಣ್ಣ ಈಗ ಸಹ ನಟರ ದೃಷ್ಟಿಯಲ್ಲಿ "ವೀರಣ್ಣನೋರು". ಕಂಪನಿಯ ಎಲ್ಲ ಆಗು ಹೋಗುಗಳಿಗೂ ಇವರ ಸಲಹೆ-ಸಮ್ಮತಿ ಬೇಕು. ಮುಂದಿನ ಕ್ಯಾಂಪು ಎಲ್ಲಿ ಎಂದು ನಿರ್ಧರಿಸಿ ಮೊದಲೇ ಅಲ್ಲಿ ಹೋಗಿ ಸ್ಥಳ ನಿಷ್ಕರ್ಷೆ ಮಾಡಿಕೊಂಡು ಬರುತ್ತಿದ್ದವರು ಅವರೆ. ಗಡಿಯನ್ನು ದಾಟಿ ಸೊಲ್ಲಾಪುರದವರೆಗೂ ಹೋಗಿ ಕಂಪನಿ ಹೆಸರು ಮಾಡಲು ಈ ತರುಣನ ಯೋಜನಾಚಾತುರ್ಯವೇ ಕಾರಣ. ಅಲ್ಲಿಯ ಸಿದ್ಧರಾಮೇಶ್ವರ ಜಾತ್ರೆಯೆಂದರೆ ನಾಟಕಾಭಿಮಾನಿಗಳಿಗೆ ಸುಗ್ಗಿ. ಕನಿಷ್ಠ ಮೂರು ಕಂಪನಿಗಳಾದರೂ ತಿಂಗಳುಗಟ್ಟಲೆ ತಳವೂರಬೇಕು. ಮರಾಠಿಯ 'ಕಿರ್ಲೋಸ್ಕರ್ ನಾಟಕ ಮಂಡಳಿ' ಮತ್ತು 'ವಸೀಕರ್ ಕಂಪನಿ'ಗಳ ಎದುರಿನಲ್ಲಿ ಈ 'ಕಾನಡಿ ನಾಟಕ ಮಂಡಳಿ'ಗೆ ಅಲ್ಪಾದಾಯವಾದರೂ ಬಾಲಗಂಧರ್ವರಂಥವರು ವೀರಣ್ಣನವರ ಅಭಿನಯ ಚಾತುರ್ಯವನ್ನು, ಕನ್ನಡ ಕಂಪನಿಗಳ ನಾಟಕಗಳ ಗುಣಮಟ್ಟವನ್ನು ಅರಿಯುವುದು ಸಾಧ್ಯವಾಯಿತು. ಮರಾಠಿ ನಾಟಕ ಮಂಡಳಿಗಳಲ್ಲಿ ಬಳಸುತ್ತಿದ್ದ ಗ್ಯಾಸ್ ಲೈಟುಗಳು, ಪೋಷಾಕುಗಳನ್ನು ತಮ್ಮ ಕಂಪನಿಯೂ ಹೊಂದಬೇಕೆಂಬುದು ವೀರಣ್ಣನವರ ಇಚ್ಛೆ. ಅವರ ಮಾತೆಂದರೆ ಮುಗಿ

# ಎಮ್ಮೆ ಮತ್ತು ರಂಗಭೂಮಿ

ಎಮ್ಮೆ ಹಾಡು ಕೇಳಿದ್ದೀರಲ್ಲ....

ಅದರ ಮೂಲ ಕಲ್ಪನೆ ಎಲ್ಲಿಯದು? ನೀನಾರಿಗಾದೆಯೊ ಎಲೆಮಾನವ? ಎಂಬ ಗೋವಿನ ಗೀತೆ ಎಂದು ನೀವಂದುಕೊಂಡಿದ್ದರೆ ಅದು ನೂರಕ್ಕೆ ಎಂಬತ್ತರಷ್ಟು ತಪ್ಪು. ಅಂದಿಗೆ ಎಪ್ಪತ್ತೈದೆಂಬತ್ತು ವರ್ಷಗಳ ಮುಂಚಿನ ಪ್ರಸಂಗವೊಂದು ಆ ಹಾಡಿಗೆ ಸ್ಫೂರ್ತಿ ಎಂದು ನನ್ನ ನಂಬಿಕೆ. ಹೌದು. ನಮ್ಮ ರಂಗಭೂಮಿಗೂ ಎಮ್ಮೆಗೂ ಅವಿನಾ ಸಂಬಂಧವಿದೆ.

ಕಳೆದ ಶತಮಾನದ ಕೊನೆಯ ಮೂರು ದಶಕಗಳ ಹೊತ್ತಿಗೆ ಕನ್ನಡದ ಗಂಡುಮೆಟ್ಟಿನ ಸ್ಥಳಗಳಲ್ಲೆಲ್ಲ ಮರಾಠಿ ನಾಟ್ಯಧ್ವಜ ಫಡಫಡಾಯಿಸುತ್ತಿತ್ತು. ಮಾತು ಮಾತಿಗೆ ಮರಾಠಿ ನಟರದೆ ಅನುಕರಣೆ, ಬಾಯಿ ತೆಗೆದರೆ ಮರಾಠಿ ನಾಟ್ಯ ಸಂಗೀತದ ಪ್ರಶಂಸೆ. ಆಡಿದರೆ ಮರಾಠಿ ನಾಟಕಗಳನ್ನೇ ಆಡಬೇಕು ಅಂದಿನ 'ಕನ್ನಡಿಗರು' ಒಟ್ಟಿನಲ್ಲಿ "ಎಲ್ಲಿ ನೋಡಲು ಮರಾಠಿಮರ ನಾಟಕಮಯಂ ಕಾನಾಯ್ತು ಕರ್ನಾಟಕಂ!! ಮರಾಠಿ ಮೋಹದಿಂದ ಅಂಧರಾದ ನಮ್ಮವರ ಕಣ್ಣು ತೆರೆಯಿಸಲು ಯೋಚಿಸಿದವರು ಒಬ್ಬ ಕನ್ನಡ ಶಾಲಾ ಮಾಸ್ತರರು. ರಂಗದೀಕ್ಷೆ ತೊಟ್ಟ ಅವರು ಗದಗಿನಲ್ಲಿ 'ವೀರ ನಾರಾಯಣ ಪ್ರಾಸಾದಿಕ ಕೃತಪುರ ನಾಟಕ ಮಂಡಳಿ' ಯನ್ನು ಸ್ಥಾಪಿಸಿ, ಹತ್ತು ಹಲವು ಕನ್ನಡ ನಾಟಕಗಳನ್ನು ಬರೆದು ನಿರ್ದೇಶಿಸಿದರು. ನಮ್ಮ ಜನ ಮರಾಠಿ ಮಬ್ಬಿನಿಂದ ಹೊರಬಂದು ಕನ್ನಡ ನಾಟಕಗಳನ್ನು ಉಬ್ಬಿನಿಂದ ನೋಡುವ ಹಾಗೆ ಮಾಡಿದರು. ಇದು ಕನ್ನಡದ ಮೊಟ್ಟಮೊದಲ ವೃತ್ತಿ ನಾಟಕ ಸಂಸ್ಥೆ. ನಾಟಕದ ವಸ್ತು, ಪಾತ್ರಧಾರಿಗಳ ಆಯ್ಕೆ, ರಂಗಸಜ್ಜಿಕೆ, ವೇಷಭೂಷ ಎಲ್ಲದರಲ್ಲೂ ಅವರು ಎಷ್ಟೊಂದು ಎಚ್ಚರ ವಹಿಸಿದ್ದರೆಂದರೆ 'ಕೃತಪುರ ನಾಟಕ ಮಂಡಳಿ'ಯ ಪ್ರಯೋಗಗಳ ಎದುರು ನಿಲ್ಲಲಾಗದೆ ಮರಾಠಿ ನಾಟಕ ಸಂಘಗಳು ಕಾಲುಕಿತ್ತಬೇಕಾಯಿತು. ಸುತ್ತಲಿನ ಕೆಲ ಊರುಗಳಲ್ಲಿ ಇನ್ನಷ್ಟು ಕನ್ನಡ ನಾಟ್ಯ ಸಂಸ್ಥೆಗಳು ಈ ಪ್ರೇರಣೆಯಿಂದ ತಲೆಯೆತ್ತಿ ನೆಲೆ ನಿಲ್ಲುವಂತಾಯಿತು. ಇದಕ್ಕೆಲ್ಲ ಕಾರಣರಾದವರು "ಶಾಂತ ಕವಿ"ಗಳೆಂದು ಖ್ಯಾತರಾದ ಸಕ್ಕರಿ ಬಾಳಾಚಾರ್ಯರು. ಕನ್ನಡ ರಂಗಭೂಮಿ ಮೆರೆಯುವಂತೆ ಮಾಡಿದ ಈ ಮಾಸ್ತರರನ್ನು ಸಹಿಸದ ಇಲಾಖಾಧಿಕಾರಿಗಳು ಆರು ಮೈಲುಗಳಂತರದ ಹೊಂಬಳಕ್ಕೆ 'ಹೊತ್ತು' ಹಾಕಿದರು. ಬಾಳಾಚಾರ್ಯರು ಇಂಥದಕ್ಕೆಲ್ಲ ಸೊಪ್ಪು ಹಾಕುವವರೆ? ಸಂಜೆಯವರೆಗೂ ಶಾಲೆಯ ಮಕ್ಕಳಿಗೆ ಪಾಠ. ಸೂರ್ಯ ಮುಳುಗಿದ ಕೂಡಲೇ ಗದಗಿಗೆ ಓಟ. ಅಲ್ಲಿ ಅವರಿಗಾಗಿ ಕಾಯುತ್ತಿದ್ದರಲ್ಲ 'ನಾಟಕದ ವಿದ್ಯಾರ್ಥಿಗಳು' ಈ ಮಾಸ್ತರರಿಗೆ 'ಹೊಂಬಳ- ಗದಗು- ಹೊಂಬಳ' ಎಕ್ಸ್‌ಪ್ರೆಸ್ ಆಗಿದ್ದುದೊಂದು ಎಮ್ಮೆ.

ಇಪ್ಪತ್ತು ವರ್ಷಗಳ ನಂತರ...

ಮೈಸೂರು ಸೀಮೆಯ ಎಮ್ಮೆಯೊಂದು ಭಾವೀ ರಂಗಧೀಮಂತನೊಬ್ಬನನ್ನು ಬೆನ್ನ ಮೇಲೆ ಕೂರಿಸಿಕೊಂಡು ಹೊಲ- ಗದ್ದೆಗಳನ್ನು ಸುತ್ತುತ್ತಿತ್ತು. ಆರು ವರ್ಷದ ಮುಗ್ಧ ಬಾಲಕ ಆತ. ತಂದೆಯ ಅನಾದರ- ಅಸಡ್ಡೆಗಳಿಂದಾಗಿ, ಮನೆಯ ಇತರರಂತೆ ಹೊಟ್ಟೆ ಹೊರೆಯಲು, ಆತ ಎಮ್ಮೆಯ ಬೆನ್ನು ಹತ್ತಬೇಕಾಯಿತು. 'ಎಮ್ಮೆ ಈರಣ್ಣ'ನಾಗಬೇಕಾಯಿತು. ಆ ಪ್ರಾಣಿಯ ಬೆನ್ನೇರಿ ಭಾವಸಮಾಧಿ ಸೇರಿದಾಗ ಮುಗಿಯಿತು. ಈರಣ್ಣನಿಗೆ ಕಲ್ಲು ಒತ್ತಿದ್ದಾಗಲೂ ಮುಳ್ಳು ಮುತ್ತಿದರೂ ಗೊತ್ತೇ ಆಗದು. ಹಾಕಿದ ಬೇಲಿ ದಾಟಿ ಎಮ್ಮೆಯೊಂದಿಗೆ ಈತನೂ ನೆಟ್ಟಕಣ್ಣು ನೆಟ್ಟಂತೆಯೆ ಸಾಗಬೇಕು. (ನಾನು ಮೇಲೆ ಹೇಳಿದ ಎಮ್ಮೆ ಹಾಡಿಗೆ ಸ್ಫೂರ್ತಿಯಾದ ಪ್ರಸಂಗ ಇದೇ.)

ಗುಬ್ಬಿ ವೀರಣ್ಣನವರಿಗೆ ಬಾಲ್ಯದಲ್ಲೇ ಕಷ್ಟ ಸಹಿಷ್ಣುತೆಯ ಪಾಠ ಹೇಳಿದ್ದು ಆ ಎಮ್ಮೆಯೆ ಇರಬೇಕು. ಶ್ರಮಜೀವನದ ಮಹತ್ವದ ಅರಿವು ಅವರಿಗಾದದ್ದೂ ಆಗಲೇ. ಸುಖ- ದುಃಖಗಳನ್ನು ಸಮದೃಷ್ಟಿಯಿಂದ ನೋಡಿ, ಗುರಿಯತ್ತ ಏಕಾಗ್ರತೆಯಿಂದ ಮುನ್ನಡೆವ ಬಲವನ್ನು ಹೀಗೇ ಬೆಳೆಸಿಕೊಂಡಿರಬೇಕು ವೀರಣ್ಣ.

ಯಿತು. ಗುಬ್ಬಿ ಕಂಪನಿಗೆ ಹೊಸ ಬೆಳಕು-ಹೊಸ ಥಳಕು ಬಂತು.

ಅಲ್ಲಿಂದ ಕಲಬುರ್ಗಿಗೆ. ಮತ್ತೊಬ್ಬ ಶ್ರೇಷ್ಠ ನಟ, ನಾಟಕಕಾರ, ನಿರ್ದೇಶಕ ಮತ್ತು ರಾಷ್ಟ್ರ ಭಕ್ತರಾಗಿದ್ದ ಗರೂಡ ಸದಾಶಿವರಾಯರ 'ಶ್ರೀ ದತ್ತಾತ್ರೇಯ ನಾಟಕ ಮಂಡಲಿ'ಯೂ ಶರಣಬಸವೇಶ್ವರ ಜಾತ್ರೆ ನಿಮಿತ್ತ ಡೇರೆ ಹೂಡಿತ್ತು.

ವೀರಣ್ಣನವರ ಪಾಲಿಗೆ ಈ ಕ್ಯಾಂಪುಗಳು ಕೇವಲ ಮೊಕ್ಕಾಮುಗಳಾಗಲಿಲ್ಲ; ಅಲ್ಲಲ್ಲಿಯ ಸಮಕಾಲೀನ ಕಲಾವಿದಶ್ರೇಷ್ಠರ ಸ್ನೇಹ ಲಾಭದ ಜತೆಗೆ ಅವರಲ್ಲಿಯ ಸದ್ಗುಣ-ಪ್ರಾವೀಣ್ಯಗಳನ್ನು ಮೈಗೂಡಿಸಿಕೊಳ್ಳುವ ಸುವರ್ಣಾವಕಾಶಗಳಾದವು. ಈ ದೃಷ್ಟಿಯಲ್ಲಿ ವೀರಣ್ಣನವರನ್ನು ನಾವು 'ಅವಕಾಶವಾದಿ' ಎನ್ನಲಡ್ಡಿಯಿಲ್ಲ. ತನ್ನ ಸಂಸ್ಥೆಯ ಬೆಳವಣಿಗೆಗೆ ಅನುವಾಗಬಲ್ಲದ್ದನ್ನೆಲ್ಲ ವೀರಣ್ಣ ಅಪ್ಪಿಕೊಂಡು ಬಿಡುತ್ತಿದ್ದರು.

ಮಹಾರಾಜರ ಊರು-ಮೈಸೂರಲ್ಲಿ ನಾಟಕವಾಡಬೇಕೆಂಬುದು ಕಂಪನಿಯ ಎಲ್ಲರಲ್ಲೂ ಇದ್ದ ಬಹುದಿನದ ಹಂಬಲ. ಗುಬ್ಬಿಯಂಥ ಹಳ್ಳಿಯ ನಾಟಕ ಸಂಸ್ಥೆ ಅಲ್ಲಿ ಹೋಗಿ ಡೇರೆ ಹಾಕುವುದೆಂದರೆ? ಟೆಂಟಾಯಿತು. ಪ್ರಚಾರವಾಯಿತು. ಗ್ಯಾಸ್ ಲೈಟು ಉರಿಯಿತು. 'ಸದಾರಮೆ'ಯ ಕಳ್ಳ ಮನಸ್ಸು ಹುಳ್ಳಗೆ ಮಾಡಿಕೊಂಡು ಬಹುಪಾಲು ಖಾಲಿ ಥೇಟರಿಗೆ ಮಾತುಗಳನ್ನೊಪ್ಪಿಸಬೇಕಾಯಿತು. ದೊಡ್ಡ ಮನುಷ್ಯರಿಗೆ ಡೇರೆ ನಾಟಕ ನೋಡುವುವೆಂದರೆ ತಮ್ಮ ಗೌರವಕ್ಕೆ ಕುಂದು ಎಂಬ ಭಾವನೆ. ಬಂದವರಾದರೂ ಯಾರು? ಕಾರ್ಯನಿಮಿತ್ತ ಮೈಸೂರಿಗೆ ಬಂದು ರಾತ್ರಿ ಕಳೆಯಲು ಜಾಗ ಸಿಕ್ಕದವರು ಮತ್ತು ಇವರು ಆಡುವುದಾದರೂ





ಏನು ಎಂಬ ಕುತೂಹಲ ಮಾತ್ರದಿಂದ ಟಿಕೀಟು ಕೊಂಡವರು. ಆದಾಯವೋ ಮೂರಂಕಿಯನ್ನೂ ಮುಟ್ಟಲಿಲ್ಲ.

ಆದರೆ 'ಸದಾರಮೆ' ಸೋಲಲಿಲ್ಲ. ಮೊದಲಿನಿಂದಲೂ ಕಳ್ಳ, ವೈಶ್ಯ ಆದಿಮೂರ್ತಿ ಮತ್ತು ಜವಾನ ಸಾಬಿಯ ತ್ರಿಪಾತ್ರಗಳನ್ನು ಭಿನ್ನಶೈಲಿ ಭಿನ್ನ ಹಾಸ್ಯೋಕ್ತಿಗಳಿಂದ ಅಭಿನಯಿಸುತ್ತಿದ್ದರು ವೀರಣ್ಣ. ಕರ್ಣೋಪಕರ್ಣವಾಗಿ ಊರಲ್ಲಿ ಹಬ್ಬಿತು ಸುದ್ದಿ. ಶೇಷಾಸಾನಿಯ ಸದಾರಮೆ, ತಿಮ್ಮೋಟಯ್ಯನ ಕಲಹಂಸ ಪಾತ್ರಗಳನ್ನೂ ಜನ ಮರೆಯಲಿಲ್ಲ. ಮೈಸೂರಿಗಿದೇ 'ಕಳ್ಳ' ಮನೆಮಾತಾದ. ಹಳ್ಳಿಯ ಡೇರೆಗೆ ನೂಕುನುಗ್ಗಲಾಯಿತು. 'ಗೌರವಕ್ಕೆ ಕುಂದು ತಂದುಕೊಳ್ಳಲಿಚ್ಛಿಸದವರು' ಕೂಡ ಮುಖ ಮುಚ್ಚಿಕೊಂಡು ಕಳ್ಳಹೆಜ್ಜೆಯಿಟ್ಟು ಬಂದು ನೋಡಿ, ಅದುಮಿಕೊಂಡಿದ್ದ ನಗುವನ್ನು ಏಕಾಂತದಲ್ಲಿ ಹೋಗಿ ಹೊರಹೊಮ್ಮಿಸುತ್ತಿದ್ದರೆಂಬುದು ಅತಿಶಯೋಕ್ತಿಯಲ್ಲ. ಅರಮನೆ ಕಂಪನಿಯವರೂ (ಚಾಮರಾಜೇಂದ್ರ ನಾಟಕ ಸಭಾ) ನಾಟಕವನ್ನು ಮೆಚ್ಚಿದರು. ಆ

ಕಂಪನಿಯ ಮೇಲ್ವಿಚಾರಣೆ ಮಾಡುತ್ತಿದ್ದ ಸರ್ದಾರ್ ಗೋಪಾಲರಾಜೆ ಅರಸ್ ಅವರೂ ವೀರಣ್ಣನವರ ನಟನಾ ಕೌಶಲವನ್ನು ಪ್ರಶಂಸಿಸಿದರು. "ಅರಮನೆ ಕಂಪನಿಗೆ ಬಂದು ಸೇರಿಕೊಳ್ಳಿ"ರೆಂಬ ಆಹ್ವಾನವನ್ನು ವೀರಣ್ಣನವರು ನಯವಾಗಿ ತಿರಸ್ಕರಿಸಿದರು. ಪಾದರಸವನ್ನು ಕಟ್ಟಿಹಾಕಲು ಯಾರಿಂದ ಸಾಧ್ಯ?

ಅರಮನೆಯಲ್ಲಿ 'ಸದಾರಮೆ' ಆಡಿಸಬೇಕೆಂಬುದು ಗೋಪಾಲರಾಜೆ ಅರಸರ ಇಚ್ಛೆ. ಆದರೆ "ಹೆಂಗಸರು ಪಾತ್ರ ಮಾಡುತ್ತಿದ್ದಾರೆ ಸ್ವಾಮೀ-ಆ ನಾಟಕವನ್ನು ಇಲ್ಲಿ ಆಡಿಸುವುದೇ?" ಎಂದು ಕುಹಕಿಗಳು ಅಡ್ಡ ಹಾಕಿದರು.

ಮೈಸೂರಿನ ಗಣ್ಯರಲ್ಲೊಬ್ಬರಾಗಿದ್ದ ಕ್ರೌನ್ ಪ್ರೆಸ್ಸಿನ ಮಾದಪ್ಪನವರು ಈ ನಟೋತ್ತಮನನ್ನು ಸನ್ಮಾನಿಸಲು ಯೋಚಿಸಿದರು. ಇತರ ಪುರಪ್ರಮುಖರನ್ನೂ ಅರಮನೆಯ ಅಧಿಕಾರಿ ಶ್ರೇಷ್ಠರನ್ನೂ ಆಮಂತ್ರಿಸಿದರು. ರಂಗಾಚಾರ್ಯ ಮೆಮೋರಿಯಲ್ ಟೌನ್‌ಹಾಲ್‌ನಲ್ಲಿ ದೊಡ್ಡ ಸಮಾರಂಭ. ಒಬ್ಬರ ಮೇಲೊಬ್ಬರು ನಿಂತು 'ಸದಾರಮೆ' ನೋಡಿದರು ಜನ. ನಂತರ ಗೋಪಾಲರಾಜೆ ಅರಸರ ಹಸ್ತದಿಂದ ಈ 'ರಸಿಕ ಮನಚೋರ'ನಿಗೆ ಜಗದೀಶ್ವರನ ಸ್ವರ್ಣವಿಗ್ರಹಸಹಿತವಾದ ಮೂರು ತೊಲದ ಗೋಲ್ಡ್ ಮೆಡಲನ್ನು ಕೊಡಿಸಿ ಧನ್ಯಭಾವ ಹೊಂದಿದರು ಮಾದಪ್ಪ. ಮೈಸೂರಿನ ವರ್ತಕ ವೃಂದವೂ ಚಿನ್ನದ ಪದಕವೊಂದನ್ನಿತ್ತು ಗೌರವಿಸಿತು.

ಅದುವರೆಗೂ 'ಯಾರಿಗೇ ಬಹುಮಾನ ಬಂದರೂ ಅದು ಕಂಪನಿಯ ಸ್ವತ್ತು' ಎಂದಿದ್ದ ಅಲಿಖಿತ ನಿಯಮ ಅಳಿದುಹೋಯಿತು. ಚಂದಣ್ಣ ತುಂಬ






ಸಂತುಷ್ಟರಾಗಿದ್ದರು. ವೀರಣ್ಣನವರ ತಲಬು (ಸಂಬಳ) 'ಮಾಹೆಯಾನ ಇಪ್ಪತ್ತೆರಡು ರೂಪಾಯಿ ಎಂಟು ಆಣೆ'ಗೇರಿತು.

"ನಾಟಕದವರೆಂದರೆ ಚಟಗಳ ದಾಸರು, ದಾರಿ ಬಿಟ್ಟವರು, ಶೀಲಗೆಟ್ಟವರು" ಎಂಬುದು ಇಂದಿಗೂ ಕೆಲವರಲ್ಲಿರುವ ಭಾವನೆ. ಆ ಕಾಲದಲ್ಲಂತೂ ಅದೊಂದು 'ಅಸ್ಪೃಶ್ಯ ಕುಲ' ವೆ. ಕೆಲ ಮದಿರಾಸಕ್ತರು, ಭಂಗಿ ಭಕ್ತರು ಮಾಡುತ್ತಿದ್ದ ಅಧ್ವಾನಗಳೇ ಈ ಭಾವನೆಗೆ ಕಾರಣ. ಒಂದು ಕ್ಯಾಂಪಿನಲ್ಲಿ ಹೆಸರು ಗಳಿಸಿದ ನಟ ಮತ್ತೊಂದರಲ್ಲಿ ಗರ್ವಗಿರಿಯೇರಿ, ಕಂಠ ಮಟ್ಟ ಕುಡಿದೇ ರಂಗಪ್ರವೇಶ ಮಾಡಿ ಹಾರಾಡಿ-ತೂರಾಡಿ ಕಂಪನಿಯ ಹೆಸರನ್ನು ಹದಗೆಡಿಸಿದ ಪ್ರಸಂಗಗಳನ್ನು ಕಂಡರು ವೀರಣ್ಣ.

ನಟರು ಪಾನಮತ್ತರಾಗಿ ಈ ರೀತಿ ಮಾಡಿದರೆ, ಮಾಲಿಕರು ಧನಮದ

ದಿಂದ ದುಂಡಾವರ್ತನೆಗಿಳಿಯತೊಡಗಿದರು. ಚಂದಣ್ಣನವರಿಗೆ ವಯಸ್ಸಾದಂತೆಲ್ಲ ಸ್ವಾರ್ಥಸಾಧನೆ ಮುಖ್ಯವಾಗತೊಡಗಿತು. ಅವರೊಂದಿಗೆ ಅವರಣ್ಣ ಜೈಕುಮಾರಪ್ಪನೂ ಸೇರಿದಾಗ ಸ್ಥಿತಿ ಹೇಗಿರಬೇಡ? ನಟ-ನಟಿಯರ ಊಟೋಪಚಾರ, ಸಂಬಳ-ಸಾರಿಗೆಯ ಅವ್ಯವಸ್ಥೆ; ಅಕಾರಣ ಬಡಿತ ಬೈಗುಳ; ಲೆಕ್ಕಾಚಾರದಲ್ಲಿ ಮೋಸ..... ಎಡಗೈಯಲ್ಲಿ ಜೀವ ಹಿಡಿದುಕೊಂಡೇ ಬದುಕಬೇಕು. ವೀರಣ್ಣ ಒಳಗೊಳಗೇ ಕೊರಗಿದರು. ಚಿಕ್ಕಮಗಳೂರಿನ ಕ್ಯಾಂಪಿನಲ್ಲಿ ಜೈಕುಮಾರಪ್ಪ ಡ್ರೆಸ್ ಉಸ್ತುವಾರಿಯ ಹುಡುಗನೊಬ್ಬನನ್ನು ಕಂಬಕ್ಕೆ ಕಟ್ಟಿ ಹೊಡೆದ ರೀತಿಯನ್ನು ನೋಡಿ ತಮಗೂ ಆ ಗತಿ ತಪ್ಪಿದ್ದಲ್ಲವೆಂದೆಣಿಸಿದ ಕೆಲವರು ಹೇಳದೇ ಕೇಳದೆ ಓಡಿಹೋದರು. ಇನ್ನು ಕೆಲವರು ತಮ್ಮ ಸಂಬಳ ಚುಕ್ತಾ ಮಾಡಿಬಿಡಲು ಒತ್ತಾಯಿಸಿ ಗಂಟುಮೂಟೆ ಕಟ್ಟಿದರು. ಆ 'ಹಿರಣ್ಯಾಕ್ಷ-ಹಿರಣ್ಯಕಶ್ಯಪ' (ಕಂಪೆನಿಯ ಜನ ಇಟ್ಟ ಹೆಸರು)ರು ಅನಿವಾರ್ಯವಾಗಿ ಕಂಪನಿ ಮುಚ್ಚಿ ಗುಡಚಾಪೆ ಕಿತ್ತಿ ಗುಬ್ಬಿಗೆ ನಡೆದರು. ಪಾಪ, ಬಡ 'ಪ್ರಹ್ಲಾದ' ಏನು ಮಾಡಿಯಾನು? ತಾಪದಲ್ಲೇ ತಪವನ್ನು ಮುಂದುವರಿಸಿದರು ವೀರಣ್ಣ.

ಮಾಲಿಕರಿಗೆ ತಪ್ಪಿನ ಅರಿವಾಯಿತೊ ಇಲ್ಲವೊ ತಿಳಿಯದು. ಆದರೆ ಹೊಸ ನಟವರ್ಗದವರನ್ನು ಸೇರಿಸಿ ಮಡಿಕೇರಿಗೆ ಕ್ಯಾಂಪು ಹೊರಡಿಸಿದರು. ಮಳೆಗಾಲದ ರಜೆಗೆಂದು ವೀರಣ್ಣ ತಾಯಿ ಮತ್ತು ಮಡದಿಯ ಬಳಿ (ಗುಳುಗಂಜಿಹಳ್ಳಿ) ಬಂದರೆ ಪೆಟ್ಟಿನ ಮೇಲಿನ್ನೊಂದು ಪೆಟ್ಟು. ಬಸುರಿ ಗಂಗಮ್ಮ ಗಂಡು ಮಗು ಹೆತ್ತು 'ಬಾಣಂತಿ ಸನ್ನಿ'ಯಾಗಿ ಹತ್ತು ದಿನಕ್ಕೆ ಕಣ್ಣು ಮುಚ್ಚಿದರು. ಕೆಲ ದಿನಗಳಲ್ಲೇ ವೀರಣ್ಣನವರಿಗೆ 'ನಾಲ್ವರ ಜ್ವರ' ನಾಲ್ಕು ತಿಂಗಳು ಕಾಡಿತು.

ತಾಯಿಯಿಲ್ಲದ ಹಸುಗೂಸನ್ನು ಅಕ್ಕನ ಕೈಗೊಪ್ಪಿಸಿದ ವೀರಣ್ಣ ಬಂದಿಳಿದದ್ದು ಬೆಂಗಳೂರಲ್ಲಿ. ಈ ಹಿಂದೆ ಸಹನಟನಾಗಿದ್ದ ರಾಣಿ ಪಾರ್ಟ್ ತುಮಕೂರು ಸೀತಪ್ಪ ಅಲ್ಲಿ ಹೊಸ ಕಂಪನಿ ಕಟ್ಟಿ ಕ್ಯಾಂಪು ಮಾಡಿದ್ದ ಸುದ್ದಿ ಗೊತ್ತಿತ್ತು. ವೀರಣ್ಣನಂಥ ಆಲ್‌ರೌಂಡರ್‌ಗೆ ಅಲ್ಲಿ ಸಿಕ್ಕದ್ದು ಹಾರ್ದಿಕ ಸ್ವಾಗತ. 'ಲಂಕಾ ದಹನ' ನಾಟಕದಲ್ಲಿ ವೀರಣ್ಣನವರ ನಕಲಿ ಪಾರ್ಟು. ಹಾಡು-ಹಾಸ್ಯಗಳಿಗೆ 'ಒನ್ಸ್ ಮೋರ್' ಗಳು. ಬೆಂಗಳೂರಲ್ಲಿ ಮೊದಲ ಸಲ ಅಭಿನಯಿಸಿದರು ವೀರಣ್ಣ. "ತಿಂಗಳಿಗೈವತ್ತು ರೂಪಾಯಿ ತಲುಬು ಕೊಡುತ್ತೇನೆ, ಇದ್ದುಬಿಡಿ" ಎಂದರು ಸೀತಪ್ಪ.

ವೀರಣ್ಣ 'ಸೀತಾಮನೋಹರ ನಾಟಕ ಮಂಡಳಿ' ಯಲ್ಲಿದ್ದಾರೆಂಬ ಸುದ್ದಿ ಕೇಳಿ ಓಡಿಬಂದರು ಚಂದಣ್ಣ. "ನಮ್ಮ ಆಸ್ತಿ ಈತ, ಮರಳಿ ಕಳಿಸೀಪ್ಪಾ" ಎಂದು ಸೀತಪ್ಪನವರ ಕೈಕಾಲು ಕಟ್ಟಿಕೊಂಡರು. ವೀರಣ್ಣನೊಂದಿಗೆ ದೊಡ್ಡಬಳ್ಳಾಪುರದ ಬಸ್ಸು ಹತ್ತಿದರು. ಬೆಳೆದ ಮನೆಯನ್ನು-ಬೆಳೆಸಿದ ಹಿರಿಯರನ್ನೂ ಮರೆಯಲಾದೀತೆ?

೧೯೧೫. ತೀರ್ಥಹಳ್ಳಿಯಲ್ಲಿ ಎಳ್ಳಮವಾಸ್ಯೆ ಜಾತ್ರೆ. ವರದಾಚಾರ್ಯರ 'ರತ್ನಾವಳಿ ಥಿಯೇಟ್ರಿಕಲ್ ಕಂಪನಿ' ಯೂ ಅಲ್ಲಿಗೆ ಬಂದಿತ್ತು. ವಾಮನರಾವ್ ಮಾಸ್ತರರ 'ವಿಶ್ವಗುಣಾದರ್ಶ ನಾಟಕ ಮಂಡಳಿ' ಯೂ ಡೇರೆ ಹಾಕಿತು. ರತ್ನಾವಳಿ, ನಿರುಪಮ, ಶಾಕುಂತಲ ಮುಂತಾದ ವರದಾಚಾರ್ಯರ ನಾಟಕಗಳ ಮುಂದೆ ಗುಬ್ಬಿ

ಕಂಪನಿಯ ಭೋಜಪ್ರಬಂಧ, ಪಾಂಡವ ವಿಜಯಗಳು ಆರ್ಥಿಕವಾಗಿ ಸೋತವು.

ವರದಾಚಾರ್ಯರ ಬಗ್ಗೆ ಗೌರವಭಾವವಿದ್ದ ವೀರಣ್ಣನವರು ಮಾಲಿಕರಿಗೆ ಹೇಳಿ 'ರತ್ನಾವಳಿ, ಕಂಪನಿಯ ಕಲಾವಿಧರನ್ನೆಲ್ಲ 'ಸುಭದ್ರಾ ಪರಿಣಯ' ನಾಟಕಕ್ಕೆ ಆಹ್ವಾನಿಸಿದರು. ವರದಾಚಾರ್ಯರೂ ಸೇರಿದಂತೆ ಎಲ್ಲರಿಗೂ ಯಥೋಚಿತ ಉಪಚಾರಾನಂತರ ಮೊದಲ ಸಾಲಿನಲ್ಲಿ ಕುಳ್ಳಿರಿಸಿ ನಾಟಕ ಪ್ರಾರಂಭಿಸಿದರು. ಅರ್ಧ ಗಂಟೆಯ ನಂತರ ಅಲ್ಲಿಯ ಗಣ್ಯ ವರ್ತಕ ಲೆಬ್ಬೆ ಸಾಹೇಬರು ತಮ್ಮ ಹನ್ನೊಂದು ಜನ ಗೆಳೆಯರೊಂದಿಗೆ ಬಂದರು. "ನಾಟಕವನ್ನು ಮತ್ತೆ ಪ್ರಾರಂಭಿಸುವುದಾದರೆ ನಾವು ಒಂದೊಂದು ರೂಪಾಯಿ ಟಿಕೀಟು ಕೊಳ್ಳುತ್ತೇವೆ" ಎಂದ ಅವರ ಮಾತು ಚಂದಣ್ಣನವರ ಪಾಲಿಗೆ ಲಾಟರಿ ಹತ್ತಿದಂತೆ. ಯಾರೆಷ್ಟೇ ಬೇಡವೆಂದರೂ ಕೇಳಲಿಲ್ಲ. ವರದಾಚಾರ್ಯರಿಗಿಂತ ಮುಂದೆ ಸ್ಪೆಶಲ್ ಕುರ್ಚಿ ಸಾಲುಗಳಲ್ಲಿ ಹನ್ನೆರಡು ಜನ 'ಬುದ್ಧಿ' ವಂತರು. ವರದಾಚಾರ್ಯರು ಕೂಡಲೇ ತಮ್ಮವರೊಂದಿಗೆ ಹೊರನಡೆದುಬಿಟ್ಟರು.

ಸ್ವಂತ ಗೌರವ-ಮಂದಿಯ ಮರ್ಯಾದೆ ಎರಡೂ ಅರಿಯದ ಮಾಲಿಕರೊಂದಿಗೆ ಏಗುತ್ತಲೇ ಸಾಗಿತು ಕಂಪನಿ. ಕೆಲ ನಟರು ಸ್ವಂತ ಕಂಪನಿ ಮಾಡುವ ಯೋಚನೆಯಿಂದ ಹೊರ ಬಿದ್ದರು.

ಚಂದಣ್ಣನವರ ಆಟಾಟೋಪ ಸಹಿಸಲು ಅಸಾಧ್ಯವಾಯಿತು. ವಿನಾಕಾರಣ ಸಂಶಯ, ಸಕಾರಣವಿಲ್ಲದೆ ಶಿಕ್ಷೆ ನಿತ್ಯದ ಮಾತಾದರೆ ಯಾರು ತಾನೆ ಸುಮ್ಮನಿದ್ದಾರು? ಅಷ್ಟೆಲ್ಲ ಹಚ್ಚಿಕೊಂಡು ದುಡಿಯುತ್ತಿದ್ದ ವೀರಣ್ಣನವರೂ ಮಾಲಿಕರ



'ಬಾಯ್‌ಪ್ರಸಾದ'ದ ಕಹಿ ಅನುಭವಿಸಿದರು. ದಾವಣಗೆರೆ ಕ್ಯಾಂಪಿನಲ್ಲಿ ಚಂದಣ್ಣ ಅಸ್ವಾಸ್ಥ. ಕಾಣಿಸಿಕೊಂಡು ಗುಬ್ಬಿಗೆ ನಡೆದರು. ಜೈಕುಮಾರಪ್ಪನ ಮಗ ನಾಗರಾಜಪ್ಪ ಸದ್ಯ ಕಂಪನಿಯ ಮೇಲ್ವಿಚಾರಕ. ನಿತ್ಯ ಸುಳ್ಳು ಸುದ್ದಿಗಳನ್ನು ಗುಬ್ಬಿಗೆ ಕಳಿಸುವುದೇ ನಾಗರಾಜಪ್ಪನ ಕೆಲಸ. ಮಾಲಿಕರ ಕುಟುಂಬ ಪೋಷಣೆಯ ಏಕಮೇವ ಆಧಾರ ಈ ಕಂಪನಿ, ವೀರಣ್ಣನ ಕುರಿತು ನಾಗರಾಜ ವಿಷಕಾರಿದ್ದರ ಪರಿಣಾಮ 'ಕೂಡಲೆ ಗುಬ್ಬಿಗೆ ಬಾ' ಎಂದು ಮಾಲಿಕರಿಂದ ತಂತಿ ಸಂದೇಶ. ಹೋಗಿ ಮಾತನಾಡಿದ ವೀರಣ್ಣ ಮರಳುವ ಮುನ್ನವೆ ಚಂದಣ್ಣ ಕಣ್ಮುಚ್ಚಿದರು.

ಗುಬ್ಬಿ ಕಂಪನಿಯ ಋಣ ತೀರಿತೆಂದುಕೊಂಡು ದಾವಣಗೆರೆಯ ಹಿರಿಯ ವರ್ತಕರ ಸಮಕ್ಷಮ ಆಡಳಿತ-ಆಸ್ತಿಗಳನ್ನು ಪದ್ಮರಾಜಯ್ಯ (ಚಂದಣ್ಣನವರ ಮಗ)ನಿಗೆ ಒಪ್ಪಿಸಿ ಮುಕ್ತರಾಗಬೇಕೆಂದುಕೊಂಡರು ವೀರಣ್ಣ. ಆದರೆ ವರ್ತಕಗಣ ಸಮ್ಮತಿಸಲಿಲ್ಲ. "ವೀರಣ್ಣನವರೆ, ನೀವು ಬಿಟ್ಟು ಹೋದರೆ ಮೂವತ್ತು ವರ್ಷ ನಡೆದುಕೊಂಡು ಬಂದ ಕಂಪನಿ

ಮುಚ್ಚಿದಂತೆಯೆ. ಅದನ್ನು ನಾವು ನೋಡಲಾರೆವು. ಏನೇ ಆಗಲಿ, ಬಾಲ್ಯದಿಂದಲೂ ಇದರೊಂದಿಗೆ ಬೆಳೆದು ಬಂದವರು ನೀವು ಉಳಿಸಿ-ಬೆಳೆಸಬೇಕಾದವರೂ ನೀವೇ. ಇದರ ಹೊಣೆಯನ್ನು ನೀವು ಮಾತ್ರವೆ ಹೊತ್ತುಕೊಳ್ಳಲು ಸಾಧ್ಯ. ಒಪ್ಪಿಕೊಳ್ಳಿ'' ಪಂಚದೈವತದ ಆಣತಿಗೆ ತಲೆ ಬಾಗಲೇಬೇಕಾಯಿತು. ಸಾಗರಾಜಪ್ಪನೊಂದಿಗೆ ವೀರಣ್ಣನವರೂ ಕಂಪನಿಯ 'ಮಾಲಿಕ'ರಾದರು.

'ಸವಾಲುಗಳು ಹಲವಾರು ಸಮಸ್ಯೆಗಳು ಹತ್ತಾರು. ಅವಕ್ಕೆಲ್ಲ ಪರಿಹಾರ ಸಿಕ್ಕಬೇಕು. ಎಡೆಬಿಡದೆ ನಾಟಕಗಳು ನಡೀಬೇಕು. ಸರ್ವಸಿದ್ಧವಾಗಿ-ಸೂತ್ರಬದ್ಧವಾಗಿ. ಪ್ರಯೋಗಗಳಲ್ಲಾಗಲಿ ಸೌಕರ್ಯಗಳಲ್ಲಾಗಲಿ ಯಾವುದೇ ಕೊರತೆ ಇರಕೂಡದು. ನಾಟಕಕ್ಕೆ ನಟವೃಂದ ಮುಖ್ಯ. ಅವರು ಸದೃಢವಾಗಿದ್ದರೆ ಕಂಪನಿ ದೃಢ ಹೆಜ್ಜೆ ಇಡುತ್ತದೆ' ಎಂದು ನಂಬಿಕೊಂಡಿದ್ದವರು ವೀರಣ್ಣ.

೧೯೧೭ರ ಆಗಸ್ಟ್ ತಿಂಗಳಿಂದ ಕಂಪನಿಗೆ ದೆಶೆ ತಿರುಗಿತು. ಆದಾಗಲೇ ರಂಗಭೂಮಿಯ ಎಲ್ಲ ಅಂಗಗಳಲ್ಲೂ ಕೆಲಸ ಮಾಡಿ ಪಡೆದ ಅನುಭವದ ಲಾಭದಿಂದ ವೀರಣ್ಣ ಪುನರ್ನಿರ್ಮಾಣದ ಕಾರ್ಯಕ್ಕೆ ತೊಡಗಿದರು. ಮೊದಲು ಹಾವೇರಿ ಕ್ಯಾಂಪು. ವರ್ಷದ ಕೊನೆಗೆ ದಾವಣಗೆರೆಯಲ್ಲಿ ವೀರಶೈವ ಮಹಾಸಭೆ. ಅದನ್ನು ದೃಷ್ಟಿಯಲ್ಲಿಟ್ಟುಕೊಂಡು ಯೋಜನೆಗಳನ್ನು ರೂಪಿಸಿಕೊಂಡರು. ಮತ್ತೆ ದಾವಣಗೆರೆಗೆ ಬಂದ ಕಂಪನಿ 'ಪ್ರಭಾಮಣಿ ವಿಜಯ' ವೆಂಬ ಅಂದಿನ ರಂಗಭೂಮಿಯಲ್ಲೇ ನವೀನವೆನ್ನಬಹುದಾದ ನಾಟಕ ನಿರ್ಮಿತಿಗೆ ತಯಾರಿ ನಡೆಸಿತು. ಅದರಲ್ಲಿ ಹುಚ್ಚ 'ವಿರೋಚನನ' ಪಾತ್ರ ಅವರದು. ನಟ ವೀರಣ್ಣ

## ಬೆಳಕಿಂಡಿ

★ ಒಂಟಿತನದಿಂದ ತಪ್ಪಿಸಿಕೊಳ್ಳಲು ಗಂಡಸು ಮದುವೆಯಾಗುವನು. ಆಮೇಲೆ ಹೆಂಗಸಿನಿಂದ ತಪ್ಪಿಸಿಕೊಳ್ಳಲು ಕೂಡಲೇ ಕ್ಲಬ್ಬು ಸೇರುವನು.

**– ಹೆಲೆನ್ ರೌಲ್ಯಾಂಡ್**

★ ಚಿನ್ನದ ಪರೀಕ್ಷೆಗಾಗಿ ಜನರಲ್ಲಿ ಒರೆಗಲ್ಲಿದೆ. ಆದರೆ ಚಿನ್ನವೇ ಜನರನ್ನು ಪರೀಕ್ಷಿಸುವ ಒರೆಗಲ್ಲು.

**– ಥಾಮಸ್ ಫುಲ್ಲರ್**

★ ಜೀವನದ ಮೊದಲರ್ಧದಲ್ಲಿ ಅವಕಾಶವಿಲ್ಲವಾದರೂ ಸುಖಾನುಭವಕ್ಕೆ ತಾಕತ್ತಿರುವುದು. ಎರಡನೆಯರ್ಧದಲ್ಲಿ ಅವಕಾಶವಿದ್ದರೂ ತಾಕತ್ತಿರುವುದಿಲ್ಲ.

**– ಮಾರ್ಕ್ ಟ್ವೆಯ್ನ್**

★ ಪೆದ್ದರು ಖಡಾಖಂಡಿತವಾಗೂ, ಬುದ್ಧಿವಂತರು ತುಂಬ ಶಂಕೆಯುಳ್ಳವರೂ ಆಗಿರುವುದೇ ಈ ಪ್ರಪಂಚದಲ್ಲಿನ ತೊಂದರೆ.

**– ಬರ್ಟ್ರಾಂಡ್ ರಸೆಲ್**

★ ಹೊಸ ಮನೆಯಲ್ಲಿ ಮೊದಲ ವರ್ಷ ನಿನ್ನ ಶತ್ರುವಿರಲಿ, ಎರಡನೇ ವರ್ಷ ನಿನ್ನ ಗೆಳೆಯನಿರಲಿ, ಮೂರನೇ ವರ್ಷ ನೀನೇ ಇರು.

**– ಡಚ್ ಗಾದೆ**

★ ಆದರಣೆ ಇಲ್ಲದ ಊಟ ಅಮೃತಾನ್ನವಾದರೇನು? ಅಕ್ಕರೆ ಇಲ್ಲದವರಿಗೆ ಮಕ್ಕಳಾಗಿ ಫಲವೇನು?

**– ಪುರಂದರದಾಸರು**

ನವರ 'ಪ್ರತಿಭೆ' ವ್ಯವಹಾರ ಕುಶಲ ವೀರಣ್ಣನವರ 'ಕರ್ತೃತ್ವ ಶಕ್ತಿ'ಗಳು ಕಂಪನಿಗೆ ಉಚ್ಛ್ರಾಯದ ಹಾದಿ ತೋರಿದವು. ದಾವಣಗೆರೆಯ ಕಲಾರಸಿಕರಂತೂ ಸಂತಸವನ್ನು 'ಮೂರು ತೊಲ ಚಿನ್ನದ ಪದಕ'ದ ರೂಪದಲ್ಲಿ ವ್ಯಕ್ತಪಡಿಸಿದರು.

ಯಾವಾಗ, ಯಾವ ಸ್ಥಳದಲ್ಲಿ, ಯಾವ ನಾಟಕಗಳನ್ನಾಡಿದರೆ ಲಾಭವಾದೀತೆಂಬುದು ಮಾಲಿಕ ವೀರಣ್ಣನವರಿಗೆ ಚೆನ್ನಾಗಿ ಗೊತ್ತು. ಆಯಾ ಸ್ಥಳದ ಹವಾಮಾನ, ಆಹಾರ ಸೌಲಭ್ಯ, ರಸಿಕರ ಮನೋಗತಗಳೇನೆಂಬುದನ್ನೂ ಅರಿತವರವರು. ಮಂಗಳೂರು-ತೀರ್ಥಹಳ್ಳಿಗೆಂದು ಕ್ಯಾಂಪು ಕಿತ್ತುವ ಮುನ್ನ ಅಲ್ಲಿಯ ಚಳಿಯನ್ನು ತಡೆದುಕೊಳ್ಳಲು ಕಂಪನಿಯ ಎಲ್ಲರಿಗೂ ಒಂದೊಂದು ಕಂಬಳಿಯ ಕಾಣಿಕೆ. ನಟರು ಚಳಿಯಲ್ಲಿ ಬೆಚ್ಚಗಿರಬೇಕು- ಬಿಸಿಯಲ್ಲಿ ತಣ್ಣಗಿರಬೇಕು. ಅಂದರೆ ಮಾತ್ರ ನಾಟಕ ಯಾತ್ರೆ ಸುಗಮವಾದೀತು. ಕೆಲಸ ಮಾಡುವವ ಕೊರಗಿದರೆ ಕಂಪನಿ ಸೊರಗುತ್ತದೆ. ಇದು ವೀರಣ್ಣನವರ ನಂಬಿಕೆ. ಅವರು ಯಾರನ್ನೂ ಕೊರಗಲು ಬಿಡಲಿಲ್ಲ. ಕುಡಿತದ ಮೊದಲಾದ ದುರ್ವ್ಯಸನಗಳಿಗೆ ತಾವಾಗಿ, ಕಂಪನಿಯ ಹೆಸರನ್ನೂ ಹಾಳು ಮಾಡುತ್ತಿದ್ದವರಿಗೂ ವೀರಣ್ಣ 'ತಾಕೀತು' ಮಾಡಿದರು. ಚತುರೋಪಾಯಗಳ ಉಪಯೋಗ ಅವರ ನೆರವಿಗೆ ಬಂತು.

ನಿಯಮಗಳನ್ನು ರೂಪಿಸುವುದರಷ್ಟು ಸುಲಭವಲ್ಲ ಅವುಗಳನ್ನು ಅನುಷ್ಠಾನಕ್ಕೆ ತರುವುದು. ನಿಯಮಗಳು 'ಯಮ'ನಾಗಿ ಕಾಣಿಸಬಾರದು ಕೆಲಸ ಮಾಡುವವನಿಗೆ; ನೀತಿ ಪಾಠದಂತೆ ಅನಿಸಬೇಕು. ನಿತ್ಯ ದಿನಚರಿಯಲ್ಲಿ ಅವುಗ



ಳನ್ನು ನಿಷ್ಠೆಯಿಂದ ಪಾಲಿಸಲಾಗಿಸಿಕೊಳ್ಳುವಂತಿರಬೇಕು. ಮೂಲ ಅವಶ್ಯಕತೆಗಳು ಪೂರೈಸುವಂತಿದ್ದರೆ ಯಾರು ತಾನೆ ನಿಯಮೋಲ್ಲಂಘನೆಗೆ ಮನಸ್ಸು ಮಾಡಿಯಾರು? ಪ್ರತಿ ದಿನ ಬಿಸಿ ನೀರ ಸ್ನಾನ, ಬಿಸಿ ಬಿಸಿಯಾದ ಊಟ, ಹಿತವಾದ ನಿದ್ರೆಗಳನ್ನೊದಗಿಸಿ ಕಂಪನಿಯಲ್ಲಿ ಈವರೆಗೆ ನಡೆಯುತ್ತಿದ್ದ ಅಹಿತಕರ ಘಟನೆಗಳಿಗೆ ವಿದಾಯ ಹೇಳಿದರು ವೀರಣ್ಣ. ಸಂಬಳವನ್ನು ಹೆಚ್ಚಿಸಿ ನಿಶ್ಚಿತ ದಿನದಂದೇ ಅದು ವಿಲೇವಾರಿಯಾಗುವಂಥ ಏರ್ಪಾಡನ್ನೂ ಮಾಡಿದರು. ಗಲ್ಲೆ ತುಂಬಲಿಲ್ಲವೆಂಬ ಕುಂಟು ನೆವವನ್ನೆಂದೂ ಹೇಳಲಿಲ್ಲ. ತಮ್ಮಲ್ಲಿರುವ ಒಡವೆಗಳನ್ನು ಮಾರಬೇಕು, ಇಲ್ಲ ಒತ್ತೆಯಿಡಬೇಕು. ಬಂದ ಹಣವನ್ನು ಸಂಬಳಕ್ಕೆ, ಊಟದ ಖರ್ಚಿಗೆ ಬಳಸಬೇಕು.

ಈ ಎಲ್ಲವೂ ಸುದ್ದಿಯಾದವು. ದೂರದವರೆಗೂ ಹಬ್ಬಿದವು. ಬೇರೆಡೆಯಿಂದ ಕಲಾವಿದರನೇಕರು ಗುಬ್ಬಿ ಕಂಪನಿಗೆ ಬರತೊಡಗಿದರು. ಒಳ್ಳೆಯ ನಟ-ನಟಿಯರನ್ನು ವೀರಣ್ಣ ಹುಡುಕಿಕೊಂಡು ಹೋಗಿ ಕರೆದು ತಂದ ಉದಾಹರಣೆಗಳೂ ಸಾಕಷ್ಟಿವೆ.

ಮಾಲೀಕ ಚಂದಣ್ಣ ಇನ್ನೂ ಬದುಕಿದ್ದಾಗ, ಶಿರಾ ಕ್ಯಾಂಪಿನಲ್ಲಿ ಸುಂದರಮ್ಮ ಎಂಬ ಹೆಸರಿಗೆ ತಕ್ಕ ಹುಡುಗಿಯನ್ನು ಕೊಂಡುಕೊಂಡು ಅವಳನ್ನು ಮಗಳಂತೆ ಬೆಳೆಸಿದ್ದರು. ಈಗಾಕೆ ಪ್ರಬುದ್ಧ ಕಲಾವಿದೆಯಾಗಿದ್ದಳು. ಕಂಪನಿಯವರೆಲ್ಲ ಸೇರಿ ತಮ್ಮೊಡೆಯನ ಸಂಗಾತಿಯನ್ನಾಗಿಸಿದರು ಆ ಸುಂದರಿಯನ್ನು. ಮಂಗಳೂರು ಕ್ಯಾಂಪಿನಲ್ಲಿ ನಡೆದ ಈ 'ಗಾಂಧರ್ವ ವಿವಾಹ'ಕ್ಕೆ ಅಲ್ಲಿಯ ರಸಿಕರ ಆಶೀರ್ವಾದವೂ ದೊರೆಯಿತು.

ಕಂಪನಿ ಹೊಸ ಸೀನರಿ, ಹೊಸ ಪೋಷಾಕು, ಹೊಸ ಹುರುಪಿನಿಂದ ಮದ್ರಾಸು ಪ್ರಾಂತ್ಯದಲ್ಲಿ ಕಾಲಿರಿಸಿತು. ಕೋಯಿಮತ್ತೂರಲ್ಲಿ ಮೊದಲ ಕ್ಯಾಂಪು. ಅಲ್ಲಿಯ ವೆರೈಟಿ ಸಿನಿಮಾ ಮಾಲೀಕ ವಿನ್‌ಸೆಂಟ್‌ರನ್ನು ತಮ್ಮ ಸರಳತೆಯಿಂದ (ಅವರಿಗೆ ಕನ್ನಡಬಾರದು, ವೀರಣ್ಣನವರಿಗೆ ಇಂಗ್ಲಿಷ್ ತಿಳಿಯದು) ಮೆಚ್ಚಿಸಿದರು. ಅವರ ಥೇಟರಿನಲ್ಲಿ ನಿತ್ಯದ ಸಿನಿಮಾ ಶೋ ನಂತರ ನಾಟಕ ಏಟ್ಟುಕೊಳ್ಳುವ ಕರಾರಿಗೆ ಒಪ್ಪಿದರು. ದಿನಕ್ಕೆ ನೂರು ರೂಪಾಯಿ ಬಾಡಿಗೆ. ನಟ ಭಯಂಕರ ಎಂ. ಎನ್. ಗಂಗಾಧರರಾಯರು, ಅಭಿನವಭಕ್ತಶಿರೋಮಣಿ ಸಿ.ಬಿ. ಮಲ್ಲಪ್ಪನವರು ರಾಣಿ ಪಾರ್ಟಿನ ಹೊದಳಿ ನಾರಾಯಣರಾಯರು ಮುಂತಾದವರ ಅಭಿನಯ ಚಾತುರ್ಯ, ವೀರಣ್ಣನವರ ಹಾಸ್ಯ ಪಾತ್ರಗಳಿಂದ ಸದಾರಮೆ, ಪ್ರಹ್ಲಾದ ಚರಿತ್ರೆಗಳು ತಮಿಳು ಬಾಂಧವರನ್ನು ಮೆಚ್ಚಿಸಿದವು. ಕಂಪನಿಗೆ ಶುಕ್ರದೆಶೆ.

ಅಲ್ಲಿಂದ ಮತ್ತಷ್ಟು ಸಜ್ಜುಗೊಂಡು ಹಿರೋಡೆಗೆ ಹೊರಟರು ವೀರಣ್ಣ. "ನಾಟಕ ಹೇಗಾಡುತ್ತೀರಿ ನೋಡೋಣ" ವೆಂದು ಹೆದರಿಸಲೆತ್ನಿಸಿದ ಮಿಲಿಟರಿಯವವನ್ನು ಮೆಟ್ಟಿ ಹಾಕಿದ್ದು, ತಮಿಳು ತಲೆಗಳಲ್ಲಿ ಕನ್ನಡ ನಾಟಕಗಳ ಕುರಿತು ಗೌರವ ತುಂಬುವಂತೆ ಮಾಡಿದ್ದು ಸಂತಸದ ಪ್ರಸಂಗಗಳು. ಕರೂರು ಕ್ಯಾಂಪಿನಲ್ಲಿ ಪ್ಲೂಹಾವಳಿ, ಕಡಿಮೆ ಕಲೆಕ್ಷನ್‌ಗಳಿಂದ ತತ್ತರಿಸಿದಾಗ 'ಸಂಪೂರ್ಣ ರಾಮಾಯಣ'ವೇರ್ಪಡಿಸಿ ಸಂಘಕ್ಕೆ ಜೀವ ತುಂಬಿದರು. ಪಳ್ನಿ, ಸೇಲಂಗಳಲ್ಲಿ ಊಟಕ್ಕೂ ತತ್ವಾರಪಡಬೇಕಾದಾಗ ಒಡವೆಗಳನ್ನು ಅಡವಿಟ್ಟಿದ್ದು, ಪಾರ್ಟ್ನರ್ ನಾಗರಾಜಪ್ಪ ಬುಸುಗುಟ್ಟಿ ಉಗುಳಿದ ನಂಜನ್ನು 'ನೀಲಕಂಠ'ನಂತೆ ಸ್ವೀಕರಿಸಿ ಕಂಪನಿಯನ್ನು ಬದುಕಿಸಿದ್ದು ವೀರಣ್ಣನವರ ಗಟ್ಟಿತನದ ಸಾಕ್ಷಿಗಳು.

ಗಣೇಶನ ಹಬ್ಬಕ್ಕೆಂದು ಗುಬ್ಬಿಗೆ ಬಂದ ವೀರಣ್ಣನವರಿಗೆ ನಾಗರಾಜಪ್ಪ ಮತ್ತೆ ಕಾಡತೊಡಗಿದ. ಗುಬ್ಬಿಯ ಹಿರಿಯರು ಪಂಚಾಯತಿ ಸೇರಿ ನಾಗರಾಜಪ್ಪನಿಗೂ, ಪದ್ಮರಾಜಯ್ಯನಿಗೂ ಹಣ ಕೊಡಬೇಕೆಂದು ತೀರ್ಮಾನವಿತ್ತರು. ಕಂಪನಿ ಬದುಕಬೇಕೆಂಬುದು ಅವರೆಲ್ಲರ ಹಿರಿಯಾಸೆ. ನಾಟಕಗಳಿರದ್ದರಿಂದ ಆದಾಯವಿರಲಿಲ್ಲ. ಕಂಪನಿ ಜನಕ್ಕೆಲ್ಲ ಊಟ ಸಂಬಳಗಳನ್ನು ನಿಲ್ಲಿಸುವಂತೆಯೂ ಇರಲಿಲ್ಲ. ಇಂಥದರಲ್ಲಿ "ನಮ್ಮ ಪಾಲು ಕೊಟ್ಟುಬಿಡಿ" ಎಂದು ನಾಗರಾಜಪ್ಪನ ಹಟ. ಸಾಲ ಮಾಡಿ ತಂದು ಪಾಲು ನೀಡಬೇಕಾಯಿತು. ಒಂಬತ್ತು ಸಾವಿರ ರೂಪಾಯಿಗಳ ಭಾರ ಹೊತ್ತು ಕಂಪನಿಯ ಏಕಮೇವ ಪ್ರೊಪ್ರೈಟರಿಕೆಯ ರಿಜಿಸ್ಟರ್ಡ್ ಕಾಗದ ಹಿಡಿದು, ತುಮಕೂರಿನಲ್ಲಿ ಬೀಡು ಬಿಟ್ಟರು.

ಇದೀಗ ವೀರಣ್ಣನವರು ಪೂರ್ಣ ಯಜಮಾನರು. ಪಾಲುದಾರತನದ ಅವಧಿಯಲ್ಲಿ ಒಂದೊಂದು ಹೆಜ್ಜೆಯು

ಡಲೂ ಹಿಂದೆ ಮುಂದೆ ನೋಡಬೇಕಾಗಿತ್ತು. ಆ ಸ್ಥಿತಿ ಕಳೆದರೂ ಪರಿಸ್ಥಿತಿ ಸುಧಾರಿಸಲು ಹಗಲು ರಾತ್ರಿ ಒಂದು ಮಾಡಬೇಕಾಯಿತು. ಕಂಪನಿಗೆ ಹೊಸ ನಾಟಕಗಳು ಬೇಕು. ಬರೆದು ಕೊಡುವ ವಿದ್ಯಾವಂತರಿಗಾಗಿ ಹುಡುಕಿದರು ವೀರಣ್ಣ.

ಪ್ರಯತ್ನಶೀಲನಿಗೆ, ಮರ ಎಷ್ಟೆತ್ತರ ವಿದ್ದರೂ ಫಲಗಳು ಕೈಗೆಟಕುತ್ತವೆ.

ಆಗ ತುಮಕೂರಿನ ವಿದ್ಯಾ ಇಲಾಖೆಯಲ್ಲಿದ್ದ ಬೆಳ್ಳಾವೆ ನರಹರಿಶಾಸ್ತ್ರಿಗಳು ಈ ವಿನಯಶೀಲನ ಸ್ನೇಹಸೌಭಾಗ್ಯ ಪಡೆದರು. ದೊಡ್ಡವರ ಹಾಗೆ. ಸ್ನೇಹ ಸಂದರ್ಭವನ್ನು ತಂತಮ್ಮ ಪುಣ್ಯ ವಿಶೇಷವೆಂದೆ ಬಗೆಯುವರು.

ಶಾಸ್ತ್ರಿಗಳು ಬರೆದುಕೊಟ್ಟ 'ಶ್ರೀಕೃಷ್ಣಲೀಲೆ'. ಅವರೆ ನಾಟಕವನ್ನು ನಿರ್ದೇಶಿಸಿದರು. ಹೊಸ ರಂಗ ದೃಶ್ಯಾವಳಿ, ನವೀನ ಉಡುಪುಗಳೊಂದಿಗೆ ಆ ಸುತ್ತಲಿನ ಘಾಸಲೆಯಲ್ಲಿ ಕಂಪನಿಗೆ ಹಣದ ಹೊಳೆ ಹರಿದು ಬರುವಂತೆ ಮಾಡಿದ ಶಾಸ್ತ್ರಿಗಳ 'ಕೃಷ್ಣ'.

ಒಂದು ರೀತಿಯಲ್ಲಿ ವೀರಣ್ಣನವರ ಕಲೆಯ ಕಾಯಕ ಗಾಂಭೀರ್ಯ ಪಡೆದುಕೊಂಡದ್ದೇ 'ಕೃಷ್ಣ ಲೀಲಾ' ನಾಟಕದಿಂದ. ಬೆಳ್ಳಾವೆಯವರ ಪರಿಚಯವೂ ಇದಕ್ಕೆ ಕಾರಣ. ಅಲ್ಲಿಯವರೆಗೆ, ಅಂದರೆ ಅವರು ಪೂರ್ಣಾವಧಿ ಮಾಲಿಕರಾಗುವವರೆಗೆ, ವೀರಣ್ಣನವರಿಗಿದ್ದ ವ್ಯಾಪಗಳು ಬಹಳ. ಆ ಮೊದಲಿನ ಮಾಲಿಕರಿಗೆ ಹಣವೊಂದೇ ಕಂಡಿತು. ಅವರು ಗುಣೈಕದೃಷ್ಟಿಯುಳ್ಳವರಾಗಿದ್ದರೆ ಅದರ ಕಥೆಯೇ ಬೇರೆಯಾಗುತ್ತಿತ್ತು. ನೂರೆಂಟು ಅಡ್ಡಿ ಆತಂಕಗಳ ಮಧ್ಯೆ ಕಂಪನಿಯನ್ನು ಬೆಳೆಸಿಕೊಂಡು ಬಂದವರು ವೀರಣ್ಣ. ಸಹಜವಾಗೇ ಅದನ್ನು



ಸರ್ವಾಂಗಸುಂದರವಾಗಿ ಮುಂದುವರಿಸಿಕೊಂಡು ಹೋಗುವ ಯೋಚನೆ ಅವರಿಗೆ ಬಂತು. ರಂಗಭೂಮಿಯ ಘನೋದ್ದೇಶದ ಅರಿವೂ ಅವರಿಗಾಗಿತ್ತು. ತಮ್ಮ ವ್ಯವಹಾರ ಚಾತುರ್ಯ, ಕಲಾವಿದರ ಪ್ರತಿಭೆಗಳಷ್ಟೇ ಕಂಪನಿಯ ಭವಿಷ್ಯವನ್ನು ಉಜ್ವಲಗೊಳಿಸಲಾವೆಂದು ಅವರಿಗನ್ನಿಸತೊಡಗಿತು. ಕಂಪನಿ ಆ ಮೊದಲು ಆಡಿಕೊಂಡು ಬಂದ ನಾಟಕಗಳ ವಸ್ತು ಮತ್ತು ಪ್ರದರ್ಶನ ಪದ್ಧತಿಗಳು ಅವರಿಗೆ ಬಾಲಿಶ ಅನಿಸತೊಡಗಿದವು. ಗುಣಮಟ್ಟ ಸುಧಾರಣೆಯೆಡೆ ವೀರಣ್ಣ ಗಮನ ಹರಿಸತೊಡಗಿದರು. ಒಬ್ಬ ವ್ಯಕ್ತಿ ಬೆಳೆಯುತ್ತಿರುವುದರ ಲಕ್ಷಣ ಇದು.

ಮೊತ್ತಮೊದಲ ಬಾರಿಗೆ ಬೆಂಗಳೂರಿಗೆ ಬಂತು ಕಂಪನಿ. ಸುಬೇದಾರ್ ಛತ್ರಂ ರಸ್ತೆಯ ಹನುಮಯ್ಯನವರ (ಆವರಣ ಸಹಿತ) ವಿಶಾಲ ಛತ್ರವನ್ನು ತಿಂಗಳಿಗೆ ನೂರು ರೂಪಾಯಿ ಬಾಡಿಗೆಗೆ ಪಡೆದರು. ಭವ್ಯ ರಂಗಮಂದಿರ ತಲೆಯೆತ್ತಿತು. ಅದರ ಭವ್ಯತೆಯೇ ಕಂಪನಿಯ ಹಿರಿಮೆಯನ್ನು ಸಾರುವಂತಿತ್ತು. 'ಸುಭದ್ರಾ ಕಲ್ಯಾಣ' ಅದ್ದೂರಿಯಿಂದ ಆಯಿತು. ವೀರಣ್ಣನವರ ಮತ್ತೊಂದು

ವಿಕ್ರಮ ಈ ನಾಟಕ. ಬಿ. ಪುಟ್ಟಸ್ವಾಮ ಯ್ಯನವರ ಪಾಂಡಿತ್ಯಪ್ರಪೂರ್ಣ ಕೃತಿ.

ವೀರಣ್ಣ ತಮ್ಮ ಆತ್ಮ ಚರಿತ್ರೆಯಲ್ಲಿ ಬರೆಯುತ್ತಾರೆ. "ಆ ಸಮಯಕ್ಕೆ ಸಂಸ್ಥೆಯು ಬಹಳ ಅಭಿವೃದ್ಧಿಗೆ ಬಂದಿತ್ತು. ಆಗ್ಗ ಕಂಪನಿಯಲ್ಲಿ ಅರವತ್ತು-ಎಪ್ಪತ್ತು ಜನಗಳನ್ನು ಸೇರಿಸಲಾಯ್ತು. ಖರ್ಚಿನ ಬಾಬ್ತು ತುಂಬಾ ಹೆಚ್ಚಾಗುತ್ತ ಬಂತು. ವಾದ್ಯಗಾರರು ಪಿಟೀಲ್ ಕೇಶವಮೂರ್ತಿಗಳು, ತಬಲ ಮುನಿಸ್ವಾಮಿ, ಹಾರ್ಮೋನಿಯಂಗೆ ಶ್ರೀನಿವಾಸಯ್ಯನವರು. ಸಿ.ಬಿ. ಮಲ್ಲಪ್ಪ, ಗಂಗಾಧರರಾಯರು, ನಾರಾಯಣರಾವ್, ತಿಮ್ಮೋಟಿ, ಯು.ಕೆ. ವ್ಯಾಸರಾವ್, ನಾರಾಯಣ ನಾಯ್ಡು, ರಾಮಚಂದ್ರರಾವ್, ಸುಂದರಮ್ಮ, ದಾವಣಗೆರೆ ಸುಂದರಮ್ಮ ಮುಂತಾದವರು ಒಳ್ಳೆ ನಟರು ಇದ್ದುದರಿಂದ ಉತ್ಪತ್ತಿಯು ಚೆನ್ನಾಗಿ ಆಗಿ ಒಳ್ಳೆಯ ಕೀರ್ತಿ ಲಭಿಸಿತು.

ಪೌರಾಣಿಕ ವಸ್ತು, ಸಂಗೀತ ಪ್ರಧಾನ ನಾಟಕ ಅದು. ಶೃಂಗಾರ ರಸಭರಿತ ಸನ್ನಿವೇಶ ಈ ನಾಟಕದ ಮತ್ತೊಂದು ಹೆಗ್ಗಳಿಕೆ, ರಂಗದ ಮೇಲೆ ಗರುಡ ಪ್ರತ್ಯಕ್ಷನಾಗುವ ಸನ್ನಿವೇಶವಂತೂ ಚಮತ್ಕಾರಪೂರ್ಣವಾಗಿತ್ತು.

ಬೆಂಗಳೂರು ಕ್ಯಾಂಪಿನ ಸಂದರ್ಭದಲ್ಲಿ ಕೈಲಾಸಂ ನಿತ್ಯ ನಾಟಕ ನೋಡಲು ಬರಬೇಕು. ಮೆಚ್ಚಿಕೊಂಡು ಮಾತಾಡಬೇಕು. 'ಪ್ರಭಾಮಣಿ ವಿಜಯ'ದಲ್ಲಿ ವೀರಣ್ಣನವರ ವಿರೋಚನನ ಪಾತ್ರವನ್ನು ಕಂಡು, ವೇದಿಕೆ ಏರಿದ ಕೈಲಾಸಂ ತಮ್ಮ ರಿಸ್ಟ್ ವಾಚನ್ನು ತೆಗೆದು ಅವರ ಕೈಗೆ ಕಟ್ಟಿಬಿಟ್ಟರಂತೆ! ಇದೇ ಸಂದರ್ಭದಲ್ಲಿ ಎಸ್. ನಾಗೇಶರಾಯರೆಂಬವರು ಕಂಪನಿಗೆ ವ್ಯವಸ್ಥಾಪಕರಾಗಿ ಸೇರಿದ್ದು ಅವರಂತೂ ವೀರಣ್ಣನವರ ದೂರದೃಷ್ಟಿಗೆ ಕಣ್ಣಾಗಿ ನಿಂತರು.

ಪಂಡಿತರು ನಾಟಕ ಬರೆದುಕೊಡಲು ಪ್ರಾರಂಭವಾದ ಮೇಲಿನ ಗುಬ್ಬಿ ಕಂಪನಿಯ ವೈಭವವೇ ಬೇರೆ. ಆಗ 'ಕೃಷ್ಣಲೀಲೆ' ಈಗ 'ಸುಭದ್ರಾ ಪರಿಣಯ.' ಜನರ ನಾಡಿಮಿಡಿತ ವೀರಣ್ಣನವರಿಗೆ ಗೊತ್ತು. ಬೆಂಗಳೂರು ನಂತರ ಹಾಸನಕ್ಕೆ ಅಲ್ಲಿಂದ ಸಕಲೇಶಪುರಕ್ಕೆ ನಡೆಯಿತು ಕಂಪನಿ. ಚಿಕ್ಕಮಗಳೂರಲ್ಲಿದ್ದಾಗ ಶಿವರಾಮ ಕಾರಂತರು ಕೆಲಕಾಲ ಕಂಪನಿಗೆ ಬಂದರು. ರನ್ನನ 'ಗದಾಯುದ್ಧ' ನಾಟಕವನ್ನು ಅಭ್ಯಸಿಸಲು ಕಾರಂತರ ಸೂಚನೆ. ಆದರೆ ನಾಟಕದಲ್ಲಿ ಹೆಂಗಸರು ಪಾತ್ರವಹಿಸದೆಂಬ ನಿರ್ಬಂಧ ಹೇರಿದರು. ಇದು ಒಪ್ಪಿತವಾಗದ್ದರಿಂದಲೂ, ಕೆಲ ನಟರ ಕುಚೇಷ್ಟೆಗಳಿಂದಲೂ ಸೂಕ್ಷ್ಮ ಮನಸ್ಸಿನ ಕಾರಂತರು ಅಲ್ಲಿಂದ ಹೋಗಿಬಿಟ್ಟದ್ದರಿಂದ 'ಗದಾಯುದ್ಧ' ಆಗದೇ ಉಳಿಯಿತು.

ಮತ್ತೊಮ್ಮೆ ಮೈಸೂರಿಗೆ ಬರುವ ಹೊತ್ತಿಗೆ ಕಂಪನಿಯ ಹೆಸರು ಎಲ್ಲೆಲ್ಲೂ ಕೇಳಬರುವಂತಾಗಿತ್ತು. ಸಾರ್ವಜನಿಕರಿಗಾಗಿ ಮೂರು ತಿಂಗಳುಗಳ ಪ್ರದರ್ಶನ. ನಂತರ ನಾಲ್ವಡಿ ಕೃಷ್ಣರಾಜ ಪ್ರಭುಗಳಿಂದ ಅರಮನೆಯಲ್ಲಿ ನಾಟಕವಾಡಲು ಆಹ್ವಾನ. ಹಿಂದೆ ಕೈಗೂಡದಿದ್ದ ಆಸೆಯೀಗ ಪೂರ್ಣವಾಗುವ ಅವಕಾಶ. 'ಸದಾರಮೆ' 'ಕಬೀರ್ ದಾಸ್', 'ಪ್ರಭಾಮಣಿ ವಿಜಯ' ಮೂರುದಿನ ನೋಡಿದ ಪ್ರಭುಗಳು "ಪೂರ್ತಿ ವೀರಣ್ಣನವರೇ ಇರುವಂತೆ ವಿವಿಧ ನಾಟಕಗಳ ಚೌಚೌ ಪ್ರದರ್ಶನ ನೀಡಿ" ಎಂದು ಅಪ್ಪಣೆ ಕೊಡಿಸಿದರು. ಹಾಗೆ ಮಾಡಿ ವೀರಣ್ಣ ಅವರ ಮನವನ್ನು ತಣಿಸಿದರೆಂದು ಬೇರೆ ಹೇಳಬೇಕಿಲ್ಲ.

ಮೂರು ದಿನಗಳ ನಂತರ ವೀರಣ್ಣನವರಿಗೆ ಪ್ರಭುಗಳಿಂದ ಸನ್ಮಾನ 'ವರ್ಸಟೈಲ್ ಕಮೀಡಿಯನ್' ಶಾಲು, ಪೇಟ, ಖಿಲ್ಲತ್ತುಗಳೊಂದಿಗೆ ಸಾವಿರದೈನೂರು ರೂಪಾಯಿಗಳನ್ನೂ ಚಿನ್ನದ ಪದಕವನ್ನೂ ಅವರಿಂದ ಪಡೆದಾಗ ವೀರಣ್ಣನವರ ಕಣ್ಣಲ್ಲಿ ಆನಂದಾಶ್ರು.

ಅಲ್ಲಿಂದ ಮದ್ರಾಸಿಗೆ ಬ್ರಾಡ್ವೆಯಲ್ಲಿ ನಿರ್ಮಾಣಗೊಂಡಿದ್ದ ಹೊಸ ಭವ್ಯರಂಗಮಂದಿರದಲ್ಲಿ 'ಮಹಾತ್ಮಾ ಕಬೀರದಾಸ್'. ಅದರ ಯಶಸ್ಸು ತಮಿಳು ಜನ ಈ ಕನ್ನಡ ಕಂಪನಿಯನ್ನು ಮುಂದೆ ಐದು ತಿಂಗಳವರೆಗೆ ಮೆಚ್ಚಿಕೊಳ್ಳುವಂತೆ ಮಾಡಿತು.



ವೀರಣ್ಣ ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ನಾಟಕ ಥಿಯೇಟರನ್ನು ಕಟ್ಟಿಸಿದರು. ಶ್ರೀ ಸರ್ಪಭೂಷಣ ಮಠದ ಸ್ವಾಮೀಜಿಯ ಒತ್ತಾಸೆ ಇಗಕ್ಕೆ ಕಾರಣ. (ಇಂದಿನ ಗೀತಾ ಟಾಕೀಸೇ ಅಂದಿನ 'ಶ್ರೀ ಚನ್ನಬಸವೇಶ್ವರ ನಾಟಕ ಮಂದಿರ' ಅದರ ಪ್ರಾರಂಭೋತ್ಸವದಂದು ನಡೆದಂಥ ಅನ್ನಸಂತರ್ಪಣೆ ಬೇರೆಂದೂ ಎಲ್ಲೂ ನಡೆದಿಲ್ಲವೆನ್ನುತ್ತಾರೆ ಕಂಡವರು)

ಸನ್ಮಾನಗಳ ಸಂತೋಷದ ಜತೆಜತೆಗೆ ಬಳ್ಳಾರಿಯಲ್ಲಿನ ಕಲ್ಲೆಸೆತದಂಥ ನೋವಿನ ಪ್ರಸಂಗವನ್ನೂ ಸಮವಾಗಿ ಸ್ವೀಕರಿಸುತ್ತ ಸ್ಥಿತಪ್ರಜ್ಞತೆ ಬೆಳೆಸಿಕೊಂಡು ಮುನ್ನಡೆದ ವೀರಣ್ಣ ಕನ್ನಡ ರಂಗಭೂಮಿಯ ಭವಿಷ್ಯದ ಚಿಂತನೆಯನ್ನೂ ಗಂಭೀರವಾಗಿ ನಡೆಸಿದರು. ಅದರ ಪರಿಣಾಮವಾಗಿಯೇ ತಲೆ ನಿಂತದ್ದು 'ಬಾಲಕಲಾವಿವರ್ಧಿನಿ'. ಮಕ್ಕಳಿಗಾಗಿ ಮತ್ತೊಂದು ಕಂಪನಿ. ಪ್ರತಿಭಾನ್ವಿತ ಮಕ್ಕಳಿಂದ ನಾಟಕಗಳು! (ಮಕ್ಕಳ ರಂಗಭೂಮಿ ಎಂದು ನಾವಿಂದು ಕರೆಯುವ ಅಂಗದ ಕುರಿತು ಗುಬ್ಬಿ ವೀರಣ್ಣ ಕಾರ್ಯಪ್ರವೃತ್ತರಾಗಿ ಎಷ್ಟೋ ದಿನಗಳ ಮೇಲೆ ರಾಷ್ಟ್ರಮಟ್ಟದಲ್ಲಿ ಅದರ ಪರಿಕಲ್ಪನೆಯನ್ನು ತಂದವರು ಶಂಕರ್ಸ್ ವೀಕ್ಲಿಯ ಶಂಕರ್) ೧೯೨೫ರ ಅಕ್ಟೋಬರಿನಲ್ಲಿ ವಿಜಯದಶಮಿಯಂದು ಇದರ ಪ್ರಾರಂಭ. ಎಂಟರಿಂದ ಹದಿನಾಲ್ಕು ವಯೋವರ್ಗದ ಬಾಲಕರು ಇದರ ಕಲಾವಿದರು. ಅವರಿಗೆ ಸಂಗೀತ ಅಭಿನಯಗಳಲ್ಲಿ ಪ್ರಾಜ್ಞರಿಂದ ಪಾಠ. ಬೆಳ್ಳಾವೆಯವರ ಶ್ರೀಕೃಷ್ಣ ಪಾರಿಜಾತ, ಜಲಂಧರ, ಕೃಷ್ಣ ಗಾರುಡಿ, ಭಾಮಾ ಪರಿಣಯ ಮತ್ತು ಕರ್ನಾಟಕಾಂಧ್ರ ಕವಿ ಭೀಮರಾಜುರವರ ಸಾವಿತ್ರಿ, ಕಬೀರ್ ಲೀಲೆ.

ದೊಡ್ಡ ಕಂಪನಿ-ಚಿಕ್ಕ ಕಂಪನಿಗಳೆಂದು ಇವೆರಡನ್ನು ಸಾಮಾನ್ಯವಾಗಿ ಗುರುತಿಸಲಾಗುತ್ತಿತ್ತು. ಮಕ್ಕಳು ದೊಡ್ಡ ಕಂಪನಿಯ ನಟರನ್ನೂ ಮೀರಿಸುವ ಪ್ರತಿಭಾ ಪ್ರದರ್ಶನ ನೀಡುತ್ತಿದ್ದರಂತೆ. ಏಕಕಾಲಕ್ಕೆ ಎರಡೆರಡು ಕೇಂದ್ರಗಳಲ್ಲಿ

ಈ ಎರಡೂ ಸಂಘಗಳ ನಾಟಕಗಳು ನಡೆಯಬೇಕು. ಮೈಸೂರು ದೊರೆಗಳ ಸನ್ನಿಧಿಯಲ್ಲೂ, ಮದ್ರಾಸು, ಮಂಗಳೂರು, ಬಳ್ಳಾರಿ ಪ್ರದೇಶಗಳಲ್ಲೂ ಬಾಲಕಲಾವರ್ಧಿನಿ ಜಯಭೇರಿ ಬಾರಿಸಿತು. ಈ 'ಚಿಕ್ಕಂಪನಿ'ಯ ನಟರಲ್ಲಿ ಕೆಲವರಿಗೆ ವೀರಣ್ಣ ಓದಿ ಮುಂದೆ ಬರಲು ಧನಸಹಾಯವನ್ನೂ ಮಾಡಿದರು.

ಗುಬ್ಬಿ ಕಂಪನಿಗೆ ಮತ್ತೊಂದು ಪುಕ್ಕವೆಂಬಂತೆ ಬೆಳೆದು ಬಂದ 'ಬಾಲಕಲಾವಿವರ್ಧಿನಿ'ಯ ಜತೆ ಜತೆಗೆ ನಷ್ಟದಲ್ಲಿದ್ದ ಕಂಪನಿಯೊಂದನ್ನು ವಹಿಸಿಕೊಂಡು ತಮ್ಮದನ್ನಾಗಿಸಿಕೊಳ್ಳುತ್ತಾರೆ ವೀರಣ್ಣ. ಶಿರಸಿ ಕ್ಯಾಂಪಿನಲ್ಲಿ ನಷ್ಟವಾಗಿ ಕೇವಲ ನಟರೊಂದಿಗೆ ವೀರಣ್ಣನವರಲ್ಲಿ ಬಂದ ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳು "ನಮಗೆ ಕೆಲವು ಸೀನರಿ, ಡ್ರೆಸ್ಸು, ಸಲಕರಣೆ ಒದಗಿಸಿಕೊಟ್ಟಲ್ಲಿ, ನಿಮ್ಮ ಶಾಖೆಯನ್ನಾಗಿ ಮಾಡಿಕೊಂಡು ಮೂವತ್ತು ಮೂವತ್ತೈದು ಜನರ ಸಂಸಾರ ನಿಮ್ಮ ಹೆಸರಿನಿಂದ ಜೀವನ ಮಾಡಿಕೊಳ್ಳಲು ಅವಕಾಶವಾಗುತ್ತದೆ" ಎಂದು ಕಣ್ಣೀರು ತಂದುಕೊಂಡರು. ಕೂಡಲೆ ಐದು ಸಾವಿರ ರೂಪಾಯಿ ಸಾಲ ಪಡೆದು ಶಿವಲಿಂಗ ಸ್ವಾಮಿಗಳೊಂದಿಗೆ ಮುಂಬಯಿಗೆ ಹೋಗಿ ಡ್ರೆಸ್, ಒಡವೆ, ಸಲಕರಣೆ ಖರೀದಿಸಿ, ಬಳ್ಳಾರಿಯಲ್ಲಿ ಕ್ಯಾಂಪು ಹಾಕಿ 'ಚಂದ್ರಗ್ರಹಣ' ನಾಟಕದೊಂದಿಗೆ ಪ್ರಾರಂಭಿಸಿದರು.

ದೊಡ್ಡ ಕಂಪನಿ, ಚಿಕ್ಕ ಕಂಪನಿ ಮತ್ತು ಈ ಬ್ರಾಂಚ್ ಕಂಪನಿಗಳಲ್ಲಿ ಆಗ ಒಟ್ಟು ದುಡಿಯುತ್ತಿದ್ದವರು ಇನ್ನೂರೈವತ್ತು ಜನ!

ಬಾಲ ಕಲಾವಿವರ್ಧಿನಿ ಸಂಘ ದೊಡ್ಡ ಕಂಪನಿಯೊಂದಿಗೆ ಕೊಡಗು ಯಾತ್ರೆ ಕೈಕೊಂಡಿತು. ಬಾಲ ಕಲಾವಿದರೊಂದಿಗೆ ಅವರ ತಂದೆತಾಯಿಗಳೂ ಸೇರಿದ್ದರಂತೆ. ಐದಾರು ಕಡೆ ನಾಟಕ ಮಾಡಿ ಹುಣಸೂರು ಸೇರಿದಾಗ ಮಲೇ



'ಲವ ಕುಶ'

ರಿಯದ ಪೀಡೆ. ಹಿರಿಯರೆಲ್ಲ ಜ್ವರದಿಂದ ಬಳಲಿ ಮಲಗಿಬಿಟ್ಟರು. ಈಗೇನಿದ್ದರೂ ನಾಟಕ ನಡೆಯಲೇಬೇಕು. ಮಕ್ಕಳಿಂದಲೇ ನಾಟಕ ಆಡಿಸುವ ಯೋಚನೆ ಮಾಡಿ ಪ್ರಚಾರ ಮಾಡುವ ಹೊತ್ತಿಗೆ ಅವರೂ ಒಬ್ಬೊಬ್ಬರಾಗಿ ಮಲೇರಿಯಕ್ಕೆ ಈಡಾಗಬೇಕೆ ? ಕಂಪನಿ ಖುಗ್ಣಾಲಯವಾಗಿ ಪರಿಣಮಿಸಿತು. ಮಲೇರಿಯಾಗೆ೫೦ ಜನರ ಪೈಕಿ ಇಬ್ಬರನ್ನು ಮಾತ್ರ ಮುಟ್ಟಲಿಲ್ಲ. ವೀರಣ್ಣ-ಸುಂದರಮ್ಮ ಎಡೆಬಿಡದೆ ರೋಗಿಗಳ ಆರೈಕೆಗೆ ನಿಂತರು. ಅನಿವಾರ್ಯವಾಗಿ ಒಂದು ತಿಂಗಳು ರಜೆ ಘೋಷಿಸಿ ಕಂಪನಿ ಕಿತ್ತ ಬೇಕಾಯಿತು.

೧೯೨೬. ಮತ್ತೆ ಮಂಗಳೂರು. ಇದೀಗ ಕೊಯಮತ್ತೂರಿನ ವಿನ್‌ಸೆಂಟ್ ಸಾಹೇಬರಿಂದ ಪಡೆದ ಸಾಲದ ಹಣದಿಂದ ಕೊಂಡು ತಂದ ಹೊಸ ಡೈನಮೊ ಇಂಜಿನ್‌ಗಳು ಗುಬ್ಬಿ ಕಂಪನಿ ಬೆಳಗಲು ನೆರವಾದವು. ವಿದ್ಯುದ್ದೀಪಗಳ ಜಗಮಗಿಕೆಯಲ್ಲಿ ನಾಟಕಗಳು ! 'ಸಂಪೂರ್ಣ ರಾಮಾಯಣ'ವೆಂದ ಮೇಲ ಕೇಳಬೇಕೆ. ಎರಡು ಸಾವಿರ ರೂಪಾಯಿಗಳ ಕಲೆಕ್ಷನ್ನು !

ಬೆಂಗಳೂರನ್ನು ಅದಾಗಲೇ ಒಂದು ರೀತಿಯಲ್ಲಿ ತಮ್ಮ ಕಾರ್ಯಾಗಾರವನ್ನಾಗಿಸಿಕೊಂಡಿದ್ದರು ವೀರಣ್ಣ. ಮೂರು ಕಂಪನಿಗಳಿಗೂ ಬೇಕಾದ ಹೊಸ ಸೀನರಿ, ಉಪಕರಣಗಳ ತಯಾರಿ ಈ ಕಾರ್ಯಾಗಾರದಲ್ಲಿ ಅಲ್ಲಿಂದ ಅವನ್ನು ಆಯಾ ಕಂಪನಿಗೆ ಕಳಿಸಬೇಕು.

ಮರುವರುಷ ಕಂಪನಿಗೆ ಮತ್ತಷ್ಟು ಪ್ರತಿಭೆಗಳ ಸೇರ್ಪಡೆಯಾಯಿತು. ಸುಬ್ಬಯ್ಯನಾಯ್ಡು, ಹಾಗೂ ಹತ್ತರೊಳಗಿನ ಸೋದರಿಯರಾದ ಬಿ. ಜಯಮ್ಮ



ಬಿ. ರಾಜಮ್ಮ ಮುಂತಾದವರು ಬಂದರು. ಅದಾಗಲೇ ಆರ್. ನಾಗೇಂದ್ರರಾಯರು ಬಂದು ಸೇರಿ ಕೆಲ ತಿಂಗಳಲ್ಲೇ ಬಿಟ್ಟು ಹೋಗಿಯಾಗಿತ್ತು.

೧೯೨೮ ರಲ್ಲಿ ವೀರಣ್ಣನವರದು ಇನ್ನೊಂದು ಸಾಹಸ. ದೇವುಡು ನರಸಿಂಹ ಶಾಸ್ತ್ರಿಗಳೂ ಶ್ರೀನಿವಾಸ ಮೂರ್ತಿ ಎಂಬುವವರೂ ಬಂದು ವೀರಣ್ಣನವರನ್ನು ಪಾರ್ಟ್ನರ್‌ಶಿಪ್ ಮೇಲೆ ಫಿಲಂ ಲಿಮಿಟೆಡ್ ಕಂಪನಿಯೊಂದರ ಸ್ಥಾಪನೆಗೆ ಒತ್ತಾಯಿಸಿದರು. ಶೇರುಗಳನ್ನು ಸಂಗ್ರಹಿಸುವ ಯೋಚನೆಯನ್ನೂ ಮುಂದಿಟ್ಟರು. ವೀರಣ್ಣನವರೇ ಆ ಲಿಮಿಟೆಡ್ ಕಂಪನಿಯ ಮ್ಯಾನೇಜಿಂಗ್ ಡೈರೆಕ್ಟರಾಗಿರಬೇಕು ಎಂಬ ಸೂಚನೆ ಅವರಿಬ್ಬರದು. "ನನ್ನನ್ನು ನಂಬಿದ ಇನ್ನೂರೈವತ್ತು ಜನಕ್ಕೆ ನನ್ನ ಈ ವ್ಯವಹಾರದಿಂದ ಕಷ್ಟವಾದರೆ ನಾನಿದ್ದೂ ಸತ್ತಂತೆಯೆ" ಅಂದುಕೊಳ್ಳುತ್ತಲೆ ಒತ್ತಾಯಕ್ಕೆ ಮಣಿಯಬೇಕಾಯಿತು ವೀರಣ್ಣ. 'ಕರ್ನಾಟಕ ಫಿಲಂ ಕಾರ್ಪೊರೇಶನ್' ನೋಂದಾಯಿಸಲ್ಪಟ್ಟದ್ದು ಹೀಗೆ.

ಶೇರು ಹಣದ ಸಂಗ್ರಹಕಾರ್ಯಕ್ಕೆ ವೀರಣ್ಣನವರೇ ಮುಂದೆ ನಿಲ್ಲಬೇಕಾಯಿತು. ನಲವತ್ತು ಸಾವಿರ ರೂಪಾಯಿ

ಸಂಗ್ರಹವಾದ ಮೇಲೆ ಕ್ಯಾಮರಾ ಇತ್ಯಾದಿ ಖರೀದಿ, ಮದ್ರಾಸಿನಿಂದ ಕುಶಲಕರ್ಮಿಗಳನ್ನು ಬರಮಾಡಿಕೊಳ್ಳುವುದು ಮುಂತಾದ ಕಾರ್ಯಗಳು.

ಇತ್ತ ನಾಟಕರಂಗ-ಅತ್ತ ಚಿತ್ರರಂಗ. ಒಂದು ಆದಾಗಲೇ ಬೆಳೆದು ನಿಂತು ಜನಮಾನಸದಲ್ಲಿ ನೆಲೆನಿಂತದ್ದು, ಇನ್ನೊಂದು ಗಂಡೋ-ಹೆಣ್ಣೋ ಎಂದು ಗೊತ್ತಾಗದ ಗರ್ಭಸ್ಥ ಶಿಶು. ಇವುಗಳ ಕಾರ್ಯನಿರ್ವಹಣೆ ಏಕಕಾಲಕ್ಕೆ ನಡೆಯಬೇಕು.



"ಸ್ಟುಡಿಯೋ ಎಂದರೆ ಈಗಿನ ಕಾಲದಂತೆ ದೊಡ್ಡ ದೊಡ್ಡ ಬಿಲ್ಡಿಂಗ್ ಇರಲಿಲ್ಲ. ಕಬ್ಬಿಣದ ಪೈಪ್ ಹೂಳಿ, ಅದರ ಮೇಲೆ ವೈರ್‌ಗಳನ್ನು ಫಿಟ್ ಮಾಡಿ, ಮೇಲೆ ಡೇರೆ ಎಳೆಯುತ್ತಲಿದ್ದರು. ಬಿಸಿಲು ಬೇಕಾಗಿದ್ದಾಗ ಮೇಲೆ ಆಚ್ಛಾದಿಸಲ್ಪಟ್ಟ ಬಟ್ಟೆಯನ್ನು ನೂಕಿಕೊಂಡು ಬಿಸಿಲನ್ನು ಉಪಯೋಗಿಸಿಕೊಳ್ಳುತ್ತಲಿದ್ದರು. ಕನ್ನಡಿಗಳನ್ನಿಟ್ಟುಕೊಂಡು (ರಿಫ್ಲೆಕ್ಟರ್) ಬಿಸಿಲಿನ ಬೆಳಕನ್ನು ತಮಗೆ ಬೇಕಾದಂತೆ ಉಪಯೋಗಿಸಿಕೊಳ್ಳುತ್ತಲಿದ್ದರು. ಅದರಂತೆ ನಾವು ಸಹಾ ಮಲ್ಲೇಶ್ವರದ ಎಚ್.ವಿ. ನಂಜುಂಡಯ್ಯನವರ ಬಂಗಲೆಯನ್ನು ತಿಂಗಳು ಒಂದಕ್ಕೆ ಇನ್ನೂರ ಐವತ್ತು ರೂಪಾಯಿಗೆಳಂತೆ ಬಾಡಿಗೆಗೆ ತೆಗೆದುಕೊಂಡು ರೂಮುಗಳಲ್ಲಿ, ಫಿಲಂ ತೊಳೆಯುವದಕ್ಕೂ ಹಾಲಿನಲ್ಲಿ ಫಿಲಂ ಆರಿಸುವದಕ್ಕೂ ಮತ್ತು ಕೆಲವು ರೂಂಗಳಲ್ಲಿ ಡಾರ್ಕ್ ರೂಂಗಳನ್ನಾಗಿ ಮಾಡಿಕೊಂಡು ಕೆಲಸ ಮಾಡುತ್ತಿದ್ದೆವು. 'ಹಿಜ್ ಲೌ ಅಫೇರ್', 'ಕಳ್ಳರ ಕೂಟ' 'ಸಾಂಗ್ ಆಫ್ ಲೈಫ್' ಎನ್ನುವ ಮೂರು ಮೂಕ ಚಿತ್ರಗಳನ್ನು ತೆಗೆಸಿದೆವು. ಬೆಲ್ಜಿಯಂಮಿನ 'ಆಲ್‌ಗುಡ್' ಎಂಬವನು 'ಹಿಜ್ ಲಾ ಅಫೇರ್' ಚಿತ್ರಕ್ಕೆ ಡೈರೆಕ್ಟರ್ ಆಗಿದ್ದರು. 'ಹರಿಮಾಯೆ' ಚಿತ್ರಕ್ಕೆ ವೈ.ವಿ. ರಾವ್ ಡೈರೆಕ್ಟರ್ ಆಗಿದ್ದರು. ಆಗ್ಗೆ 'ಲಲಿತಾ ಪವಾರ್' ಎಂಬ ಬೊಂಬಾಯಿಯ ನಟಿ ಇದ್ದರು. 'ರೇಲಿಂಗೀ' ಎಂಬ ಕ್ಯಾಮೆರಾ ಮೆನ್ ಇದ್ದರು. ಚಿತ್ರದಲ್ಲಿ ಪಾತ್ರವಹಿಸುತ್ತಿರುವುದು ಹೊಸತಾದ್ದರಿಂದ ರಿಫ್ಲೆಕ್ಟರ್‌ಗಳನ್ನಿಟ್ಟಾಗ್ಗೆ ಆ ಸೂರ್ಯನ ಪ್ರಕಾಶ ಕಿರಣಗಳಿಂದಾಗಿ ನಟರು ಕಣ್ಣು ಬಿಡಲಾಗದೇ, ಕೆಲವು ಸಾರಿ ಮುಕ್ಕಾಲು ಕಣ್ಣು ಮುಚ್ಚಿಯೇ ನಟಿಸುತ್ತಿದ್ದರು. ಕ್ರೀಂ ಇದ್ದರೂ ಅದರ ಉಪಯೋಗ ತಿಳಿಯದ್ದರಿಂದ ಬಣ್ಣವನ್ನು ಅಳಿಸುವುದೂ ಗೊತ್ತಿರಲಿಲ್ಲ. ಅಲ್ಲದೆ ಬೊಂಬಾಯಿ ಸ್ಟುಡಿಯೋ ಲಾಸಾಗಿದ್ದುದರಿಂದ ಅಲ್ಲಿಯ ಸಾಮಾನುಗಳನ್ನು ತಂದಿದ್ದೆವು. ಹೀಗೆ ಚಿತ್ರಗಳನ್ನು ಅವ್ಯವಸ್ಥೆಯಿಂದ ತೆಗೆದದ್ದಾಯಿತು. ವೀರಣ್ಣ (ತಮ್ಮ 'ಕಲೆಯೆ ಕಾಯಕ'ದಲ್ಲಿ) ಬರೆಯುತ್ತಾರೆ.

ಮೂಕ ಚಿತ್ರ ಪ್ರಪಂಚದೊಂದಿಗಿನ ಅವರ ಸಹವಾಸವೊಂದು ಮೂಕರೋದನ ಪರ್ವ. ಚಿತ್ರ ರಂಗವೆಂಬ ಬಕಾಸುರನ ಸಂಗಾತಿಯಾಗಿ ನಿಂತ ಅವರು

ಹಣವೊದಗಿಸಲು ಪಟ್ಟಪಾಡು ಅಷ್ಟಿಷ್ಟಲ್ಲ. ಅದಕ್ಕಾಗಿ ನಂಬಿಕೊಂಡದ್ದು ತಮ್ಮ ಕಂಪನಿಗಳನ್ನೇ. ಅಲ್ಲಿ ದುಡಿದ ಅಪಾರ ಹಣ ಇಲ್ಲಿಗೆ ಪುಡಿಗಾಸೆಂಬಂತೆ ಖರ್ಚಾಗುತ್ತಿತ್ತು. ಅರಮನೆಯಲ್ಲಿ ಹದಿನೆಂಟು ನಾಟಕವಾಡಿ ಬಂದ ಐದು ಸಾವಿರ ರೂಪಾಯಿಗಳು ಅಲ್ಪಾವಧಿಯಲ್ಲೇ ಕರಗಿಹೋದವು. ಚಿತ್ರ ಸಂಸ್ಥೆಯ ವ್ಯವಹಾರ ವೀರಣ್ಣನವರಿಗೊಂದು ತಲೆನೋವು. ಉಳಿದಿಬ್ಬರಿಗೆ ಮುಂದಿನ ಕಾರ್ಯವನ್ನು ವಹಿಸಿ ಬಹುಕಾಲ ತಾವು ಲಕ್ಷಿಸಲಾಗದಿದ್ದ ಕಂಪನಿಗಳತ್ತ ನಡೆದರು.

ಇಪ್ಪರೊಳಗೆ ಸಿ.ವಿ. ನರಸಿಂಹ ಅಯ್ಯಂಗಾರ್‌ರ ಜಾಗೆಯನ್ನು ವರ್ಷವೊಂದಕ್ಕೆ ಸಾವಿರ ರೂಪಾಯಿ ಕರಾರಿನ ಮೇಲೆ ಹನ್ನೆರಡು ವರ್ಷ ಅವಧಿಗೆ ಗುತ್ತಿಗೆ ಪಡೆದು ಭವ್ಯವಾದ ಶಿವಾನಂದ ಥಿಯೇಟರ್ ಎಂಬ ನಾಟಕಗೃಹವನ್ನೂ ಕಟ್ಟಿಸಿಯಾಗಿತ್ತು. (ಅದೇ ಇಂದಿನ ಮೂವಿಲ್ಯಾಂಡ್ ಸಿನೆಗೃಹ) ದೊಡ್ಡ ಕಂಪನಿ ಆಂಧ್ರದೆಡೆ ಹೋಗಿ ಬೆಂಗಳೂರಿಗೆ ಬಂತು. ಫಿಲಂ ಕಂಪನಿಗೂ ಭರಿಸಲಾರದ ನಷ್ಟ. ತಾಂತ್ರಿಕವರ್ಗಕ್ಕೆ, ನಟನಟಿಯರಿಗೆ ಸಂಬಳವನ್ನೇ ಕೊಟ್ಟಿರಲಿಲ್ಲ. ದೇವುಡು ಅವರಿಗೋ ಇದು ನೀಗದ ಕೆಲಸ. ಅವರು ಸಿನಿಮಾಕ್ಕೆ ನಮಸ್ಕಾರ ಹೊಡೆದು ಗುಬ್ಬಿಕಂಪನಿಯ ಆಶ್ರಯ ಪಡೆದರು. ಶ್ರೀನಿವಾಸಮೂರ್ತಿಗಳು ನಡೆಸುತ್ತಿದ್ದ ಓರಿಯಂಟಲ್ ಬ್ಯಾಂಕ್ ಕೂಡ ನಿಂತುಹೋಗಿ ಅವರು ಕಳಚಿಕೊಂಡರು.

ಕಂಪನಿಗಳ ಜವಾಬ್ದಾರಿ, ಸಿನಿಮಾದ ಅವ್ಯವಸ್ಥೆ ಸರಿ ಹೊಂದಿಸುವಿಕೆ, ಕಂಪನಿಯ ನೂರೈವತ್ತು ಜನರೊಂದಿಗೆ ಸಿನಿಮಾದವರಿಗೂ ನಿತ್ಯ ಹೊಟ್ಟೆಗೆ ಹಾಕಬೇಕು. ಹೊರಗೆ ತಲೆ ಹಾಕಿದರೆ ಹೆಜ್ಜೆಗೊಂದು ಪೆಟ್ಟು ತಿನ್ನುವಂತಾಯಿತು ಅವರ ಸ್ಥಿತಿ. ಸಾರ್ವಜನಿಕರಲ್ಲಿ ವೀರಣ್ಣ 'ಪಾಪರ್' ಆಗುತ್ತಿದ್ದಾರೆಂಬ ಗುಲ್ಲು ಬೇರೆ. ಬದುಕನ್ನು ಕೊನೆಗೊಳಿಸಿಕೊಂಡುಬಿಡೋಣ ಎಂದೆಲ್ಲ ಆಗ ವೀರಣ್ಣ ಯೋಚಿಸಿದರಂತೆ. ಸರಿ ಅವತ್ತು ಬಂದಾಗೆಲ್ಲ ಚಿನ್ನ ಅಡವಿಡುವುದು ಬಂದ ಹಣದಿಂದ ಖರ್ಚು ನಿಭಾಯಿಸುವುದು. ಅಂತೂ (೧೯೩೧ ರಲ್ಲಿ) ಒಂದು ಲಕ್ಷ ರೂಪಾಯಿ ಸಾಲದ ಹೊರೆ ಹೊತ್ತರೂ ಧೈರ್ಯಗೆಡದೆ ಮುಂದುವರಿದರು ವೀರಣ್ಣ. (ಬಿ.ಜಯಮ್ಮ ಈ ಕಲೋಪಾಸಕನ ಬಾಳಿನಲ್ಲಿ ಪ್ರವೇಶಿಸಿದ್ದು ಅದೇ ವರ್ಷ).

ಬರಬರುತ್ತ ಜನರಿಗೆ ನಾಟಕದಲ್ಲಿ ಒಲವು ಕಡಿಮೆಯಾಗತೊಡಗಿತು. ಚಲನಚಿತ್ರಗಳ ಆಕರ್ಷಣೆ ಹೆಚ್ಚಿತು. ಹೀಗೇ ಮುಂದುವರಿದರೆ ನಾಟಕದ ಸ್ಥಾನ ಗೌಣವಾಗುತ್ತದಲ್ಲ. ಹಾಗಾಗಗೊಡಬಾರದು ಎಂದಿತು ಅವರ ಒಳಮನಸ್ಸು.

ಆಗವರ ಯೋಚನೆಗೆ ಬಂದದ್ದು ಮತ್ತೆ ಮಹಾಭಾರತ. ಭಾರತೀಯರಿಗೆ ಇನ್ನೆಷ್ಟು ನೂರು ವರ್ಷಗಳು ಗತಿಸಿದರೂ ಅವು ಚಿರನೂತನ ಕೃತಿಗಳು. (ಟಿ.ವಿ. ರಾಮಾಯಣ- ಮಹಾಭಾರತಗಳ ಜನಪ್ರಿಯತೆ ನೋಡಿ!) 'ಕುರುಕ್ಷೇತ್ರ'ವನ್ನು ಬರೆದುಕೊಟ್ಟ ಬಿ. ಪುಟ್ಟಸ್ವಾಮಯ್ಯನವರು ಗುಬ್ಬಿ ಕಂಪನಿಯ ದಿಕ್ಕನ್ನು ಮತ್ತೆ ಬದಲಿಸಿದರು.

'ಕುರುಕ್ಷೇತ್ರ' ತಯಾರಿಗೆ ಐವತ್ತು ಜನ ಕುಶಲಕರ್ಮಿಗಳು, ಮೂರು ತಿಂಗಳು ಮೊದಲೇ ಹಗಲು-ರಾತ್ರಿ ಅವರು ಕೆಲಸ ಮಾಡಿದರು. ಗುಬ್ಬಿ ಕಂಪನಿ ಸ್ಥಾಪನೆಯಾಗಿ ಐವತ್ತು ವರ್ಷ

(124 ನೇ ಪುಟಕ್ಕೆ)

# ಶ್ರೀಮನ್ ಮಹಾರಾಜರ ಭಾಷಣ

**ಮೈಸೂರು ಶ್ರೀಮನ್ ಮಹಾರಾಜರವರು ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಯವರು ಬೆಂಗಳೂರು ನಗರದಲ್ಲಿ ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕಮಂಡಲಿಯ 71ನೇ ವರ್ಷದ ಮಹೋತ್ಸವದ ಅಧ್ಯಕ್ಷತೆ ವಹಿಸಿ ಮಂಡಲಿಯವರ "ದಶಾವತಾರ" ಎಂಬ ಪೌರಾಣಿಕ ನಾಟಕವನ್ನು ಪ್ರಾರಂಭಗೊಳಿಸುತ್ತಾ ಅಪ್ಪಣೆ ಕೊಡಿಸಿದ ಭಾಷಣ.**

(1955ನೇ ಇಸವಿ ಜೂನ್ ತಿಂಗಳು 15ನೆಯ ತಾರೀಖು. ಬುಧವಾರ)

ನಾಟಕರತ್ನ ವೀರಣ್ಣನವರೆ, ಮಹಿಳೆಯರೆ ಮತ್ತು ಮಹಾಶಯರೆ,

ಕರ್ನಾಟಕ ದೇಶದಲ್ಲಿಯೂ, ದಕ್ಷಿಣ ಭಾರತದಲ್ಲಿಯೂ ಅತ್ಯಂತ ಜನಪ್ರಿಯ ವೆನಿಸಿಕೊಂಡಿರುವ ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಮಂಡಲಿಯ 71ನೇ ವರ್ಷದ ಮಹೋತ್ಸವದಲ್ಲಿ ಭಾಗವಹಿಸುವ ಸದವಕಾಶ ಪ್ರಾಪ್ತ ವಾಗಿರುವುದಕ್ಕಾಗಿಯೂ, ಮಂಡಲಿಯವರು ಹೊಸದಾಗಿ ಸಿದ್ಧಗೊಳಿಸಿರುವ "ದಶಾವತಾರ" ಎಂಬ ಪೌರಾಣಿಕ ನಾಟಕದ ಪ್ರಾರಂಭೋತ್ಸವ ನಡೆಸುವ ಅವಕಾಶ ಪ್ರಾಪ್ತ ವಾದುದಕ್ಕಾಗಿಯೂ, ನಾವು ಬಹಳವಾಗಿ ಸಂತೋಷಪಡುತ್ತೇವೆ.

ಮೈಸೂರಿನ ಅರಸುಮನೆತನದಲ್ಲಿ ಸುಪ್ರಸಿದ್ಧರಾಗಿರುವ ಶ್ರೀ ಚಿಕ್ಕದೇವರಾಜ ಒಡೆಯರು, ಸಿಂಗರಾರ್ಯ ಎಂಬ ತಮ್ಮ ಆಸ್ಥಾನ ಕವಿಯಿಂದ "ಮಿತ್ರವಿಂದಾಗೋವಿಂದ" ಎಂಬ ನಾಟಕವನ್ನು ಬರೆಸಿದ ಸಂಗತಿಯನ್ನು, ಮಹಾನುಭಾವರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಕಾಳಿದಾಸ ಮಹಾಕವಿಯ ನಾಟಕತ್ರಯಗಳಾದ ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರಗಳನ್ನು ಕನ್ನಡಕ್ಕೆ ಅನುವಾದ ಮಾಡಿದರೆಂಬುವನ್ನು, ನಮ್ಮ ಪಿತಾಮಹರಾದ ಶ್ರೀ ಚಾಮರಾಜ ಒಡೆಯರು ಅಭಿನವ ಕಾಳಿದಾಸ ಶ್ರೀಮಾನ್ ಬಸವಪ್ಪಶಾಸ್ತ್ರಿಗಳೇ ಮೊದಲಾದ ಕವಿಶ್ರೇಷ್ಠರಿಂದ ಅಭಿಜ್ಞಾನ ಶಾಕುಂತಲ, ಚಂಡಕೌಶಿಕ, ರತ್ನಾವಳಿ, ಉತ್ತರ ರಾಮ ಚರಿತೆ, ಶೂರಸೇನ ಚರಿತೆ ಮೊದಲಾದ ಶ್ರೇಷ್ಠ ನಾಟಕಗಳನ್ನು ಕನ್ನಡದಲ್ಲಿ ಬರೆಸಿ ತಮ್ಮ ಹೆಸರಿನ ಒಂದು ನಾಟಕ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಬಗೆಬಗೆಯ ಸಹಾಯಗಳನ್ನು ಕಲ್ಪಿಸಿಕೊಟ್ಟು ಕನ್ನಡ ರಂಗಭೂಮಿಗೆ ನವಚೈತನ್ಯವನ್ನುಂಟುಮಾಡಿದರೆಂಬುದನ್ನು, ನಮ್ಮ ಪೂಜ್ಯ ದೊಡ್ಡಪ್ಪಂದಿರು ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರು ಮತ್ತು ನಮ್ಮ ಪೂಜ್ಯ ಪಿತೃ ವರ್ಯರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರು ಕನ್ನಡ ರಂಗಭೂಮಿಗೆ ಹಾಗೂ ಗುಬ್ಬಿ ನಾಟಕಮಂಡಲಿಯವರಿಗೆ ಕಾಲಕಾಲಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಟ್ಟು ಅನುಗ್ರಹಿಸಿದರೆಂಬುದನ್ನು ಇಂದು ನಿಮ್ಮ ವಿಜ್ಞಾಪನಾ ಪತ್ರಿಕೆಯಲ್ಲಿ ಉಲ್ಲೇಖಿಸಿರುವುದನ್ನು ಕೇಳಿ ನಮಗೆ ಹೆಚ್ಚಿನ ಸಂತೋಷ ಉಂಟಾಗಿದೆ. ದೇಶಾಭಿಮಾನ ಪೂರ್ಣವೂ, ಕಲಾಭಿಮಾನದ್ಯೋತಕವೂ ಆದ ಇಂತಹ ಸವಿ ನೆನಪುಗಳನ್ನು ನೀವು ಇಂದು ನಮಗೆ ತಂದುಕೊಟ್ಟುದಕ್ಕಾಗಿ ನಿಮ್ಮನ್ನು ಕೃತಜ್ಞತೆಯಿಂದ ವಂದಿಸುತ್ತೇವೆ. ಇದೇ ಸಂದರ್ಭದಲ್ಲಿ ಕಲಾಭಿಮಾನಿಗಳಾದ ಮತ್ತು ಉಜ್ವಲ ದೇಶಾಭಿಮಾನಿಗಳಾದ

ನಮ್ಮ ಪ್ರಪಿತಾಮಹರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು, ನಮ್ಮ ನಾಡಿನ ಜನರಿಗೆ ಬಹು ಪ್ರಿಯವೆನಿಸಿರುವ ಬಯಲಾಟಗಳು ಅಥವಾ "ದಶಾವತಾರ" ಆಟಗಳನ್ನು ಆಡುವ ಜನರನ್ನು ಮಂಗಳೂರು ಮೊದಲಾದ ಕಡೆಗಳಿಂದ ಕರೆಯಿಸಿ ಮೈಸೂರಿನಲ್ಲಿ ಅವರಿಗೆ ಎಲ್ಲಾ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ಆ ಬಯಲಾಟದ ಕಲೆಗೂ ಹೆಚ್ಚು ಪ್ರೋತ್ಸಾಹವಿತ್ತರೆಂಬ ವಿಷಯವನ್ನು ನಾವು ಇಂದು ನಿಮ್ಮ ಗಮನಕ್ಕೆ ತರಲು ಬಯಸುತ್ತೇವೆ.

ಎಲ್ಲ ದೇಶದ ಸಾಹಿತ್ಯದಲ್ಲಿಯೂ ನಾಟಕಗಳಿಗೆ ಹೆಚ್ಚಿನ ಗೌರವವಿದೆ. ಪ್ರಪಂಚದ ಪ್ರಖ್ಯಾತ ಮತ್ತು ಪ್ರಾಚೀನ ಭಾಷೆಗಳಾದ ಸಂಸ್ಕೃತ, ಗ್ರೀಕ್ ಮತ್ತು ಇಂಗ್ಲಿಷ್ ಸಾಹಿತ್ಯಗಳಿಗೆ ಈ ಮಾತು ಹೆಚ್ಚಾಗಿ ಅನ್ವಯಿಸುತ್ತದೆ. "ಕಾವ್ಯೇಷು ನಾಟಕಂ ರಮ್ಯಂ, ನಾಟಕೇಷು ಶಕುಂತಲಾ" ಎಂಬ ವಾಕ್ಯವು ಕಾವ್ಯಗಳಲ್ಲಿ ನಾಟಕವೂ ನಾಟಕಗಳಲ್ಲಿ ಅಭಿಜ್ಞಾನ ಶಾಕುಂತಲವೂ ಶ್ರೇಷ್ಠ ಎಂಬ ಅಭಿಪ್ರಾಯವನ್ನೇ ಹೇಳುತ್ತದೆ. 'ನಾಟಕಾಂತ ಸಾಹಿತ್ಯ' ಎಂಬ ಮಾತು ಈ ವಾದವನ್ನೇ ಸಮರ್ಥಿಸುತ್ತದೆ. ಒಂದು ದೇಶದ ನಾಗರಿಕತೆಯನ್ನು ತಿಳಿಯಬೇಕಾದರೆ ಆ ದೇಶದ "ಒಂದು ರಂಗಭೂಮಿಯನ್ನು ನೋಡಿದರಾಯ್ತು" ಎಂಬ ಪ್ರಾಜ್ಞರ ಮಾತೊಂದಿದೆ. ಈ ವಾಕ್ಯದ ತಾತ್ಪರ್ಯ ಆ ದೇಶದ ಸಂಗೀತ, ಸಾಹಿತ್ಯ, ನೃತ್ಯ, ಚಿತ್ರ, ಶಿಲ್ಪ, ಜನಜೀವನ, ಇವೆಲ್ಲವುಗಳನ್ನೂ ಆ ರಂಗಭೂಮಿಯಲ್ಲಿ ಕಾಣಬಹುದು ಎಂಬುದೇ ಆಗಿದೆ. ನಿಮ್ಮ ಸನ್ಮಾನ ಪತ್ರಿಕೆಯಲ್ಲಿ ಹೇಳಿರುವಂತೆ ರಂಗಭೂಮಿಯು ಜನಸಾಮಾನ್ಯರ ವಿಶ್ವವಿದ್ಯಾನಿಲಯ– ಎಂಬ ಮಾತು ಸಹಜವಾಗಿಯೇ ಇದೆ. ನಾಟಕವು ಜನಜೀವನದ ಪ್ರತಿಬಿಂಬ. ಜನತೆಯನ್ನು ಸಂತೋಷಗೊಳಿಸುವುದು, ಸನ್ಮಾರ್ಗಕ್ಕೆ ಒಯ್ಯುವುದು, ಜೀವನಾನುಭವಗಳನ್ನು ಬೋಧಿಸುವುದು, ಕಲಾಭಿರುಚಿಯನ್ನು ಹೆಚ್ಚಿಸುವುದು ಇವುಗಳೇ ನಾಟಕದ ಮುಖ್ಯೋದ್ದೇಶಗಳು. ಈ ಕಾರಣದಿಂದಲೇ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ದೇಶಗಳಲ್ಲಿಯೂ ನಾಟಕಗಳಿಗೆ ಪ್ರಾಮುಖ್ಯವಿದೆ.

ನಮ್ಮ ಭಾರತ ಭೂಮಿಯಲ್ಲಿ ಸುಮಾರು 2,000 ವರ್ಷಗಳಷ್ಟು ಹಿಂದಿನಿಂದ ಭಾಸ, ಕಾಳಿದಾಸ, ಭವಭೂತಿ, ಶ್ರೀಹರ್ಷ, ಶೂದ್ರಕ ಮೊದಲಾದ ಮಹಾಕವಿಗಳು ಲೋಕಮಾನ್ಯಗಳಾದ ನಾಟಕಗಳನ್ನು ಬರೆದು ಖ್ಯಾತಿಗೊಂಡಿದ್ದಾರೆ. ಭಾಸ ಮಹಾಕವಿಯ ಸರ್ವೋತ್ಕೃಷ್ಟ ಕಲಾಕೃತಿಗಳಾದ ಸ್ವಪ್ನವಾಸವದತ್ತ, ಪ್ರತಿಮಾ ಮತ್ತು ಪಾಂಚರಾತ್ರ ಮೊದಲಾದ ನಾಟಕಗಳು ತಮ್ಮ ಅಪೂರ್ವ ಪ್ರತಿಭೆಯಿಂದ ಲೋಕದ ಮನ್ನಣೆಗೆ ಪಾತ್ರವೆನಿಸಿವೆ. ಕಾಳಿದಾಸನ ಶಾಕುಂತಲ, ಭವಭೂತಿಯ ಉತ್ತರ ರಾಮಚರಿತೆ, ಶೂದ್ರಕನ ಮೃಚ್ಛಕಟಿಕ ಎಂಬ ನಾಟಕಗಳು ವಿಶ್ವ ಸಾಹಿತ್ಯದಲ್ಲಿ ಪರಿಗಣಿಸಲು ಅರ್ಹವಾಗಿವೆ. ಭಾಸನ ನಾಟಕೀಯತೆ, ಕಾಳಿದಾಸನ ವಸ್ತುವಿನ್ಯಾಸ, ಭವಭೂತಿಯ ರಸಪ್ರತಿಪಾದನೆ, ಶೂದ್ರಕನ ವಿನೂತನತೆ ಇವು ಭಾರತೀಯರ ಪ್ರತಿಭೆಗೆ ಸುಸ್ಪಷ್ಟವಾದ ನಿದರ್ಶನಗಳೆನಿಸಿವೆ. ಇನ್ನು ನಮ್ಮ ಕನ್ನಡನಾಡಿನ ನಾಟಕಗಳ ಕಡೆಗೆ ನಮ್ಮ ದೃಷ್ಟಿಯನ್ನು ಹರಿಸೋಣ. ಇದುವರೆವಿಗೆ ತಿಳಿದುಬಂದಿರುವ ಪ್ರಕಾರ ಪೂರ್ವೋಕ್ತ 'ಮಿತ್ರವಿಂದಾಗೋವಿಂದ' ಎಂಬ ನಾಟಕವೇ ಕನ್ನಡದಲ್ಲಿ ಮೊದಲನೆಯ ನಾಟಕವಾಗಿದೆ. ಆದರೂ ವಿದ್ವಾಂಸರು ಹಲವು ಸಂಶೋಧನೆಗಳನ್ನು ನಡೆಸಿ ಇದಕ್ಕೂ

ಮೊದಲು ಕನ್ನಡದಲ್ಲಿ ನಾಟಕಗಳು ರಚನೆಯಾಗಿದ್ದಿರಬಹುದು ಎಂದು ತರ್ಕಿಸಿದ್ದಾರೆ. ಇದು ಸಂಶೋಧಕರಿಗೆ ವಿಾಸಲಾದ ವಿಷಯವಾಗಿದೆ. ಕನ್ನಡ ಸಾಹಿತ್ಯ ಒಂದರಲ್ಲೇ ಅಲ್ಲ, ತಮಿಳು, ತೆಲುಗು, ಮಲೆಯಾಳ ಸಾಹಿತ್ಯದಲ್ಲೂ ಕೂಡ ಬಹಳ ಹಿಂದಿನ ಕಾಲ ದಲ್ಲಿ ನಾಟಕಗಳು ರಚನೆಯಾಗದಿರಲು ಕಾರಣವೇನು ? ಇದಕ್ಕೆ ಮುಖ್ಯವಾದ ಕಾರಣ ದ್ರಾವಿಡ ಸಂಸ್ಕೃತಿ ಪ್ರಧಾನವಾದ ಈ ದಕ್ಷಿಣ ಭಾರತದಲ್ಲಿ ಮೊದಲಿನಿಂದಲೂ ಬಳಕೆ ಯಲ್ಲಿದ್ದ ಬಯಲಾಟ, ಯಕ್ಷಗಾನ ಅಥವಾ ಭಾಗವತರ ನಾಟಕಗಳು ಹೆಚ್ಚು ಜನ ಪ್ರಿಯವಾಗಿದ್ದುದು ಕಾರಣವಾಗಿರಬಹುದು. ಹಲವು ವಿದ್ವಾಂಸರ ಅಭಿಪ್ರಾಯದಂತೆ ಯಕ್ಷಗಾನ ಮೊದಲಾದ ನೃತ್ಯ ನಾಟಕಗಳು ಇಂದಿನ ನಮ್ಮ ನಾಟಕಗಳಿಗೆ ಮಾತೃ ಸ್ಥಾನವೆಂದು ಊಹಿಸಲು ಅವಕಾಶವಿದೆ. ನಮ್ಮ ಮೈಸೂರು ರಾಜ್ಯದಲ್ಲಿಯೂ, ಮಂಗಳೂರು, ಕಾರವಾರ ಮೊದಲಾದ ಭಾಗಗಳಲ್ಲಿಯೂ ಇಂದಿಗೂ ಕಲಾಪೂರ್ಣ ವಾಗಿ ಈ ಬಯಲಾಟಗಳು ಅಭಿನಯಿಸಲ್ಪಡುವುದನ್ನು ನೋಡಬಹುದು. ಈ ಯಕ್ಷ ಗಾನ ಪ್ರಬಂಧಗಳೇ ಮರಾಠಿ ನಾಟಕಗಳಿಗೆ ಮಾರ್ಗದರ್ಶನಗಳಾದುವೆಂದು ಕೆಲವರು ಹೇಳುತ್ತಾರೆ.

ಇತ್ತೀಚಿನ ಕನ್ನಡ ಸಾಹಿತ್ಯದಲ್ಲಿ ಕಥೆ, ಕಾದಂಬರಿ, ಭಾವಗೀತೆಗಳ ಜತೆಜತೆ ಯಲ್ಲಿಯೇ ನೂತನ ನಾಟಕ ರಚನೆಯ ಕಾರ್ಯವೂ ಬಿರುಸಾಗಿ ನಡೆಯುತ್ತಿದೆ. ನಮ್ಮ ವಿದ್ವಾಂಸರು ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳನ್ನು ಬರೆಯು ತ್ತಿದ್ದಾರೆ. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಅಶ್ವತ್ಥಾಮನ್ ಮತ್ತು ಪಾರ ಶಿಕರು ಎಂಬ ನಾಟಕಗಳನ್ನು ರಚಿಸಿ ಗ್ರೀಕ್ ರುದ್ರನಾಟಕಗಳ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟಿದ್ದಾರೆ. ಕೀರ್ತಿಶೇಷರಾದ ಕೈಲಾಸಂರವರು ಟೊಳ್ಳುಗಟ್ಟಿ, ಹೋಂ ರೂಲ್, ಏಕಲವ್ಯ ಮೊದಲಾದ ನಾಟಕಗಳ್ನು ರಚಿಸಿ ಕನ್ನಡದಲ್ಲಿ ಕ್ರಾಂತಿ ಯನ್ನು ಎಸಗಿದ್ದಾರೆ.

ಭಾರತ ಸರ್ಕಾರದವರೂ, ಪ್ರಾಂತೀಯ ಸರ್ಕಾರದವರೂ ಸಾಹಿತ್ಯ, ಸಂಗಿತ, ನೃತ್ಯ, ನಾಟಕ, ಚಿತ್ರ, ಶಿಲ್ಪ ಮೊದಲಾದುವುಗಳ ಏಳಿಗೆಗಾಗಿ ಈಗ ಗಮನವಿತ್ತಿ ದ್ದಾರೆ. ನಮ್ಮ ಮೈಸೂರು ರಾಜ್ಯದಲ್ಲಿಯೂ ಈ ಪ್ರಯತ್ನ ಬಲವಾಗಿ ಮುಂದು ವರಿಯುತ್ತಿದೆ. ನಮ್ಮ ಸರ್ಕಾರದವರು ಸಂಸ್ಕೃತಿ ಮತ್ತು ನೃತ್ಯ, ನಾಟಕ, ಸಂಗೀತ ಇವುಗಳ ಅಭಿವೃದ್ಧಿಗಾಗಿ ಬಹಳವಾಗಿ ಪ್ರೋತ್ಸಾಹವಿತ್ತಿದ್ದಾರೆ. ಇದು ನಿಜವಾಗಿಯೂ ಅಭಿನಂದನೀಯ ಕಾರ್ಯವೇ ಸರಿ. ಗುಬ್ಬಿ ಶ್ರೀ ಚೆನ್ನಬಸವೇಶ್ವರ ನಾಟಕಮಂಡಲಿ ಯವರು 70 ವರ್ಷಗಳಷ್ಟು ಹಿಂದಿನಿಂದ ತಮ್ಮ ಸಂಸ್ಥೆಯ ಮೂಲಕವಾಗಿ ಸತತವಾಗಿ ಪ್ರಯತ್ನಿಸಿ ಹೆಚ್ಚಿನ ಕಲಾಸೇವೆಯನ್ನು ಮಾಡಿರುತ್ತಾರೆ. ಮಂಡಲಿಯ ಪೌರಾಣಿಕ ನಾಟಕಗಳಾದ ಕುರುಕ್ಷೇತ್ರ, ಕೃಷ್ಣಲೀಲಾ, ಕಬೀರ್‌ದಾಸ್, ಅಕ್ಕಮಹಾದೇವಿ ಮೊದಲಾದುವು ಹೆಚ್ಚು ಜನಪ್ರಿಯವೆನಿಸಿವೆ. ಈ ಮಂಡಲಿಯ ಪ್ರಾರಂಭಕಾಲದಲ್ಲಿ ಆಡುತ್ತಿದ್ದ ಇಂದಿಗೂ ರಂಗಭೂಮಿಯ ಮೇಲೆ ಪ್ರದರ್ಶಿಸಲ್ಪಡುತ್ತಿರುವ ಸದಾರಮೆ, ಗುಲೇಬಕಾವಲಿ ಮೊದಲಾದ ನಾಟಕಗಳು ಅಂದಿನಿಂದ ಇಂದಿನವರೆವಿಗೆ ಒಂದೇ ಸಮನೆ ಜನಪ್ರಿಯತೆಯನ್ನು ಹೊಂದಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ಸುಮಾರು 60 ವರ್ಷಗಳಷ್ಟು ಹಿಂದಿನಿಂದ ರಂಗಭೂಮಿಯಲ್ಲಿ ಒಂದೇಸಮನಾಗಿ

ವಿವಿಧಪಾತ್ರಗಳನ್ನು ವಹಿಸಿ ಕಲಾಸೇವೆಯನ್ನು ಮಾಡುತ್ತಿರುವ ಶ್ರೀ ವೀರಣ್ಣನವರ ಉತ್ಸಾಹವೂ, ಸಾಹಸವೂ ಅಭಿನಂದನೀಯವೆನಿಸಿದೆ. ಶ್ರೀ ವೀರಣ್ಣನವರು ಹಾಸ್ಯರಸ ಪ್ರಧಾನಪಾತ್ರಗಳನ್ನು ನಿರ್ವಹಿಸುವುದರಲ್ಲಿ ಪ್ರಖ್ಯಾತರಾಗಿದ್ದಾರೆ. ಇದು ಭಗವಂತನು ಅವರಿಗೆ ಕರುಣಿಸಿದ ಕೃಪಾವಿಶೇಷವೆನ್ನಬಹುದು.

ಗುಬ್ಬಿ ನಾಟಕಮಂಡಲಿಯಲ್ಲಿ ಮೊದಲಿನಿಂದಲೂ ಗಣ್ಯರಾದ ನಟನಟಿಯರು ಇರುವುದು ಒಂದು ಭಾಗ್ಯ ವಿಶೇಷವೇ ಸರಿ. ನಿಮ್ಮ ಸನ್ಮಾನ ಪತ್ರಿಕೆಯಲ್ಲಿ ತಿಳಿಸಿರುವಂತೆ ಶ್ರೀ ಸಿ. ಬಿ. ಮಲ್ಲಪ್ಪನವರು, ಶ್ರೀ ಎಂ. ಎ. ಗಂಗಾಧರರಾಯರು, ಶ್ರೀಮತಿ ಬಿ. ಜಯಮ್ಮನವರು, ದಿವಂಗತೆ ಜಿ. ಸುಂದರಮ್ಮನವರು ಮೊದಲಾದವರು ಈ ಮಂಡಲಿಯ ಕೀರ್ತಿಗೌರವಗಳನ್ನು ಹೆಚ್ಚಿಸಿದ್ದಾರೆಂದು ನಾವು ಭಾವಿಸಬಹುದು. ಈ ಮಂಡಲಿಯ ಆಡಳಿತ ಕಾರ್ಯಗಳನ್ನು ದಕ್ಷತೆಯಿಂದ ನಿರ್ವಹಿಸಿದ ಇಂದು ಶಾಸನ ಸಭಾಸದಸ್ಯರಾಗಿರುವ ನಾಟ್ಯಕಲಾವಿಶಾರದ ಶ್ರೀ ಎಂ. ಸಿ. ಮಹದೇವಸ್ವಾಮಿಯವರು ಮತ್ತು ಬಹಳ ಕಾಲದಿಂದಲೂ ಈ ಮಂಡಲಿಯ ಸೇವೆಯಲ್ಲಿ ನಿರತರಾಗಿರುವ ಶ್ರೀ ಎ. ಪಿ. ನರಸಿಂಹಮೂರ್ತಿಯವರು ಈ ಸಮಯದಲ್ಲಿ ನಮ್ಮ ಸ್ಮರಣೆಗೆ ಅರ್ಹರಾಗಿದ್ದಾರೆ. ಗುಬ್ಬಿ ನಾಟಕ ಮಂಡಲಿಯವರು ಕಾಲೋಚಿತವಾಗಿ ಚಲನಚಿತ್ರ ಕೈಗಾರಿಕೆಗೂ ಪ್ರವೇಶಿಸಿ ಸುಭದ್ರಾ. ಸದಾರಮೆ, ಹೇಮರೆಡ್ಡಿ ಮಲ್ಲಮ್ಮ. ಗುಣಸಾಗರಿ. ಬೇಡರ ಕಣ್ಣಪ್ಪ ಮೊದಲಾದ ಕನ್ನಡ ಚಿತ್ರಗಳನ್ನು ತಯಾರಿಸಿರುವುದರ ಮೂಲಕವಾಗಿಯೂ ಕನ್ನಡನಾಡು ನುಡಿಗಳಿಗೆ ಹೆಚ್ಚಿನ ಸೇವೆಯನ್ನು ಸಲ್ಲಿಸಿರುತ್ತಾರೆ. ಈ ಮಂಡಲಿಯ ಮಾಲೀಕರಾದ ನಾಟಕರತ್ನ ಶ್ರೀ ವೀರಣ್ಣನವರು ಅನೇಕ ಧರ್ಮಸಂಸ್ಥೆಗಳಿಗೆ ಉದಾರವಾಗಿ ದ್ರವ್ಯಸಹಾಯ ಮಾಡಿರುತ್ತಾರೆ. ತಮಿಳು. ತೆಲುಗು ದೇಶಗಳಲ್ಲೂ ಸಂಚರಿಸಿ ಅಲ್ಲಿಯೂ ಕನ್ನಡಿಗರ ಪ್ರತಿಭೆಯನ್ನು ಪ್ರದರ್ಶಿಸಿರುತ್ತಾರೆ. ಪ್ರಕೃತ ಮಂಡಲಿಯವರು ಈ ದಿನದಿಂದ ರಂಗಭೂಮಿಯ ಮೇಲೆ ಪ್ರದರ್ಶಿಸಲಿರುವ "ದಶಾವತಾರ" ನಾಟಕವು ನಾಡಿನ ಜನರ ಮನಸ್ಸನ್ನು ತನ್ನ ಕಡೆಗೆ ಸೆಳೆದಿದೆ.

ನಾಟಕರತ್ನ ಶ್ರೀ ವೀರಣ್ಣನವರು ಭಾರತ ರಾಷ್ಟ್ರಾಧ್ಯಕ್ಷರಿಂದ ಸನ್ಮಾನಿತರಾಗಿ ಅಪೂರ್ವವಾದ ಕೀರ್ತಿಗೌರವಗಳಿಂದ ಕೂಡಿರುತ್ತಾರೆ ಮತ್ತು ಶ್ರೀ ವೀರಣ್ಣನವರಿಗೆ ಬಂದ ಈ ಗೌರವವು ಕನ್ನಡ ರಂಗಭೂಮಿಗೆ ಪ್ರಾಪ್ತವಾದ ಗೌರವವೆಂದು ನಾವು ಭಾವಿಸುತ್ತೇವೆ. ಈ ಮಹೋತ್ಸವದ ಸನ್ನಿವೇಶದಲ್ಲಿ ಮಂಡಲಿಯ ನಟನಟೀ ವರ್ಗದವರೂ. ಆಡಳಿತ ವರ್ಗದವರೂ ಶ್ರೀ ವೀರಣ್ಣನವರಿಗೆ ಗಂಗಾವತರಣ ಚಿತ್ರವುಳ್ಳ ರಜತ ಕಲಾಕೃತಿಯನ್ನು ಕೊಡಬೇಕೆಂದು ಬಯಸಿರುವುದು ಕೂಡ ಯೋಗ್ಯವಾಗಿಯೇ ಇದೆ. ಇಂತಹ ಗೌರವಕ್ಕೆ ನಾಟಕರತ್ನ ವೀರಣ್ಣನವರು ಸಂಪೂರ್ಣವಾಗಿ ಅರ್ಹರಾಗಿದ್ದಾರೆ. ಈ ಕಾರ್ಯವನ್ನು ನಾವು ಸಂತೋಷವಾಗಿ ನೆರವೇರಿಸುತ್ತೇವೆ. ಕರುಣಾಳುವಾದ ಪರಮೇಶ್ವರನೂ, ಕಲಾಭಿಮಾನ ದೇವತೆಯೂ ನಾಟಕರತ್ನ ಶ್ರೀ ವೀರಣ್ಣನವರನ್ನೂ, ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ನಾಟಕಮಂಡಲಿಯವರನ್ನೂ ಅನುಗ್ರಹಿಸಲಿ. ಅವರ ಪ್ರಯತ್ನಗಳು ಇತ್ತೋಪ್ಯತಿಶಯವಾಗಿ ಅಭಿವೃದ್ಧಿ ಹೊಂದಲಿ ಎಂದು ನಾವು ಹಾರೈಸುತ್ತೇವೆ.

॥ ಸತ್ಯಂ—ಶಿವಂ—ಸುಂದರಂ ॥

ವಾಗುವುದರಲ್ಲಿತ್ತು. ಚಿನ್ನದ ಹಬ್ಬದ ಸಡಗರದಲ್ಲಿ 'ಕುರುಕ್ಷೇತ್ರ'ದ ಪ್ರದರ್ಶಾನರಂಭ. ದಿವಾನ್ ಮಿರ್ಜಾ ಸಾಹೇಬರು ಮುಖ್ಯ ಅತಿಥಿ. 'ಕುರುಕ್ಷೇತ್ರ'ದ ಕಲ್ಪನೆಯನ್ನು ಆ ನೂರಡಿ ಅಗಲದ ಅದಕ್ಕೂ ಹೆಚ್ಚು ಉದ್ದದ ರಂಗವೇದಿಕೆಯ ಮೇಲೆ ಕಲಾತ್ಮಕವಾಗಿ ಮೂಡಿಸಿತು ಕಂಪನಿ. ಸಮ್ಮ ರಂಗಪ್ರಯೋಗಗಳಲ್ಲೇ ಇವರೆಗೆ ಅಂಥದನ್ನು ಕಂಡಿರಲಿಲ್ಲ ಜನ. ನಾಡ ಒಳ ಹೊರಗಿನ ಅಭಿಮಾನಿಗಳಂತೂ ವೀರಣ್ಣನವರಿಗೆ ಚಿನ್ನ-ಬೆಳ್ಳಿಗಳ ಕಾಣಿಕೆಯಿತ್ತು ಕೊಂಡಾಡಿದರು. ನಾಲ್ವಡಿ ಕೃಷ್ಣರಾಜ ಪ್ರಭುಗಳ ಅಮೂಲ್ಯಕೊಡುಗೆಯೂ ಸಂದಿತು. ಅಲ್ಲಿಯವರೆಗೂ ವಾರಕ್ಕೆ ಮೂರು ದಿನ ಮಾತ್ರ ನಾಟಕವಾಡುತ್ತಿದ್ದುದು ಪದ್ಧತಿ. 'ಕುರುಕ್ಷೇತ್ರ'ದಿಂದ ಪ್ರತಿದಿನ ಸಂಜೆ ನಾಟಕಗಳನ್ನಾಡಲು ಪ್ರಾರಂಭಿಸಿದ್ದೇ ಗುಬ್ಬಿ ಕಂಪನಿ. ನಾಟಕದ ಪ್ರತಿಯೊಂದು ಅಂಶವೂ ಶ್ರೇಷ್ಠ ಸುಂದರವಾಗಿ ನಿಂತು ಗುಬ್ಬಿ ಕಂಪನಿಗೆ 'ಸ್ವರ್ಣಯುಗ'ದ ಆರಂಭವುಂಟು ಮಾಡಿತು.

ಇದಾದ ಹೊಸತರಲ್ಲೇ ಮತ್ತೆ ಚಿತ್ರರಂಗದತ್ತ ಅವರ ಮನಸ್ಸನ್ನು ಒಲಿಸಿದವರು ಕೊಯಮುತ್ತೂರಿನ ಶಕುಂತಲಾ ಪಿಕ್ಚರ್ಸ್ ಮಾಲಿಕರಾದ ಷಣ್ಮುಖ ಚೆಟ್ಟಿಯಾರ್. 'ಸದಾರಮೆ' ಚಿತ್ರ ತಯಾರಿಸಿ ಕೊಡುವುದು ಇವರ ಕೆಲಸ- ನಲವತ್ತು ಸಾವಿರ ರೂಪಾಯಿಗಳನ್ನು ಕೊಡುವುದು ಅವರ ಜವಾಬ್ದಾರಿ. ಒಪ್ಪಂದವಾಯಿತು.

ಚಿತ್ರ ತಯಾರಿಕೆ ಮುಂಬಯಿಯಲ್ಲಿ. ಅಂದಾಗ ಅಲ್ಲಿ ನಾಟಕಗಳನ್ನು ಪ್ರದರ್ಶಿಸದೆ ಇರಲಾದೀತೆ? ಸಾವಿರಾರು ಜನ ಕನ್ನಡಿಗರಿಗೆ ತಮ್ಮ ಕಲೆಯ ಪ್ರದರ್ಶನ ನೀಡಬೇಕೆಂದು ಯೋಚಿಸಿ ವೀರಣ್ಣ ಬಾಲಿವಾಲ ಥಿಯೇಟರನ್ನು ಬಾಡಿಗೆ ಪಡೆದು ತಿಂಗಳು ಕಾಲ ಕಂಪನಿಯ ಶ್ರೇಷ್ಠ ನಾಟಕಗಳನ್ನು ನೀಡಿದರು. ಚಿತ್ರ ನಿರ್ಮಾಣ ಮುಗಿದದ್ದು ನಾಲ್ಕೈದು ತಿಂಗಳಲ್ಲಿ.

ಮುಂಬಯಿಯಿಂದ ವಿಜಾಪುರಕ್ಕೆ ಬಂದು ಮುಟ್ಟಿತು ಕಂಪನಿ. ಅಲ್ಲಿಂದ ಬಾಗಲಕೋಟೆ ಹುಬ್ಬಳ್ಳಿ. 'ಕುರುಕ್ಷೇತ್ರ'



'ದಶಾವತಾರ'

ನೋಡಲೆಂದೇ ಕರ್ನಾಟಕದ ಕುಲಪು ರೋಹಿತ ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು ಬಂದರು. ಜತೆಗೆ ಇನ್ನೊಬ್ಬ ಹಿರಿಯ ಗರೂಡ ಸದಾಶಿವರಾಯರು. ಅವರಂತೂ ತಮ್ಮ ಮೆಚ್ಚುಗೆಯನ್ನು "ಇಂಥ ನಾಟಕ ನಾವು ಕಂಡೇ ಇಲ್ಲ. ಇಂದು ಗುಬ್ಬಿಯು ಗರುಡನ ಮೇಲೆ ಹಾರಿತು" ಎಂಬೆರಡೇ ಸಾಲುಗಳಲ್ಲಿ ಅರ್ಥಪೂರ್ಣವಾಗಿ ಸೂಚಿಸಿದರು.

ಗುಬ್ಬಿ ಕಂಪನಿಯ ರಂಗಯಾತ್ರೆ ಕೃಷ್ಣಾನದಿಯ ದಿಕ್ಕು ಹಿಡಿದು ಹೊರಟಿತು. ಆಂಧ್ರ ಪ್ರದೇಶದಲ್ಲಂತೂ ಈ ನಾಟಕ ನೋಡಲು ತೆಲುಗು ಬಾಂಧವರ ಜಾತ್ರೆ. ಹೈದರಾಬಾದಿನಲ್ಲಿ ಸತತ ಐದು ತಿಂಗಳು ಗುಬ್ಬಿ ಕಂಪನಿಯ ನಾಟಕಗಳು.

ಹೈದರಾಬಾದಿನಿಂದ ಕಲಬುರ್ಗಿಗೆ ಹೊರಟ ಪರಿಯನ್ನು ವೀರಣ್ಣ ವರ್ಣಿಸುತ್ತಾರೆ.

"ಮೊದಲಬಾರಿಗೆ ಸ್ಪೆಷಲ್ ಟ್ರೇನ್ ಏರ್ಪಾಡು ಮಾಡಲಾಯಿತು. ಆಗ ಸಂಘದಲ್ಲಿ ನೂರೈವತ್ತು ಜನರಿದ್ದರು. ಇಪ್ಪತ್ತೆರಡು ಸಂಸಾರಗಳಿದ್ದವು. ಈ ಸಂಸಾರಗಳವರು ತಮ್ಮ ಸಂಬಂಧಿಗಳನ್ನೂ ಸ್ಪೆಷಲ್ ಟ್ರೇನಿನಲ್ಲಿ ಕರೆತಂದಿದ್ದರು. ನಾಟಕಕ್ಕೆ ಅವಶ್ಯವಿರುವ ಸಲಕರಣೆಗಳಿಗೆ ಎಂಟು ಬೋಗಿಗಳು. ನಾನಾ ಪ್ರಾಣಿಗಳು ಬೇರೆ".

ಕಲಬುರ್ಗಿಯಲ್ಲಿದ್ದಾಗಲೇ 'ಕುರುಕ್ಷೇತ್ರ' ನಾಟಕಕ್ಕಾಗಿಯೆ 'ತಾರಾ' ಎಂಬ ಗಳ ತಿಂಗಳ ಆನೆಯನ್ನು ಮೈಸೂರು ಮಹಾರಾಜರು ಆಶೀರ್ವಾದದೊಂದಿಗೆ ಕಳಿಸಿಕೊಟ್ಟರು.

"ನಂತರ ನಮ್ಮ ಸಂಘದಲ್ಲಿ ಒಂದು ಆನೆ, ಎರಡು ಅಚ್ಚಬಿಳಿಯ ಕುದುರೆ



ಬಾಳ ಸಂಜೆಯಲ್ಲಿ....

ಗಳು, ಎರಡು ಜಿಂಕೆ, ನವಿಲು-ಪಾರಿವಾಳದ ಗುಂಪು, ಮೊಲಗಳು ಇದ್ದವು. ನಾಟಕವನ್ನು ನೋಡಿ ಜನ ಇದೇನು ಸರ್ಕಸ್ಸೇ, ನಾಟಕವೆ ? ಎಂದುಕೊಳ್ಳುತ್ತಿದ್ದರು" ಎಂದು ಬರೆದಿದ್ದಾರೆ ವೀರಣ್ಣ.

ಮತ್ತೆ ಸಿನಿಮಾ ಸೆಳವು. 'ಸುಭದ್ರಾ' ಚಿತ್ರ ನಿರ್ಮಾಣದ ಜವಾಬ್ದಾರಿ ಹೊತ್ತುಕೊಂಡರು. ಅದಾದ ನಂತರ 'ಜೀವನ ನಾಟಕ' ಸಾಮಾಜಿಕ ಚಿತ್ರ. ಅದಕ್ಕೆ ಪ್ರೇರಕರಾದವರು ಅನಕೃ. ಚಿತ್ರಕಥೆ- ಸಂಭಾಷಣೆಗಳೂ ಅವರವೆ.

ರಂಭೂಮಿಯತ್ತ ಹೆಚ್ಚು ಲಕ್ಷ್ಯ ಪೂರೈಸಲಾಗದೆ ಚಿತ್ರನಿರ್ಮಾಣದಲ್ಲೇ ತೊಡಗಿದ ವೀರಣ್ಣನವರು 'ಹೇಮರಡ್ಡಿ ಮಲ್ಲಮ್ಮ' ನನ್ನು ಮುಗಿಸಿ ರಜತ ಪರದೆಗೆ ತರಬೇಕಾದರೆ ಸಾಕುಬೇಕಾಯಿತು.. ಪಾಲುದಾರರ ಪರದೇಶಯಾನ, ತಂದೆ-ತಾಯಿಯ ನಿಧನ,



ಮದ್ರಾಸು ಚಿತ್ರಬ್ರಹ್ಮರಿಗೆ ಈ ಕನ್ನಡ ಪ್ರೊಡ್ಯೂಸರ್ ಬಗೆಗಿದ್ದ ತಾತ್ಸಾರ. ಇನ್ನೇನು ಚಿತ್ರ ಬಿಡುಗಡೆ ಆಗುವ ಹೊತ್ತಿಗೆ ಪಾಲುದಾರ ಧುತ್ತೆಂದು ಬಂದು ಪಾಲು ಕೇಳಿದರು.

ಇಷ್ಟೆಲ್ಲದರ ನಂತರವೂ 'ಹೇಮರಡ್ಡಿ ಮಲ್ಲಮ್ಮ' ಹಣಗಳಿಕೆಯಲ್ಲಿ ಹೆಸರಾದಳು.

ಕಂಪನಿ ಸ್ಥಾಪನೆಯಾಗಿ ಅರುವತ್ತು ವರ್ಷಗಳು ಸಮೀಪಿಸುತ್ತಿದ್ದವು. ಮತ್ತೊಂದು ರಂಗಮಂದಿರದ ನಿರ್ಮಾಣ (ಗಾಂಧಿ ನಗರದಲ್ಲಿ ನಗರಸಭೆ ನೀಡಿದ ನಿವೇಶನದಲ್ಲಿ)ಕ್ಕೆ ಕೈಹಾಕಿದರು. ವಜ್ರಮಹೋತ್ಸವದ ಸಿದ್ಧತೆಗೆ ನಿಂತವರು ಎಂ.ಸಿ. ಮಹದೇವಸ್ವಾಮಿಗಳು. ಹುಣಸೂರು ಕೃಷ್ಣಮೂರ್ತಿಗಳಿಂದ ಹೇಳಿ ಬರೆಯಿಸಿದ 'ರಾಜಾ ಗೋಪಿಚಂದ್'ದ ತಾಲೀಮಿಗಾಗಿ ಪುರಭವನದ ಪಕ್ಕದಲ್ಲಿ ತಾತ್ಕಾಲಿಕ ರಂಗಮಂದಿರ ತಲೆಯೆತ್ತಿತು. ೧೯೪೪ರ ಜುಲೈ ೨೬ರಂದು ವಜ್ರಮಹೋತ್ಸವದ ಪ್ರಾರಂಭ. ಪ್ರಭು ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರಿಂದ ಎಂಟು ದಿನಗಳ ಕಾಲ ಅದ್ದೂರಿ ಸಮಾರಂಭ.

ತಾಯಿ ವೀರಮ್ಮ ಇಂಪಾಗಿ ಹಾಡುತ್ತಿದ್ದ ಜಾನಪದ ಗೀತೆಯೊಂದು ವೀರಣ್ಣನವರಿಗೆ 'ಗುಣಸಾಗರಿ' ಚಿತ್ರ ನಿರ್ಮಿಸಲು ಪ್ರೇರಣೆನೀಡಿತು. ಹಿರಿಯ ಮಗ ಚೆನ್ನಬಸಪ್ಪ ಮತ್ತು ಸೋದರಳಿಯನಿಗೆ ಕಂಪನಿಯ ಸೂತ್ರ ಕೊಟ್ಟು ಮದ್ರಾಸಿಗೆ ನಡೆದರು. ಮೂರು ವರ್ಷಗಳ ಸೆಣಸಾಟದ ನಂತರ 'ಗುಣ ಸಾಗರಿ' ತೆರೆಗೆ ಬಂತು.

ಬಳ್ಳಾರಿ ಕ್ಯಾಂಪಿನಲ್ಲಿ 'ಸದಾರಮೆ' ನಾಟಕ ವೀರಣ್ಣ ಮತ್ತೆ ಕಳ್ಳ- ಆದಿಮೂರ್ತಿ- ಸಾಬಿ. ಜನರಿಗೆ ಸಂತಸಸ್ನಾನ ಮಾಡಿಸುತ್ತಿದ್ದ ಹೊತ್ತಿನಲ್ಲೇ ವೀರಣ್ಣನವರಿಗೆ ಪತ್ನಿ ಸುಂದರಮ್ಮ-ನಲವತ್ತು ವರ್ಷಗಳ ಸಂಗಾತಿ- ವಿಧಿವಶರಾದ ಸುದ್ದಿ.

ವೀರಣ್ಣನವರ

ಜೀವನವೆ ಹಾಗೆ. ಹಲವು ಟ್ರಾನ್ಸ್‌ಫರ್ ಸೀನುಗಳ ದೀರ್ಘ ನಾಟಕ- ಅದು. ಸಂತಸದ ಹಿಂದೊಂದು ಎದೆಗೆಡಿಸುವ ಪ್ರಸಂಗ ಅದನ್ನು ನಿವಾರಿಸುವ ಹೊತ್ತಿಗೊಂದು ಸಕ್ಕರೆಯಂಥ ಸುದ್ದಿ. ೧೯೫೫ರ ಸಾಲಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ವೀರಣ್ಣನವರಿಗೆ.

ಬಹುದಿನಗಳ ಅವರ ಬೇಡಿಕೆಯಂತೆ ಬಿ. ಪುಟ್ಟಸ್ವಾಮಯ್ಯನವರು 'ದಶಾವತಾರ' ರೂಪಿಸಿಕೊಟ್ಟರು. ಅವರ ಆತ್ಮಬಲದಿಂದ ಮೂಡಿಬಂದ ಈ ಅಮೋಘ ಕೃತಿಯನ್ನು ಅಷ್ಟೇ ಭಕ್ತಿ- ಶ್ರದ್ಧೆಯಿಂದ ರಂಗಕ್ಕೇರಿಸಿದರು ವೀರಣ್ಣ. ಭವ್ಯತೆಗೆ ಹೆಸರಾಗಿದ್ದ ಅವರು 'ದಶಾವತಾರ'ದಲ್ಲೂ ಅದನ್ನು ಮೆರೆದರು. ಹತ್ತು ಅವತಾರಗಳ ಕಥೆಯೆಂದ ಮೇಲೆ ಕೇಳಬೇಕೆ? ಪಿ. ಕಾಳಿಂಗರಾಯರ ರಂಗ ಸಂಗೀತ ಬೇರೆ. ಒಂದೊಂದವತಾರದಲ್ಲೂ ಅಭಿನಯಿಸಿದ ಆಯಾ ಕಲಾವಿದರು ನೋಡುಗರ ದೃಷ್ಟಿಯಲ್ಲಿ ಅವತಾರ ಪುರುಷರೇ ಆಗಿನಿಲ್ಲುವುದೆಂದರೆ!

'ಕುಮಾರ ರಾಮು' ನಂಥ ಅಪರಿಪಕ್ವ ಪ್ರಯೋಗದಿಂದ ಹೆಜ್ಜೆಯಿಟ್ಟು 'ದಶಾವತಾರ'ದ ವರೆಗೆ ದಾಪುಗಾಲಿಕ್ಕಿ ಬಂದ ಗುಬ್ಬಿ ಕಂಪನಿ ಹೆಮ್ಮರವಾಗಿ ಬೆಳೆದು ನಿಂತದ್ದು ಆಗಲೆ. ಅದರೊಳಗೆಂಥೆಂಥ ಹೂಗಳು! ಅವೆಲ್ಲ ಕಲಾರತ್ನಗಳು! ಆ ನೂರು ರುಚಿಯ ಹಣ್ಣುಗಳು- ಅವಿಸ್ಮರಣೀಯ ಪ್ರಯೋಗಗಳು. ಆ ಮರದಲ್ಲಿ ಕೊಂಬೆ ಕೊಂಬೆಗೆ ಕುಳಿತ ಕೋಗಿಲೆ- ಗಿಳಿ- ರಪುನ ಪಕ್ಷಿಗಳು- ಆ ಗಾಯಕರು, ನಾಯಕರು. ನೆರಳಲ್ಲಿ ನಿಂತು ನೋಟಕ್ಕೆ ಹಬ್ಬತಂದಂಥ ಜಿಂಕೆ- ಮೊಲಗಳು ಆ ಮಹಾನ್ ಕಲಾವಿದೆಯರು!

ವೀರಣ್ಣ ಹಳೆ



ಬೇರು ಹೊಸ ಚಿಗುರುಗಳು ಕೂಡಿದ ಸೊಗಸು ಮರವನ್ನಾಗಿ ಬೆಳೆಸಿದರು ಕಂಪನಿಯನ್ನು. ಕಲೆಯ ಕಾಯಕದಲ್ಲಿ ಎಂಥ ತ್ಯಾಗಕ್ಕೂ, ಎಂಥ ಸಹಾಯಕ್ಕೂ ಸಿದ್ಧವಾಗಬೇಕಾಗುತ್ತದೆಂಬುದನ್ನು ತೋರಿಸಿಕೊಟ್ಟರು. ಹಣವನ್ನು ಗಳಿಸಿದರು. ಸಮಾಜೋದ್ಧಾರ ಕಾರ್ಯಗಳಿಗಾಗಿ ದಾನವಾಗಿಯೂ ಇತ್ತರು. ವಿದ್ಯೆ ಪಡೆಯುವ ಭಾಗ್ಯದಿಂದ ವಂಚಿತರಾಗಿ ಪರಿತಪ್ಪಿಸಿದ್ದ ಅವರು ವಿದ್ಯೆಗಾಗಿ ಸಹಾಯ ಕೇಳಿದವರಿಗೆ ಕೈತುಂಬಿಕೊಟ್ಟರು, 'ಕಲಿತು ದೊಡ್ಡವನಾಗು' ಮನತುಂಬಿ ಹರಸಿದರು. ಮಕ್ಕಳನ್ನು ಮೊಮ್ಮಕ್ಕಳನ್ನು ರಂಗ ಭೂಮಿಯ ಉನ್ನತಜ್ಞಾನ ಪಡೆಯಲು ರಾಷ್ಟ್ರೀಯ ನಾಟಕ ಶಾಲೆಗೂ ಸೇರಿಸಿದರು.

ಇಂದಿನ ಚಿತ್ರರಂಗದ ಶ್ರೇಷ್ಠರೆಲ್ಲ ಅಂದು ವೀರಣ್ಣನವರ ಹುಡುಗರು. ಇವ ನಮ್ಮವ ನೆಂಬ ಅಭಿಮಾನ ಅವರಿಗೆ ಆ ಹುಡುಗರು ಬೆಳೆದು ನಿಂತದ್ದು ಕಂಡಾಗ ಉಕ್ಕಿ ಬರುತ್ತಿತ್ತು.

ಪೌರಾಣಿಕ ನಾಟಕಗಳ ಪ್ರಯೋಗ ಪರಂಪರೆಯನ್ನೇ ಪ್ರಾರಂಭಿಸಿದರು ವೀರಣ್ಣ. 'ಲವ ಕುಶ' ಆ ಪರಂಪರೆಯಲ್ಲಿ ಅವರ ಕೊನೆಯ ಸಾಹಸ. ಭಕ್ತಿಪ್ರಧಾನ, ಸಾಮಾಜಿಕ, ರಾಷ್ಟ್ರ ಭಕ್ತಿ ಪ್ರೇರಕ ವಸ್ತುಗಳ ನಾಟಕಗಳನ್ನೂ ಅದೇ ಅದ್ದೂರಿಯಲ್ಲಿ ನಿರ್ಮಿಸಿದರು. ಚಿತ್ರಗಳನ್ನೂ ಕೊಟ್ಟರು, ಸ್ಟೂಡಿಯೋ ಕಟ್ಟಿದರು. ಚಿತ್ರರಂಗ-ರಂಗಭೂಮಿಗೆಂದು ಕಲಾವಿದರ ಕುಲವನ್ನೇ ಸೃಷ್ಟಿಸಿದರು.

ಬಡವ ಬಲ್ಲಿದನೂ ಆಗಬಲ್ಲ. ಓದದ ಹುಡುಗ ಓದಿವರಿಗೆ ಪ್ರೌಢಪ್ರಬಂಧದ ವಸ್ತುವೂ ಆಗಬಲ್ಲ. ಅರಮನೆ, ಗುರುಮನೆಗಳ ಕೀರ್ತಿಗೂ ಪಾತ್ರನಾಗಬಲ್ಲ. ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ನೀಡಿತು. ಕರ್ನಾಟಕ ಸರಕಾರ ಅವರ ಕಂಪನಿ ಕುರಿತು ಕಿರುಚಿತ್ರ ನಿರ್ಮಿಸಿತು. ಇಂಗ್ಲಿಷ್- ಕನ್ನಡಗಳಲ್ಲಿ ಅವರ ಸಾಹಸದ ಕಥೆ ಪುಸ್ತಕರೂಪದಲ್ಲಿ ಬಂತು.

ಈ ಹಣ್ಣಾದ ಜೀವದೆದುರೆ ಕಲೆಯ ಹೊಸ ಹೂಗಳು ಕೆಲವು ಮುರುಟಿ ಹೋದವು. (ಮಗಳು ನಡೆಯುವ ಶಕ್ತಿ ಕಳೆದುಕೊಂಡಳು- ಮಗ, ಅಳಿಯ ಅಪಘಾತದಲ್ಲಿ ಮಡಿದರು). ದುಃಖವನ್ನೂ- ಸುಖವನ್ನೂ ಸಮಾನವಾಗಿ ಸ್ವೀಕರಿಸಿದ ವೀರಣ್ಣನವರ ಬದುಕೊಂದು ಮಹಾಸಂಪುಟ. •

(ಇದರೊಂದಿಗೆ ಪ್ರಕಟವಾದ ಚಿತ್ರಗಳನ್ನೊದಗಿಸಿದವರು ವೀರಣ್ಣನವರ ಚಿರಂಜೀವರಾದ ಜಿ.ವಿ. ಶಿವಾನಂದ್)



Printed and Published by B.S.SAVANOOR on behalf of Loka Shikshana Trust at 'Samyukta Karnataka Press', Koppikar Road, Hubli-580 020. (Phone: 64303); No.2, Residency Road, Bangalore-560 025 (Phone: 213265).

Managing Editor: K.SHAMARAO

Registered with the Registrar of Newspapers for India under No.3633/57.

# WORRIED ABOUT HAIR LOSS?



INTRODUCING

## KEPREE SCALP STIMULANT

THE ORIGINAL HERBAL HAIROIL
FROM KERALA.

★ Nourishes & Stimulates hair growth
★ Stops dandruff, hairloss and premature baldness.
★ Made from pure & genuine medicinal herbs.
★ Prepared meticulously as per the ancient scriptures.




**Now available in all leading stores in leakproof aluminium containers**

**CONTENTS 100 ML**
**Maximum Retail Price Rs. 195/- inclusive of all taxes.**





**MONEY BACK GUARANTEE**

**Kepree Marketing (P) Ltd.**
**(Affiliated to Kepree Group Companies Ltd., U.S.A)**
"Aqua Forte", No. 10, Ground Floor,
No. 12, Kensington Road,
Bangalore-560 042.

**Distributors: RACHANA DISTRIBUTORS**
**Lamington Road. Hubli-20. Ph: 65550.**

